# ಕರ್‌ಕರ್ ಮುಂಡರ ಸಾಮಾಜಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕ

ಮಂಜಪ್ಪ ಹೆಚ್ ಬಿ

ಮಾರ್ಗದರ್ಶಕರು

ಡಾ. ಕೆ ಎಂ ಮೇತ್ರಿ

ಪ್ರಾಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬


೨೦೧೭

# ಕರ್‌ಕರ್ ಮುಂಡರ ಸಾಮಾಜಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕ

**ಮಂಜಪ್ಪ ಹೆಚ್ ಬಿ**



ಮಾರ್ಗದರ್ಶಕರು

**ಡಾ. ಕೆ ಎಂ ಮೇತ್ರಿ**

**ಪ್ರಾಧ್ಯಾಪಕರು**



**ಸಮಾಜ ವಿಜ್ಞಾನಗಳ ನಿಕಾಯ**

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬





# ಪ್ರಮಾಣ ಪತ್ರ

**ಕರ್‌ಕರ್ ಮುಂಡರ ಸಾಮಾಜಿಕ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ.ಕೆ.ಎಂ.ಮೇತ್ರಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ ಪದವಿಗಾಗಿ ಸಮಾಜ ವಿಜ್ಞಾನ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಮಂಜಪ್ಪ.ಹೆಚ್.ಬಿ**

ಸ್ಥಳ : ವಿದ್ಯಾರಣ್ಯ

ದಿನಾಂಕ :

# ಮಾರ್ಗದರ್ಶಕರ ದೃಢೀಕರಣ ಪತ್ರ

ಮಂಜಪ್ಪ ಹೆಚ್.ಬಿ ಇವರು **ಕರ್‌ಕರ್ ಮುಂಡರ ಸಾಮಾಜಿಕ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ :

28.7.17

**ಡಾ.ಕೆ.ಎಂ.ಮೇತ್ರಿ**

ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

## ಪರಿವಿಡಿ

## ಅಧ್ಯಾಯ ಒಂದು

# ಸಂಶೋಧನ ವಿಧಾನ

### ಪ್ರವೇಶ

ಭಾರತೀಯ ಸಮಾಜ ಬಹುರೂಪತೆಯಿಂದ ಕೂಡಿರುವಂತಹದ್ದು, ಬಹುರೂಪತೆಯನ್ನು ಜಾತಿ, ಬುಡಕಟ್ಟು, ಭಾಷೆ, ಜನಾಂಗ, ಉಡುಗೆ-ತೊಡುಗೆ, ಆಹಾರ ಕ್ರಮ ಇತ್ಯಾದಿಗಳಲ್ಲಿ ಕಾಣಬಹುದಾಗಿದೆ. ಕಾಶ್ಮೀರದಿಂದ ಕನ್ಯಾಕುಮಾರಿ, ಗುಜರಾತಿನಿಂದ ಅರುಣಾಚಲ ಪ್ರದೇಶದವರೆಗೆ ಇದರ ವಿಸ್ತಾರವನ್ನು ಗುರುತಿಸಬಹುದಾಗಿದೆ. ಭಾರತ ಸ್ವಾತಂತ್ರ್ಯ ಪೂರ್ವದಲ್ಲಿ ಬಾಂಗ್ಲಾದೇಶ, ಪಾಕಿಸ್ತಾನ, ಅಫಘಾನಿಸ್ತಾನಗಳನ್ನೊಳಗೊಂಡ ವಿಶಾಲವಾದ ಉಪಖಂಡವಾಗಿತ್ತು. ಭಾರತದ ನೆಲವನ್ನು ಯೂರೋಪಿಯನ್ನರು ವ್ಯಾಪಾರದ ಉದ್ದೇಶದಿಂದ ಪ್ರವೇಶ ಮಾಡಿದರು ಎಂಬುದು ತಿಳಿದಿರುವ ಸಂಗತಿಯಾಗಿದೆ. ಕಾಲಚಕ್ರ ಉರುಳಿದಂತೆ ಇಲ್ಲಿನ ಒಗ್ಗಟ್ಟಿಲ್ಲದ ಸಣ್ಣಸಣ್ಣ ರಾಜ್ಯಗಳು ಇವರ ರಾಜಕೀಯಾಸಕ್ತಿಗೆ ಕಾರಣವಾಯಿತು. ಇವರ ವಸಹಾತುಶಾಯಿ ನೀತಿ ವಿಸ್ತಾರವಾಗಲು ತೊಡಕಾಗಿ ಪರಿಣಮಿಸಿದ್ದು ಇಲ್ಲಿನ ಬಹುರೂಪ ಸಂಸ್ಕೃತಿ.

ವರ್ಗಸಮಾಜದಿಂದ ಬಂದ ಪಾಶ್ಚಿಮಾತ್ಯರು ವರ್ಣನಂತರದ ಜಾತಿ ಸಮಾಜವನ್ನು ಅರ್ಥೈಸಿಕೊಳ್ಳುವಲ್ಲಿ ವಿಫಲರಾದರು. ಇದರ ಪರಿಣಾಮವಾಗಿ ಭಾರತೀಯ ವೈವಿಧ್ಯಮಯ ಸಮಾಜವನ್ನು ತಿಳಿಯಲು ವಿವಿಧ ಆಯಾಮಗಳಲ್ಲಿ ಅಧ್ಯಯನ ಆರಂಭಿಸಿದರು. ಇವರ ಉದ್ದೇಶ ಭಾರತೀಯರ ವರ್ತನೆ ತಿಳಿಯುವುದೇ ಆಗಿತ್ತೆ ವಿನಃ ಇವರ ಸಂಸ್ಕೃತಿಯನ್ನು ಮೆಚ್ಚಿಕೊಂಡು ಹೊರಜಗತ್ತಿಗೆ ಅನಾವರಣ ಗೊಳಿಸುವುದಾಗಿರಲ್ಲಿಲ್ಲ. ಇದಕ್ಕೆ ಪೂರಕವಾಗಿ ಅಧ್ಯಯನ ಮಾಡಲು ಆಸಕ್ತರಾದವರು ಮತ್ತು ನಿಯೋಜನೆಗೊಂಡವರು ಪಾದ್ರಿಗಳು, ಅಧಿಕಾರಿಗಳು, ಪೋರ್ಡ್ ಫೌಂಡೇಶನ್ ನಂತಹ ಸಂಸ್ಥೆಗಳ ಪ್ರತಿನಿಧಿಗಳು.

ಭಾರತದಲ್ಲಿ ಏಷ್ಯಾಟಿಕ್ ಸೊಸೈಟಿಯಿಂದ ಮೊದಲುಗೊಂಡ ಅಧ್ಯಯನಗಳು ಎಡ್ಗರ್ಡ್ ಥರ್ಸ್ಟನ್ ಎಂಥೋವನ್, ಮ್ಯಾಕ್ಸ್‌ಮುಲ್ಲರ್, ಎಲ್ವಿನ್, ಇ ಬಿ ಟೇಲರ್, ರ್‍ಯಾಡ್‌ಕ್ಲಿಪ್ ಬ್ರೌನ್ ಮತ್ತು ಇಂಗ್ಲೀಷ್ ಕಲಿತು ಪಾಶ್ಚಿಮಾತ್ಯರಿಂದ ಪ್ರೇರಣೆ ಪಡೆದ ಭಾರತೀಯರಾದ ಎಂ ಎನ್ ಶ್ರೀನಿವಾಸ್, ಹೆಚ್ ವಿ ನಂಜುಂಡಯ್ಯ, ಅನಂತಕೃಷ್ಣ ಅಯ್ಯರ್ ಇತ್ಯಾದಿ ವ್ಯಕ್ತಿಗಳಿಂದ ಮುಂದುವರೆದವು. ಇವರುಗಳು ಭಾರತೀಯ ಭೂಖಂಡದ ವಿವಿಧ ಪ್ರದೇಶ, ವಿಭಿನ್ನ ಜನರ ಕುರಿತಾಗಿ ಅಧ್ಯಯನ ಆರಂಭಿಸಿದರು.

ಭಾರತೀಯ ಸಮಾಜದ ಕುರಿತಾಗಿ ನಡೆದ ಅಧ್ಯಯನಗಳಲ್ಲಿ ಆರಂಭಿಕವಾಗಿ ಸಂರಚನಾತ್ಮಕ ಕಾರ್ಯಾತ್ಮಕ ದೃಷ್ಟಿಕೋನ ಮನ್ನಣೆ ಪಡೆಯಿತು. ೨೦ನೇ ಶತಮಾನದ ಆದಿ ಭಾಗದಲ್ಲಿ ಇಂಗ್ಲೀಷ್ ಶಿಕ್ಷಣ ಮತ್ತು ಸಮಾಜ ವಿಜ್ಞಾನಗಳ ಬೆಳವಣಿಗೆಯಿಂದಾಗಿ ಅನೇಕ ಭಾರತೀಯ ಚಿಂತಕರು ಭಾರತೀಯ ಸಮಾಜದ ಅಧ್ಯಯನ ಆರಂಭಿಸಿದರು. ಅವರಲ್ಲಿ ಭಾರತದ ಸಮಾಜಶಾಸ್ತ್ರ ಪಿತಮಹಾ ಎಂದು ಕರೆಯಲ್ಪಡುವ ಜಿ.ಎಸ್.ಘುರ್ಯೆಯವರು ಹಾಗೂ ಗ್ರಾಮಾಧ್ಯಯನ, ಸಂಸ್ಕೃತಾನುಕರಣೆ ಪರಿಕಲ್ಪನೆ ನೀಡಿದ ಎಂ.ಎನ್.ಶ್ರೀನಿವಾಸ್ ಇವರುಗಳು ಪಾಶ್ಚಿಮಾತ್ಯರ ಚಿಂತನಾ ಕ್ರಮವನ್ನು ಅನುಸರಿಸಿ ಅಧ್ಯಯನ ಮಾಡಿದರು. ಇವರು ಲಭ್ಯವಿರುವ ಪ್ರಾಚೀನ ಸಾಹಿತ್ಯದ ಮೂಲಕ ಭಾರತೀಯ ಸಮಾಜವನ್ನು ತಿಳಿಯುವ ಪ್ರಯತ್ನ ಮಾಡಿದರು. ಇದನ್ನೆ 'ದಿ ಬುಕ್ ವ್ಯೂ' ದೃಷ್ಟಿಕೋನ ಎನ್ನಲಾಗುತ್ತದೆ. ಇದರ ಮುಂದುವರಿದ ಭಾಗವಾಗಿ ಕಾಮ್ಟೆಯವರ ಪ್ರತ್ಯಕ್ಷ ಪ್ರಮಾಣವಾದ ಮತ್ತು ಡರ್ಖೀಂ ಅಧ್ಯಯನ ಕ್ರಮಗಳು ಆರಂಭವಾದವು. ಇದು ಸಾಮಾಜಿಕ ರಚನೆಯನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವುದರ ಜೊತೆಗೆ ಸಮಾಜದ ವಿವಿಧ ಉಪಭಾಗಗಳ ಕಾರ್ಯಚಟುವಟಿಗಳನ್ನು ಗ್ರಹಿಸುವಲ್ಲಿ ಸಫಲವಾಯಿತು. ಕ್ಷೇತ್ರಕಾರ್ಯ ಅಧ್ಯಯನಕ್ಕೂ ಮಹತ್ವ ನೀಡಿದ್ದರಿಂದ ಈ ದೃಷ್ಟಿಕೋನವು ಇಂದಿಗೂ ಭಾರತದಲ್ಲಿ ಪ್ರಾಮುಖ್ಯತೆ ಪಡೆದಿದೆ.

ಬುಕ್‌ವ್ಯೂ ಮತ್ತು ಕಾಮ್ಟೆ, ಡರ್ಖೀಂ ಅವರ ಸಿದ್ಧಾಂತಗಳಿಗೆ ಭಿನ್ನವಾಗಿ ಮತ್ತೊಂದು ಚಿಂತನಾಕ್ರಮ ಭಾರತವನ್ನು ಪ್ರವೇಶ ಮಾಡಿತು. ಅದು ಮಾರ್ಕ್ಸ್‌ವಾದಿ ಚಿಂತನಾ ಕ್ರಮ ಎಂದು ಹೇಳಬಹುದು. ಈ ಕ್ರಮವನ್ನು ಭಾರತದಲ್ಲಿ ವೈಚಾರಿಕ ನೆಲೆಗಟ್ಟಿನಲ್ಲಿ ಸಮಾಜವಾದವನ್ನು ಬಂಗಾಳದ ಸಮಾಜಶಾಸ್ತ್ರಜ್ಞರಾದ ಆರ್.ಕೆ.ಮುಖರ್ಜಿ, ಡಿ.ಪಿ.ಮುಖರ್ಜಿಯವರು ಅನುಸರಿಸಿದರು. ಮಾರ್ಕ್ಸ್‌ನ ಗತಿ ತಾರ್ಕಿಕ ಭೌತಿಕವಾದದ ಹಿನ್ನೆಲೆಯಲ್ಲಿ ಭಾರತೀಯ ಸಮಾಜವನ್ನು ಚಾರಿತ್ರಿಕ ವಿಶ್ಲೇಷಣೆಗೆ ಒಳಪಡಿಸುವ ಪ್ರಯತ್ನದೊಂದಿಗೆ ಆರಂಭವಾಯಿತು. ಮಾರ್ಕ್ಸ್‌ನ ಸಿದ್ಧಾಂತವು, ಭಾರತದಲ್ಲಿ ಕೆಲವೊಂದು ಚಿಂತನಾ ಕ್ರಮಗಳನ್ನು ಟೀಕಿಸಿತು. ಮಾರ್ಕ್ಸ್‌ಮುಲ್ಲರ್ ಭಾರತದ ಭೂಮಿಗೆ ಪ್ರವೇಶ

ಮಾಡದಿದ್ದರೂ ಭಾರತೀಯ ಸಮಾಜವನ್ನು ಅರ್ಥೈಸಿಕೊಳ್ಳಬೇಕಾದರೆ, ಭಾರತೀಯ ಸಾಹಿತ್ಯಿಕ ದರ್ಶಕಗಳಾದ, ರಾಮಾಯಣ, ಮಹಾಭಾರತ, ವೇದೋಪನಿಷತ್ ಇತ್ಯಾದಿಗಳನ್ನು ಅಧ್ಯಯನ ಮಾಡಿದರೆ ಭಾರತೀಯ ಸಮಾಜವನ್ನು ತಿಳಿಯಬಹುದು ಎಂಬ ಅಲೌಖಿಕ ತರ್ಕಗಳನ್ನು ಟೀಕಿಸಿತು. ಇದಕ್ಕೆ ಪ್ರತಿಯಾಗಿ ಭೌತಿಕ ಅಂಶಗಳ ಆಧಾರಿತ ಅಧ್ಯಯನಗಳಿಗೆ ಮಾನ್ಯತೆ ನೀಡಿತು. ಈ ಹಿನ್ನೆಲೆಯ ಡಿ ಪಿ ಮುಖರ್ಜಿಯವರು "ಭಾರತೀಯ ಸಮಾಜವನ್ನು ಅರ್ಥೈಸಿಕೊಳ್ಳಬೇಕಾದರೆ ಸಮಾಜಶಾಸ್ತ್ರಜ್ಞನಾಗಿದ್ದರೆ ಸಾಲದು ಭಾರತೀಯನಾಗಿರಬೇಕು" (ವೆಂಕಟೇಶ್ ಎಚ್ ಎಲ್:೨೦೧೦:೧) ಎಂದು ಹೇಳುವರು. ಇದು ಭಾರತೀಯ ಪ್ರತ್ಯಕ್ಷ ದರ್ಶಿಕ ಭೌತಿಕ ಅಂಶಗಳ ಹಿನ್ನೆಲೆಯಲ್ಲಿ ವಸ್ತುನಿಷ್ಟತೆ ಹೊಂದಿದ ಅಧ್ಯಯನಗಳು ನಡೆಯಲು ಸಹಾಯಕವಾಯಿತು.

ಇಟಲಿ-ಜರ್ಮನಿಯ ಏಕೀಕರಣದ ತರುವಾಯ ಯುರೋಪಿನಲ್ಲಿ ಸರ್ವಾಧಿಕಾರಿಗಳ ಆಳ್ವಿಕೆ ಆರಂಭವಾಯಿತು. ಮಾರ್ಕ್ಸ್‌ನ ಸಿದ್ಧಾಂತ ಇದನ್ನು ಟೀಕಿಸುವಂತಿದ್ದರಿಂದ ಮಾರ್ಕ್ಸ್‌ನ ಚಿಂತನೆಗಳನ್ನು ಹತ್ತಿಕ್ಕಲಾಯಿತು. ಆದರೆ ಚೀನಾ, ರಷ್ಯಾ, ಕ್ಯೂಬದಂತಹ ರಾಷ್ಟ್ರಗಳಲ್ಲಿ ಅನುಕರಣೆಯಾದರೂ ಭಾರತದಂತಹ ಪ್ರಜಾಪ್ರಭುತ್ವ ಅಧೀನ ರಾಷ್ಟ್ರದಲ್ಲಿ ಹೆಚ್ಚು ವಿಸ್ತಾರವಾಗಲು ಸಾಧ್ಯವಾಗಲಿಲ್ಲ. ನಂತರದ ಆಧುನಿಕೋತ್ತರ ವಾದವು ಸಮಾಜವನ್ನು ಅಖಂಡವಾಗಿ ನೋಡುವ ದೃಷ್ಟಿಕೋನಕ್ಕೆ ಭಿನ್ನಾವಾಗಿ ಖಂಡ-ಖಂಡವಾಗಿ ವಿಂಗಡಿಸಿ ನೋಡುವ ಚಿಂತನೆಗೆ ಎಡೆಮಾಡಿಕೊಟ್ಟಿತು. ಸಮಾಜವನ್ನು ಇಡಿಯಾಗಿ ಗ್ರಹಿಸಿ ಬಂದ ಅಂಶಗಳಿಗೆ ಭಿನ್ನವಾಗಿ ಬಿಡಿಯಾಗಿ ನೋಡಿದಾಗ ಬರಲಾರಂಭಿಸಿದವು. ಈ ರೀತಿ ಸಮಾಜವನ್ನು ವಿಭಾಗಿಸಿ ಅಧ್ಯಯನ ಮಾಡಿದ ಸಿದ್ಧಾಂತವೇ ಸಬಾಲ್ಟ್ರನ್ ಸಿದ್ಧಾಂತ.

ಇಟಲಿಯು ಪುನರುಜ್ಜೀವನ ಕಾಲದ ಬಹುದೊಡ್ಡ ಚಿಂತನಾ ಕೇಂದ್ರವಾಗಿತ್ತು. ಈ ವೇಳೆಗಾಗಲೇ ಮಾರ್ಕ್ಸ್ ಸಿದ್ಧಾಂತದಿಂದ ಸರ್ವಾಧಿಕಾರಿಗಳಾದ ಮೇಲೆ ಮತ್ತು ಅದರ ದುರುಪಯೋಗದಿಂದ ಜನರು ಬೇಸತ್ತು ಶೋಷಣೆಗೆ ಒಳಗಾಗಿದ್ದರು. ಇಂತಹ ಸಂದಿಗ್ಧ ಕಾಲದಲ್ಲಿ ಆತೋಂನಿ ಗ್ರಾಮ್‌ಶಿ ಅವರು ಮಾರ್ಕ್ಸ್ ಸಿದ್ಧಾಂತದ ನ್ಯೂನ್ಯತೆಗಳನ್ನು ಹೋಗಲಾಡಿಸಿ ಅದನ್ನು ಪುನರ್ ರಚನೆಗೊಳಿಸಿ ಸೈನಿಕರು, ಮಹಿಳೆಯರು, ವೃದ್ಧರು, ದಲಿತರು ಮತ್ತು ಬುಡಕಟ್ಟುಗಳನ್ನು ಕೇಂದ್ರೀಕರಿಸಿ ಅಧ್ಯಯನ ಆರಂಭಿಸಿ ಅದಕ್ಕೆ 'ಸಬಾಲ್ಟ್ರನ್ ಸ್ಟಡೀಸ್' ಎಂದು ಕರೆದರು.

ಆಂತೋನಿ ಗ್ರಾಂಶಿಯವರ ಚಿಂತನೆಯು ಇಟಲಿಯ ಕೇಂದ್ರ ನೆಲೆಯಿಂದ ಜಗತ್ತಿನ ಶೋಷಿತ ನೆಲೆಗಳಲ್ಲಿ ಪಸರಿಸಿತು. ಇವರ ಚಿಂತನಾ ಕ್ರಮದಿಂದ ಜಗತ್ತಿನಲ್ಲಿ

ಹಲವರು ಪ್ರಭಾವಿತರಾಗಿ ಅಧ್ಯಯನ ಆರಂಭಿಸಿದರು. ಹೀಗೆ ಪ್ರಭಾವಿತರಾದವರಲ್ಲಿ ಭಾರತದ ರಾಮಚಂದ್ರ ಗುಹಾ ಒಬ್ಬರು. ಇಟಲಿಯಂತೆ ಬಂಗಾಳವು ಕ್ರಾಂತಿಕಾರಿ ಚಿಂತನೆಗಳ ಕೇಂದ್ರವಾಗಿತ್ತು. ರಾಜಾರಾಂ ಮೋಹನ್‌ರಾಯ್, ರವೀಂದ್ರನಾಥ್ ಠ್ಯಾಗೂರ್, ಇತ್ತೀಚಿನ ಮಹಾಶ್ವೇತಾದೇವಿಯವರು ಇದಕ್ಕೆ ನಿದರ್ಶನವಾಗುತ್ತಾರೆ.

ಭಾರತದಲ್ಲಿ ಸಬಾಲ್ಟ್ರನ್ ಸ್ಟಡೀಸ್ ಅಥವಾ ಕಡೆಗಣಿತ ಅಧ್ಯಯನ ಆರಂಭಕ್ಕೆ ರಾಮಚಂದ್ರಗುಹರು ಕಾರಣವಾಗುತ್ತಾರೆ. ಗ್ರಾಂಶಿಯವರ ಅಧ್ಯಯನ ಕ್ರಮಕ್ಕೆ ಸೂಕ್ತ ನೆಲೆ ಭಾರತವಾಗಿದೆ ಎಂದರೂ ತಪ್ಪಿಲ್ಲ. ಭಾರತೀಯ ಸಮಾಜದ ಅಲ್ಪಸಂಖ್ಯಾತ ವೈದಿಕ ವರ್ಗದಿಂದ ಬಹುಸಂಖ್ಯಾತ ತಳಸಮುದಾಯಗಳನ್ನು ಧಾರ್ಮಿಕ ಕಟ್ಟುಪಾಡುಗಳಿಂದ ಇತರ ಎಲ್ಲಾ ಕ್ಷೇತ್ರಗಳಲ್ಲಿ ಶೋಷಿಸಲ್ಪಡುತ್ತಿದ್ದವು. ಇಂತಹ ದಮನಿತರ ಮೇಲೆ ಹೇರಲ್ಪಟ್ಟ ಯಜಮಾನಿಕೆಯನ್ನು ಗುರಿತಿಸಿತು, ಭಾರತದ ಸಾಂಸ್ಕೃತಿಕ ಯಜಮಾನಿಕೆ ಯಾರದ್ದು, ಯಾವ ಸಂಸ್ಕೃತಿಯನ್ನು ದಮನಿಸಿ ಶ್ರೇಷ್ಠ ಪರಿಶಿಷ್ಠರ ಕಲ್ಪನೆ ಮೂಡಿದೆ ಎಂಬ ಇತ್ಯಾದಿ ಅಂಶಗಳನ್ನು ಕಡೆ ಕಡೆಗಣಿತ ಅಧ್ಯಯನವು ಮುಖಾಮುಖಿಯಾಯಿತು. ಅಂಬೇಡ್ಕರ್, ಮಹಾಶ್ವೇತಾದೇವಿ ಸೇರಿದಂತೆ ಸಮಾನತೆಯ ತತ್ವವನ್ನು ಅನುಸರಿಸಿದ ಭಾರತೀಯ ಬುದ್ಧಿಜೀವಿಗಳು ಭಾರತದ ದಲಿತರ, ಆದಿವಾಸಿಗಳ, ವೃದ್ಧರ, ಮಹಿಳೆಯರ ಕುರಿತಾಗಿ ಅಧ್ಯಯನ ಆರಂಭಿಸಿ, ಪಾರಂಪರಿಕ ಯಜಮಾನಿಕೆಯಿಂದ ಮೇಲೆತ್ತುವ ಪ್ರಯತ್ನ ಮಾಡಿದರು. ಇದು ಇಂದಿಗೂ ಭಾರತದಲ್ಲಿ ಹೆಚ್ಚಿನ ಮಾನ್ಯತೆ ಪಡೆದಿದೆ ಮತ್ತು ಪಡೆಯುತ್ತಲಿದೆ.

ವಸಾಹತು ಕಾಲದ ಚಿಂತನಾ ಕ್ರಮಗಳು ಯೂರೋಪಿನಲ್ಲಿ ಆರಂಭಗೊಂಡು ವಿಶ್ವದ ಇತರ ರಾಷ್ಟ್ರಗಳ ಮೇಲೆ ತ್ವರಿತ ಗತಿಯಲ್ಲಿ ಪ್ರಭಾವ ಬೀರುತ್ತಿದ್ದವು. ಫ್ರಾನ್ಸ್‌ಗೆ ನೆಗಡಿಯಾದರೆ ಇಡೀ ಯುರೋಪಿಗೆ ಆವರಿಸುತ್ತಿತ್ತು ಎಂಬ ಮಾತಿತ್ತು. ನಂತರ ಯೂರೋಪಿನಲ್ಲಿ ಜರುಗಿದ ವಿದ್ಯಮಾನಗಳು ಭಾರತ ಸೇರಿದಂತೆ ವಸಾಹತು ಪ್ರದೇಶಗಳ ಮೇಲೆ ಗಾಢವಾದ ಪ್ರಭಾವ ಬೀರುತ್ತಿದ್ದವು. ಆದ್ದರಿಂದ ಯೂರೋಪಿನ ದೃಷ್ಟಿಕೋನಗಳು ಭಾರತದಲ್ಲಿ ಇದೇ ಹಿನ್ನೆಲೆಯಲ್ಲಿ ಹಾಸು ಹೊಕ್ಕಾಗಿವೆ. ಈ ಮೇಲ್ಕಂಡ ಎಲ್ಲಾ ದೃಷ್ಟಿಕೋನಗಳಲ್ಲಿ ಇಂದು ಕಡೆಗಣಿತ ಅಧ್ಯಯನವು ಮಾನ್ಯತೆ ಪಡೆಯುತ್ತಿದೆ.

ಭಾರತದ ಬುಡಕಟ್ಟುಗಳು ಈ ಮೇಲ್ಕಂಡ ದೃಷ್ಟಿಕೋನಗಳ ಒಂದು ಭಾಗವಾಗಿ ಅಧ್ಯಯನಕ್ಕೆ ಒಳಗಾಗಿರುವುದನ್ನು ಕಾಣಬಹುದು. ಇಲ್ಲಿನ ಬಹಳಷ್ಟು ಸಮುದಾಯಗಳು ಇಂದಿಗೂ ಅವಜ್ಞೆಗೆ ಒಳಗಾಗಿವೆ. ನೆಲ-ನೆಲೆ ಇಲ್ಲದೆ ಆಧುನಿಕತೆಗೆ ಹೊಂದಿಕೊಳ್ಳದೆ, ಅತ್ತ ಪಾರಂಪರಿಕ ಬದುಕಿಗೂ ಒಗ್ಗಿಕೊಳ್ಳದೆ ಅತಂತ್ರ ಸ್ಥಿತಿಯಲ್ಲಿ ಅಲೆಮಾರಿಗಳಾಗಿ

ಮಿಂದು ಹೋಗಿದ್ದಾರೆ.ಆಧುನೀಕರಣದ ವಿದ್ಯಮಾನದ ಜಗತ್ತಿನಲ್ಲಿ ಆವಿಷ್ಕಾರಗೊಳ್ಳುತ್ತಿರುವ ಸವಾಲುಗಳನ್ನು ಎದುರಿಸದೇ ಮತ್ತು ಹೆದರಿಸದೆ ಸಮಾಜದ ಅಂಚಿಗೆ ನೂಕಲ್ಪಟ್ಟಿವೆ. ಅಂತಹ ಅಲೆಮಾರಿ ಸಮುದಾಯಗಳು ಅರಸರ ಕಾಲದ ಆಪ್ತವರ್ಗಗಳಾಗಿದ್ದವು. ಇಂದು ಬೇಡಿ ತಿನ್ನುವಂತಾಗಿದ್ದಾರೆ. ಇಂತಹ ಸಮುದಾಯಗಳಲ್ಲಿ ಕರ್‌ಕರ್‌ಮುಂಡ ಸಮುದಾಯವು ಒಂದಾಗಿದ್ದು ಕಡೆಗಣಿತ ದೃಷ್ಟಿಕೋನದಿಂದ ಅಧ್ಯಯನ ಮಾಡುವುದು ಅಗತ್ಯವಾಗಿದೆ.

**ಇದುವರೆಗಿನ ಸಾಹಿತ್ಯಾವಲೋಕನ**

ಕರ್‌ಕರ್ ಮುಂಡರ ಸಾಮಾಜಿಕ ಅಧ್ಯಯನ ಎಂಬ ಶೀರ್ಷಿಕೆ ಅಡಿಯಲ್ಲಿ ಅಧ್ಯಯನ ಆರಂಭಿಸಿದಾಗ ಈ ಸಮುದಾಯದ ಕುರಿತಾಗಿ ಹಿಂದಿನ ಅಧ್ಯಯನಕಾರರ ತಿಳುವಳಿಕೆ ಮತ್ತು ಮಿತಿಗಳನ್ನು ಗ್ರಹಿಸುವುದು ಅಗತ್ಯವಾಗಿದೆ.

ಕರ್‌ಕರ್ ಮುಂಡ ಸಮುದಾಯದ ಕುರಿತಾಗಿ ನಡೆದ ಅಧ್ಯಯನಗಳು ತುಂಬಾ ವಿರಳ ಎಂದರೆ ತಪ್ಪಾಗಲಿಕ್ಕಿಲ್ಲ. ಕಾರಣ ಕರ್‌ಕರ್ ಮುಂಡ ಸಮುದಾಯದ ಹೆಸರು ಕೇವಲ ಓಬಿಸಿ ಮೀಸಲಾತಿ ಪಟ್ಟಿಯಲ್ಲಿ ಮಾತ್ರ ಇದ್ದು, ಪ್ರಾದೇಶಿಕವಾಗಿ 'ಮುಂಡಾಲಬಂಡ, ಮೊಂಡಬೇಡ' ಎಂಬ ಹಲವು ಪರ್ಯಾಯ ಹೆಸರುಗಳಲ್ಲಿ ಹಂಚಿ ಹೋಗಿರುವುದು ಕಾರಣವಾಗಿದೆ. ಇವೆಲ್ಲಾ ಪರ್ಯಾಯ ಹೆಸರುಗಳನ್ನು ಆಧರಿಸಿ ಸಾಹಿತ್ಯ ಅವಲೋಕನ ಮಾಡಲಾಗಿದೆ.

೧. **ಮೇತ್ರಿ ಕೆ.ಎಂ. ಬುಡಕಟ್ಟು ಕುಲಕಸುಬುಗಳು, ೨೦೦೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.** ಎಂಬ ಪುಸ್ತಕವನ್ನು ಹೊರತಂದಿದ್ದು, ಇದರಲ್ಲಿ ಕರ್ನಾಟಕ ಹಿಂದಿನ ೪೯ ಬುಡಕಟ್ಟು ಸಮುದಾಯಗಳ ಚಿತ್ರಣವನ್ನು ಅನಾವರಣಗೊಳಸಿದ್ದಾರೆ. ಇದರಲ್ಲಿ ಪುಟಸಂಖ್ಯೆ ೧೮೭ರಿಂದ ೧೯೩ರ ವರೆಗೆ ನಾಯಕ,ಬೇಡ,ವಾಲ್ಮೀಕಿ ಸಮುದಾಯದ ಕುರಿತಾಗಿ ವಿವರಿಸಿದ್ದಾರೆ.

ಕರ್ನಾಟಕದಲ್ಲಿ ನಾಯಕ, ಬೇಡ, ವಾಲ್ಮೀಕಿ ಸಮುದಾಯದ ಒಳಪಂಗಡಗಳನ್ನು ಹೆಚ್.ವಿ. ನಂಜುಂಡಯ್ಯ ಅವರನ್ನು ಆಧರಿಸಿ ೧. ಊರಬೇಡರು ೨ ಮ್ಯಾಸಬೇಡರು ೩. ಗುಡ್ಲುಬೇಡರು ೪. ಮಾರಮ್ಮನ ಬೇಡರು ೫ ಹಾಲುಬೇಡರು ೬. ಮೊಂಡಬೇಡರು (ಅಲೆಮಾರಿ ಭಿಕ್ಷುಕ ಬೇಡರು) ಎಂದು ತಿಳಿಸಿದ್ದಾರೆ. ಮೊಂಡ ಬೇಡರ ಹೆಸರನ್ನು ಮಾತ್ರ ಉಲ್ಲೇಖಿಸಿದ್ದು ವಿವರಣೆ ಇರುವುದಿಲ್ಲ.

೨. **ಚಂದ್ರಪ್ಪ ಎಸ್ , ಮೊಂಡರ ಸಂಸ್ಕೃತಿ, ೧೯೯೩, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.** ಎಂಬ ಕೃತಿಯು ಬರಗೂರು ರಾಮಚಂದ್ರಪ್ಪ ಸಂಪಾದಕತ್ವದ ಉಪಸಂಸ್ಕೃತಿ

ಮಾಲೆಯಿಂದ ಅನಾವರಣಗೊಂಡಿದೆ. ಲೇಖಕರು ತಮ್ಮ ಸಮುದಾಯದ ಚಿತ್ರಣವನ್ನು ತಿಳಿಸುತ್ತಾ ಮೊಂಡ ಸಮುದಾಯದ ಹಿನ್ನೆಲೆ, ಪದನಿಷ್ಪತ್ತಿ ಪರ್ಯಾಯ ಪದಗಳು, ಜೀವನ ವಿಧಾನ, ಸಾಮಾಜಿಕ ವ್ಯವಸ್ಥೆ, ಆಚರಣೆ, ಕಲೆ, ನಂಬಿಕೆ, ನಿಷೇಧಗಳು ಮತ್ತು ೧೯೯೩ ಸಂದರ್ಭದ ಸ್ಥಿತ್ಯಂತರಗಳನ್ನು ಅಮೂಲಾಗ್ರವಾಗಿ ಕಟ್ಟಿಕೊಟ್ಟಿದ್ದಾರೆ. ಮೊಂಡರ ಕುರಿತಾಗಿ ಸಮಗ್ರ ಚಿತ್ರಣ ನೀಡುವ ಏಕೈಕ ಕೃತಿಯಾಗಿದೆ. ಇವರು ಕರ್ನಾಟಕದ ಕೋಲಾರ, ಬೆಂಗಳೂರು, ಬೆಂಗಳೂರು ಗ್ರಾಮಾಂತರ ಆಂಧ್ರಪ್ರದೇಶದ ಚಿತ್ತೂರು ಮತ್ತು ಕಡಪ ಹಾಗೂ ತಮಿಳುನಾಡಿನ ಧರ್ಮಪುರಿ ಜಿಲ್ಲೆಗಳನ್ನು ಅಧ್ಯಯನ ವ್ಯಾಪ್ತಿಗೆ ಒಳಪಡಿಸಿಕೊಂಡಿದ್ದಾರೆ. ಇವರ ಅಧ್ಯಯನ ಕೇವಲ ಕೆಲವೇ ಜಿಲ್ಲೆಗಳನ್ನು ಅನುಲಕ್ಷಿಸಿಕೊಂಡಿದೆ.

ಚಂದ್ರಪ್ಪ ಎನ್ ಅವರ ಅಧ್ಯಯನವನ್ನು ಗಮನಿಸಿದಾಗ ಮೊಂಡರನ್ನು ಜಾರ್ಖಂಡ್‌ನ ಮುಂಡ ಸಮುದಾಯಕ್ಕೆ ಸಮೀಕರಿಸುವ ದೃಷ್ಟಿಕೋನವನ್ನು ಹೊಂದಿರುವರು. ಮುಂಡಾಲ, ಮುಕ್ರಿವೈಕುಂಡ ಹೆಸರುಗಳು ಮೊಂಡರ ಪರ್ಯಾಯ ಪದಗಳು ಎಂದು ತಿಳಿಸಿರುವರು. ಆದರೆ ಈ ಎರಡು ಹೆಸರಿನ ಸಮುದಾಯಗಳು ಮೊಂಡರಿಂದ ಭಿನ್ನವಾಗಿವೆ. ಮೊಂಡರು ಎಂಬ ಹೆಸರು ಯಾವುದೇ ಮೀಸಲಾತಿ ಪಟ್ಟಿಯಲ್ಲಿ ಇಲ್ಲ. ಬದಲಿಗೆ ಕರ್‌ಕರ್‌ಮುಂಡ ಎಂಬ ಹೆಸರು ಇದ್ದು, ಇದರ ಕುರಿತಾಗಿ ಎಲ್ಲಿಯೂ ಉಲ್ಲೇಖಿಸಿಲ್ಲ. ಯಲ್ಲಮ್ಮ ಮಾತ್ರ ಮೊಂಡ ಸಮುದಾಯದ ಅಧಿದೇವತೆ ಎಂದು ಬಿಂಬಿಸಿ ಇತರ ದೈವಗಳ ಪ್ರಸ್ತಾಪ ಮಾಡದಿರುವುದು ಅಧ್ಯಯನದ ಮಿತಿಯಾಗಿದೆ. ಈ ಅಂಶಗಳು ಅಧ್ಯಯನದ ಮಿತಿಗಳಾದರೂ ಮೊಂಡರ ಕುರಿತಾಗಿ ತಳಮಟ್ಟದ ಅಧ್ಯಯನ ಮಾಡಿದವರಲ್ಲಿ ಮೊದಲಿಗರು. ಇದು ಈ ಸಂಶೋಧನೆಗೆ ಅಡಿಗಲ್ಲು ಎಂದರೂ ತಪ್ಪಾಗಲಿಕ್ಕಿಲ್ಲ. ಇವರ ಅಧ್ಯಯನವು ಸ್ಪರ್ಶಿಸದ ಉತ್ತರ ಕರ್ನಾಟಕದ ಭಾಗವನ್ನು ಮತ್ತು ಆಂಧ್ರಪ್ರದೇಶದ ಹೈದ್ರಾಬಾದ್, ಗುಂಟೂರು ಭಾಗಗಳನ್ನು ಈ ಅಧ್ಯಯನವು ಒಳಗೊಂಡಿದೆ.

೩. **ವಿರೂಪಾಕ್ಷಿ ಪೂಜಾರಹಳ್ಳಿ(ಸಂ), ಚಿನ್ನಹಗರಿ ಸಿರಿ, ೨೦೦೬, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ.** ಪುಸ್ತಕದಲ್ಲಿ ಮರೆಯಾಗುತ್ತಿರುವ ಮೊಂಡ ಬೇಡ ಸಂಸ್ಕೃತಿ ಎಂಬ ಲೇಖನವನ್ನು ರಚಿಸಿರುವರು. ಇವರ ಅಧ್ಯಯನವು ಚಿತ್ರದುರ್ಗ, ಬಳ್ಳಾರಿ ಜಿಲ್ಲೆಗಳಲ್ಲಿನ ಮೊಂಡಬೇಡರ ಸಂಸ್ಕೃತಿಯನ್ನು ಆಧರಿಸಿದೆ. ಮೊಂಡಬೇಡರು ಬೇಡ ಸಮುದಾಯದ ಒಂದು ಒಳಪಂಗಡವೆಂದು ಚಹರೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಬೇಡ ಸಮುದಾಯವನ್ನು ವರ್ಗೀಕರಿಸಿದಾಗ ನಾಲ್ಕು ಉಪಪಂಗಡಗಳು ಕಂಡುಬರುತ್ತವೆ. ೧. ಊರಬೇಡ ಮತ್ತು ಚಿನ್ನಬೇಡರು. ೨. ಮ್ಯಾಸಬೇಡರು ಅಥವಾ

ಪೆದ್ದಬೊಯರು, ೩. ಉರುಮೆ ಬೇಡರು ೪. ಮೊಂಡಬೇಡರೆಂದು ತಿಳಿಸಲಾಗಿದೆ. ಮೊಂಡರು ಬೇಡರ ಒಳಪಂಗಡದವರು ಎಂದು ತಿಳಿಸಿರುವುದರಿಂದ ಕುಲಶಾಸ್ತ್ರೀಯ ಅಧ್ಯಯನ ಮಾಡುವ ಅಗತ್ಯವಿದೆ. ಇದಕ್ಕೆ ಪೂರಕವಾಗಿ ಮೊಂಡರ ಜೀವನಾವರ್ತಕ ಆಚರಣೆಗಳು ಬೆಡಗುಗಳನ್ನು ಆಧರಿಸಿ ಚಹರೆ ಕಟ್ಟಿಕೊಡುವ ಪ್ರಯತ್ನ ಮಾಡಿರುವುದು ಉತ್ತಮವೆನಿಸುತ್ತದೆ.

೪. **ಮಂಜುನಾಥ ಬೇವಿನಕಟ್ಟಿ, ವ್ಯಾದ ಚರಿತೆ, ೨೦೦೭, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.** ಎಂಬ ಪುಸ್ತಕವನ್ನು ಸಂಪಾದಿಸಿದ್ದಾರೆ. ಇದರಲ್ಲಿ 'ಮೊಂಡರು' ಎಂಬ ಲೇಖನವನ್ನು ತಾರಾಮತಿ ಬಿ. ಅವರು ರಚಿಸಿದ್ದು, ಐದು ಪುಟಗಳಷ್ಟು ವಿವರಣೆ ನೀಡಿರುವರು. ಮೊಂಡರ ಕುರಿತಾದ ಅಧ್ಯಯನದಲ್ಲಿ ಭಿಕ್ಷೆಯ ವಿಧಾನ, ವೇಷ, ಮೊಂಡ ಎಂಬ ಹೆಸರು ಬರಲು ಕಾರಣ ಎಂಬ ಇತ್ಯಾದಿಗಳ ವಿವರ ನೀಡುತ್ತದೆ.

೫. **ಲಕ್ಷ್ಮೀದೇವಿ ಎಲ್, ನಾಗಪ್ಪ ನರಸಪ್ಪ ಸಾಂಸ್ಕೃತಿಕ ಸಂಕಥನ, ೨೦೧೧, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.** ಲಕ್ಷ್ಮೀದೇವಿ ಎಲ್. ಇದರಲ್ಲಿರುವ ಐತಿಹ್ಯಗಳಲ್ಲಿ ಪುಟ ಸಂಖ್ಯೆ ೪೨ರಲ್ಲಿ ಬೇಡರೊಂದಿಗೆ, ಮೊಂಡರು ಮತ್ತು ಗೊಲ್ಲರೊಂದಿಗಿನ ಬಾಂಧವ್ಯವನ್ನು ಒಂದು ಕಥೆಯ ಮೂಲಕ ನಿರೂಪಿಸಿದ್ದಾರೆ. ಇದು ಪ್ರಸ್ತುತ ಸಂಶೋಧನೆಯಲ್ಲಿ ಬೇಡರೊಂದಿಗೆ ಸಂಬಂಧವಿದೆ ಎಂದು ತಿಳಿಯಲು ಪೂರಕವಾಗಿದೆ.

೬. **ವೀರೇಂದ್ರ ಸಿಂಹ ಹರ್ತಿಕೋಟೆ ಮತ್ತು ಅಮರೇಶ್ ಯತಗಲ್ (ಸಂ), ವಾಲ್ಮೀಕಿ ಮಂದಾರ, ೨೦೦೮, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.** ಇದರಲ್ಲಿರುವ ಹಲವು ಲೇಖನಗಳಲ್ಲಿ ಮಂಜುನಾಥ ಬೇವಿನಕಟ್ಟಿ ಅವರ 'ಮೊಂಡಬೇಡರು' ಎಂಬ ಲೇಖನವು ಒಂದಾಗಿದೆ. ಇದರಲ್ಲಿ ಮೊಂಡರ ಮೂಲ, ಜೀವನಾವರ್ತಕ ಆಚರಣೆಗಳು, ನಂಬಿಕೆ–ನಿಷೇಧಗಳು, ಐತಿಹ್ಯಗಳ ಕುರಿತಾಗಿ ವಿವರಣೆ ಇದೆ. ಇದರಲ್ಲಿನ ಅಂಶಗಳು ನನ್ನ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

೭. **ನಂಜುಂಡಯ್ಯ ಹೆಚ್.ವಿ, ಎಥ್ನೋಗ್ರಫಿಕಲ್ ಸರ್ವೇ ಆಫ್ ಮೈಸೂರು, ೧೯೧೧, ಗೌವರ್ನ್‌ಮೆಂಟ್ ಪ್ರೆಸ್, ಬೆಂಗಳೂರು.** ಈ ಕೃತಿಯಲ್ಲಿ ಮೊಂಡರು ಕಾಸ್ಟ್ ಕುರಿತಾಗಿ ಆರು ಪುಟಗಳಲ್ಲಿ ಕುಲಶಾಸ್ತ್ರೀಯ ಅಧ್ಯಯನದ ಮೂಲಕ ವಿವರಣೆ ನೀಡಿದ್ದಾರೆ. ಬೇಡ ಸಮುದಾಯದ ಮಂದ್ಲಾರು ಎಂಬ ಬೆಡಗಿನಿಂದ ವಿಭಜನೆ ಹೊಂದಿ ಮೊಂಡರು ಉಪ ಪಂಗಡವಾಗಿ ವಿಭಜಿತರಾಗಿದ್ದಾರೆ ಎಂದು ತಿಳಿಸುತ್ತಾ ಭಾಷೆ, ಬೆಡಗುಗಳು, ಜನನ, ಮದುವೆ, ವಿಧವಾವಿವಾಹ, ವಿವಾಹ ವಿಚ್ಛೇದನ, ವೃತ್ತಿಗಳ ಬಗ್ಗೆ ಉಪಯುಕ್ತ ಮಾಹಿತಿ ನೀಡಿದ್ದಾರೆ.

೮. **ಸಿಂಗ್ ಕೆ.ಎಸ್, ಪೀಪಲ್ ಆಫ್ ಇಂಡಿಯಾ ಕರ್ನಾಟಕ, ೨೦೦೩, ಅಫೀಲೇಟೆಡ್ ಈಸ್ಟ್ ವೆಸ್ಟ್ ಪ್ರೆಸ್ ಪ್ರೈ ಲಿ, ನ್ಯೂಡೆಲ್ಲಿ.** ಈ ಸರಣಿಯಲ್ಲಿ ಕರ್‌ಕರ್‌ಮುಂಡ ಸಮುದಾಯದ ಕುರಿತಾಗಿ ಮೂರು ಪುಟಗಳಷ್ಟು ವಿವರಣೆ ನೀಡಿರುವರು. ಬಿಜಾಪುರ ಜಿಲ್ಲೆಯನ್ನು ಕೇಂದ್ರೀಕರಿಸಿ ಇವರ ಹೆಸರಿನ ಮೂಲ, ಭಾಷೆ, ವೃತ್ತಿ, ಬೆಡಗುಗಳು, ವಿವಾಹ, ವಿಚ್ಛೇಧನ, ಹುಟ್ಟು, ಶವಸಂಸ್ಕಾರ, ಕುಲಂಪಂಚಾಯ್ತಿ ಕುರಿತಾಗಿ ಸಂಕ್ಷಿಪ್ತವಾಗಿ ವಿವರಿಸಿದ್ದು ಪ್ರಸ್ತುತ ಸಂಶೋಧನೆಯಲ್ಲಿ ಬಳಸಿಕೊಳ್ಳಲಾಗಿದೆ.

೯. **ಅಯ್ಯರ್ ಎಲ್.ಕೆ.ಎ, ಮೈಸೂರು ಟ್ರೈಬ್ಸ್ ಮತ್ತು ಕಾಸ್ಟ್, ೨೦೦೫, ಮಿತ್ತಲ್ ಪಬ್ಲಿಕೇಷನ್ ನ್ಯೂಡೆಲ್ಲಿ.** ಪ್ರಸ್ತುತ ಕೃತಿಯಲ್ಲಿ ೨೧೭ರಿಂದ ೨೨೪ರ ವರೆಗೆ ಮೊಂಡರ ಕುರಿತು ಮಾಹಿತಿ ನೀಡಿರುವರು. ಮೊಂಡರು ಜಾತಿಯನ್ನು ಜೋಗಿಗಳ ಅಡಿಯಲ್ಲಿ ತಪ್ಪಾಗಿ ಹಾಕಲಾಗಿದೆ. ಬೇಡ ಸಮುದಾಯದ ಮಂದಾಲ ಗೋತ್ರದಿಂದ ಮೊಂಡರಾಗಿರುವರು ಎಂದು ತಿಳಿಸಿರುವರು. ಮೊಂಡರಲ್ಲಿ ಊರಮೊಂಡರು, ಬಂಡ ಅಥವಾ ಕಾಕುಳ ಮೊಂಡರು, ಸಿಕಂಡಿಮೊಂಡರು, ಕಸ್ತೂರಿ ಮೊಂಡರು ಎಂಬ ಒಳಪಂಗಡಗಳಿವೆ. ಇವರ ಜನನ, ಮದುವೆ, ವಿವಾಹ ವಿಚ್ಛೇಧನಾ, ಮರಣ, ಕುಲಂಪಂಚಾಯ್ತಿ, ಬೆಡಗುಗಳ ಕುರಿತಾಗಿ ಸಂಕ್ಷಿಪ್ತವಾಗಿ ವಿವರಿಸಿದ್ದು ಸಂಶೋಧನೆಗೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

೧೦. **ಸಿಂಗ್ ಕೆ.ಎಸ್, ಪೀಪಲ್ ಆಫ್ ಇಂಡಿಯಾ ಆಂಧ್ರಪ್ರದೇಶ, ೨೦೦೩, ಆಫಿಲೇಟೆಡ್ ಈಸ್ಟ್-ವೆಸ್ಟ್ ಪ್ರೆಸ್ ಪ್ರೈ ಲಿ, ನ್ಯೂಡೆಲ್ಲಿ.** ಈ ಸರಣಿಯಲ್ಲಿ ಬಂಡೋಳ್ ಎಂಬ ಶೀರ್ಷಿಕೆ ಅಡಿಯಲ್ಲಿ ನಾಲ್ಕು ಪುಟಗಳಷ್ಟು ವಿವರಣೆ ನೀಡಿದ್ದಾರೆ. ಆಂಧ್ರಪ್ರದೇಶದಲ್ಲಿ ಬಂಡೋಳ್ ಸಮುದಾಯ ತೆಲಂಗಾಣ ಮತ್ತು ಕರಾವಳಿ ಆಂಧ್ರದಲ್ಲಿ ಕಂಡುಬರುತ್ತದೆ. ಇವರನ್ನು ಮೊಂಡಿ, ಮೊಂಡಿವಾರು, ಮೊಂಡಿ ಬಂಡ ಎಂದು ಕರೆಯುವರು. ಇವರ ಪ್ರಧಾನ ವೃತ್ತಿ ಭಿಕ್ಷೆ ಬೇಡುವುದು ಆಗಿದ್ದು, ಜನನ, ಮದುವೆ, ಮರಣ ಇತ್ಯಾದಿ ಆಚರಣೆಗಳ ಬಗ್ಗೆ ತಿಳಿಸಿರುವರು. ಇದು ಆಂಧ್ರ ಮತ್ತು ಕರ್ನಾಟಕದ ಕರ್‌ಕರ್ ಮುಂಡ ಸಮುದಾಯವನ್ನು ಪರ್ಯಾಯ ಹೆಸರುಗಳನ್ನು ಗುರುತಿಸಲು ಸಹಾಯಕವಾಗಿದೆ.

೧೧. **ಸಿಂಗ್ ಕೆ.ಎಸ್, ಕಮ್ಯೂನಿಟಿಸ್ ಸೆಗ್‌ಮೆಂಟ್ ಸೈನೋನೋಮ್ಸ್ ಸರ್‌ನೇಮ್ಸ್ ಅಂಡ್ ಟೈಟಲ್, ೧೯೯೬, ಆಕ್ಸಫರ್ಡ್ ಯುನಿರ್ವಸಿಟಿ ಪ್ರೆಸ್, ಡೆಲ್ಲಿ.** ಈ ಪುಸ್ತಕದಲ್ಲಿ ಕರ್‌ಕರ್ ಮುಂಡಿ, ಕರ್‌ಕರ್‌ಮುಂಡೆ ಎರಡು ಒಂದೇ ಎಂದು ತಿಳಿಸಿರುವರು ಇದು ಸಹ ಈ ಸಂಶೋಧನೆಗೆ ಪೂರಕವಾಗಿದೆ.

ಕರ್‌ಕರ್ ಮುಂಡ ಸಮುದಾಯದ ಕುರಿತಾಗಿ ವಿರಳ ಪ್ರಮಾಣದಲ್ಲಿ ಅನುಷಂಗಿಕ ಆಕರಗಳು ದೊರೆಯುತ್ತವೆ. ಈ ಅನುಷಂಗಿಕ ಆಕರಗಳಿಗೆ ಪ್ರದೇಶ, ಕಾಲ, ದೃಷ್ಟಿಕೋನಗಳ ಮಿತಿಯನ್ನು ಕಾಣಬಹುದು. ಸಂಶೋಧನೆಯು ನಿರಂತರವಾಗಿ ಸಾಗುವಂತಹದ್ದು. ಹಾಗಾಗಿ ಈ ಅನುಷಂಗಿಕ ಆಕರಗಳು ಎಲ್ಲವನ್ನು ಕಟ್ಟಿಕೊಡಲು ಸಾಧ್ಯವಾಗುವುದಿಲ್ಲ. ಕೆಲವೊಂದು ವಲಯಗಳನ್ನು ಬಿಟ್ಟಿದ್ದು ಅವುಗಳನ್ನು ಸ್ಪರ್ಶಿಸಿ ಕರ್‌ಕರ್ ಮುಂಡ ಸಮುದಾಯವನ್ನು ಸಂಶೋಧನಾ ಚೌಕಟ್ಟಿನೊಳಗೆ ತರಲು ಪ್ರಸ್ತುತ ಸಂಶೋಧನೆ ನೆರವಾಗುತ್ತದೆ.

**ಪ್ರಾಕಲ್ಪನೆ**

ಪ್ರಾಕಲ್ಪನೆಯು ಸಂಶೋಧನೆಯಿಂದ ವ್ಯಕ್ತವಾಗಬಹುದಾದ ಫಲಿತಗಳನ್ನು ಪೂರ್ವದಲ್ಲಿ ಅಂದಾಜಿಸುವುದಾಗಿದೆ. ಸಂಶೋಧನೆಯ ಶೀರ್ಷಿಕೆಯು ಅಂತಿಮಗೊಂಡ ನಂತರದಲ್ಲಿ ವಿಷಯದ ಕುರಿತಾದ ಅಧ್ಯಯನಗಳ ಸಮೀಕ್ಷೆ ಮಾಡಲಾಗುವುದು. ಸಂಶೋಧನೆಯ ಕುರಿತಾಗಿ ಒಂದು ಊಹೆಯನ್ನು ಮೂಡಿಸಿಕೊಂಡು ಉದ್ದೇಶಗಳನ್ನು ಇಟ್ಟುಕೊಳ್ಳುತ್ತೇವೆ. ಸಂಶೋಧನೆಯ ಆರಂಭದಲ್ಲಿ ಊಹಿಸಿದ ಕಲ್ಪನೆಗಳು ಅಂತ್ಯದಲ್ಲಿ ಸುಳ್ಳು ಅಥವಾ ಸತ್ಯವು ಆಗಬಹುದು. ನನ್ನ ವಿಷಯದ ಕುರಿತಾಗಿ ಸಾಹಿತ್ಯಾವಲೋಕನ ನಂತರದಲ್ಲಿ ಈ ಕೆಳಗಿನಂತೆ ಪ್ರಮೇಯ ಅಥವಾ ಊಹೆಗಳನ್ನು ಇಟ್ಟುಕೊಳ್ಳಲಾಗಿದೆ.

* ಕರ್‌ಕರ್ ಮುಂಡರು ಪ್ರಾದೇಶಿಕವಾಗಿ ಪರ್ಯಾಯ ಹೆಸರುಗಳಿಂದ ಹಂಚಿಹೋಗಿರುವುದರಿಂದ ಸಮುದಾಯದ ಗುರುತಿನ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ.

* ಕರ್‌ಕರ್ ಮುಂಡರು ಸಾಂಸ್ಕೃತಿಕ ಅನನ್ಯತೆ ಹೊಂದಿರುವರು.

* ಕರ್‌ಕರ್ ಮುಂಡರು ಗುರುತಿನ ಸಮಸ್ಯೆಯಿಂದ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ.

ಕರ್‌ಕರ್ ಮುಂಡರ ಸಾಮಾಜಿಕ ಅಧ್ಯಯನ ಎಂಬ ಶೀರ್ಷಿಕೆಯನ್ನು ಆಯ್ದುಕೊಂಡ ನಂತರದಲ್ಲಿ ಕ್ಷೇತ್ರ ಪರಿಚಯಕ್ಕೆಂದು ಹೋದಾಗ ಸಮುದಾಯವು ಬಿಜಾಪುರ, ಬಾಗಲಕೋಟೆಗಳಲ್ಲಿ ಕರ್‌ಕರ್ ಮುಂಡ ಎಂದು, ದಾವಣಗೆರೆಯಲ್ಲಿ ಮುಂಡಾಲಬಂಡೆ, ಚಿತ್ರದುರ್ಗದಲ್ಲಿ ಮೊಂಡಬೇಡರು ಎಂದು ಪರ್ಯಾಯ ಹೆಸರುಗಳಿಂದ ಕರೆಯಲಾಗುತ್ತಿತ್ತು. ಆದರೆ ತೆಲುಗು ಭಾಷೆ, ಭಿಕ್ಷುಕ ವೃತ್ತಿಗಳು ಒಂದೇ ಆಗಿದ್ದವು. ಇವುಗಳ ಮಧ್ಯೆ ವೈವಾಹಿಕ ಸಂಬಂಧಗಳು ಜರುಗಿದ್ದವು. ಜೊತೆಗೆ ಇವರು ಗುಡಾರ, ಗುಡಿಸಲುಗಳಲ್ಲಿ ವಾಸಿಸುತ್ತಾ ಸಮುದಾಯದ ಹಿನ್ನೆಲೆ ತಿಳಿಯದೆ ಸೌಲಭ್ಯ ವಂಚಿತರಾಗಿದ್ದಾರೆ ಎಂದು

ತಿಳಿದ ನಂತರ ಈ ಮೇಲ್ಕಂಡ ಪ್ರಮೇಯಗಳನ್ನು ಅಂದಾಜಿಸಿಕೊಂಡು ಅವುಗಳನ್ನು ಪರೀಕ್ಷಿಸಲು ಅಧ್ಯಯನ ಉದ್ದೇಶಗಳನ್ನು ಇಟ್ಟುಕೊಂಡು ಸಂಶೋಧನೆಯನ್ನು ಮುಂದುವರೆಸಲಾಯಿತು.

**ಅಧ್ಯಯನದ ಉದ್ದೇಶಗಳು**

ಸಂಶೋಧನೆಯು ವೈಜ್ಞಾನಿಕತೆಯಿಂದ ಕೂಡಿರಬೇಕಾದರೆ ಸಂಶೋಧನಾ ಚಟುವಟಿಕೆಗಳನ್ನು ಕೆಲವೊಂದು ಹಂತಗಳ ರೂಪಗಳಲ್ಲಿ ವಿಂಗಡಿಸಿ ಒಂದು ಚೌಕಟ್ಟನ್ನು ಹಾಕಿಕೊಳ್ಳಬೇಕು. ಸಂಶೋಧನೆ ಕೈಗೊಳ್ಳಲು ಮತ್ತು ಏನನ್ನು ಪರಿಶೋಧಿಸಬೇಕು ಎಂಬ ನಿರ್ಧಿಷ್ಠ ಗುರಿ ಉದ್ದೇಶಗಳು ಸಂಶೋಧನೆಯ ಕೇಂದ್ರ ಬಿಂದುಗಳಾಗಿರುತ್ತವೆ. ಸಂಶೋಧನೆಯ ಎಲ್ಲಾ ವಿಧಾನಗಳು ಈ ಉದ್ದೇಶಗಳ ಈಡೇರಿಕೆ ಪೂರಕವಾಗಿರುತ್ತವೆ. ಪ್ರಸ್ತುತ ಸಂಶೋಧನೆಯಲ್ಲಿ ಅಧ್ಯಯನ ಉದ್ದೇಶಗಳು ಈ ಕೆಳಗಿನಂತೆ ಕಂಡುಬರುತ್ತವೆ.

* ಕರ್‌ಕರ್ ಮುಂಡ ಸಮುದಾಯದ ಚಾರಿತ್ರಿಕ ಹಿನ್ನೆಲೆಯನ್ನು ತಿಳಿಯುವುದು.

* ಕರ್‌ಕರ್ ಮುಂಡರ ಜೀವನಾವರ್ತನ ಮತ್ತು ವಾರ್ಷಿಕಾವರ್ತನ ಆಚರಣೆಗಳನ್ನು ತಿಳಿಯುವುದು.

* ಕರ್‌ಕರ್ ಮುಂಡರು ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕವಾಗಿ ಹಿಂದುಳಿಯಲು ಕಾರಣ ಪರಿಣಾಮಗಳನ್ನು ತಿಳಿಯುವುದು.

**ಅಧ್ಯಯನದ ಮಹತ್ವ**

ಮಧ್ಯಯುಗೀನ ಕಾಲದಲ್ಲಿ ಅನೇಕ ಸಮುದಾಯಗಳು ಸಾಮಾಜಿಕ ಸ್ಥಾನಮಾನ ಕಳೆದುಕೊಳ್ಳಲಾರಂಭಿಸಿದವು. ನಂತರದ ಯುರೋಪಿಯನ್ನರ ಪ್ರಾಬಲ್ಯದಿಂದಾಗಿ ಅರಸೊತ್ತಿಗೆ ಅವನತಿಯ ಹಾದಿ ಹಿಡಿಯಿತು. ರಾಜನಿಗೆ ಆಪ್ತವಾಗಿದ್ದ ಪ್ರದರ್ಶನ ಕಲೆಯ ವರ್ಗಗಳು, ಕುಶಲಕರ್ಮಿಗಳು ಮತ್ತು ಸೈನಿಕ ವರ್ಗಗಳು ಆಡಳಿತಕ್ಕೆ ಪೂರಕವಾಗಿ ಕಾರ್ಯನಿರ್ವಹಿಸುತ್ತಿದ್ದವು. ಈ ವರ್ಗಗಳು ಅತಂತ್ರ ಬದುಕಿಗೆ ಒಳಗಾಗಬೇಕಾಯಿತು. ರಾಜನು ನೀಡುತ್ತಿದ್ದ ಇನಾಂ ಭೂಮಿಗಳು, ಉಡುಗೊರೆಗಳು ಇಲ್ಲವಾಗಿ ಶೋಚನೀಯ ಬದುಕಿಗೆ ಬರಬೇಕಾಯಿತು. ಇಂದಿನ ಬಹುತೇಕ ಅಲೆಮಾರಿಗಳ ಸ್ಥಿತಿಯು ಇದೆ ಆಗಿದೆ. ಪಾರಂಪರಿಕವಾಗಿ ಅನುಸರಿಸಿಕೊಂಡು ಬಂದ ಕುಲಕಸುಬುಗಳು ಮಾನ್ಯತೆ ಕಳೆದುಕೊಂಡವು. ಕೆಲವೊಂದು ಸಮುದಾಯಗಳು ಪರ್ಯಾಯ ವೃತ್ತಿಗಳನ್ನು ಅನುಸರಿಸಿ ಜೀವನ ನಿರ್ವಹಿಸಿದರೆ ಮತ್ತೆ ಕೆಲವು ಭಿಕ್ಷುಕರಾಗಿ ಊರೂರು ಅಲೆದು ಜೀವನ ನಿರ್ವಹಿಸುವಂತಾಯಿತು. ಅಂತಹ ಸಮುದಾಯಗಳಲ್ಲಿ ಕರ್‌ಕರ್ ಮುಂಡ ಸಮುದಾಯವು

ಒಂದಾಗಿದೆ. ಸಾಮ್ರಾಜ್ಯ ಯುಗದ ಗೂಢಾಚಾರಿ ವೃತ್ತಿ, ಭಿಕ್ಷುಕ ವೃತ್ತಿಗೆ ತಳ್ಳಿದೆ. ಸಾಮಾಜಿಕವಾಗಿ ಭಿಕ್ಷುಕರು ಎಂಬ ಹಣೆ ಪಟ್ಟಿಯೊಂದಿಗೆ ಬದುಕುತ್ತಿರುವುದು ವಿಷಾದನೀಯ.

ಪ್ರಸ್ತುತ ಸಮುದಾಯದ ಚಾರಿತ್ರಿಕ ಹಿನ್ನೆಲೆಯನ್ನು ಅರಿಯದೆ ಇರುವುದು ವಿಪರ್ಯಾಸವಾಗಿದೆ. ಕರ್‌ಕರ್‌ಮುಂಡ ಅಲೆಮಾರಿ ಸಮುದಾಯದ ಕುರಿತಾಗಿ ಇಲ್ಲಿಯವರೆಗೆ ಕೇವಲ ಲೇಖನಾತ್ಮಕ ಅಧ್ಯಯನಗಳು ನಡೆದಿದ್ದು ಸಮಗ್ರವಾಗಿ ಅಧ್ಯಯನ ಮಾಡುವ ಅನಿವಾರ್ಯತೆಯನ್ನು ಹೊಗಲಾಡಿಸಲು ಈ ಅಧ್ಯಯನವು ಅಗತ್ಯವಾಗಿದೆ. ಚಹರೆಯ ಸಮಸ್ಯೆಯಿಂದ ಹಿಂದಿನ ಅಧ್ಯಯನಕಾರರು ಜೋಗಿ, ಅಘೋರಿ ಪಂಥಗಳಿಗೆ ತಪ್ಪಾಗಿ ಸಮೀಕರಿಸಿದ್ದಾರೆ. ಅದನ್ನು ವಸ್ತುನಿಷ್ಠವಾಗಿ ವಿಭಾಗಿಸಿ ನೋಡುವ ಉದ್ದೇಶವನ್ನಿಟ್ಟುಕೊಂಡು ಈ ಅಧ್ಯಯನ ಮಾಡಲಾಗಿದೆ. ಕರ್‌ಕರ್ ಮುಂಡರು ತಮ್ಮ ಪಾರಂಪರಿಕ ವೃತ್ತಿಯಿಂದಾಗಿ ಸಾಮಾಜಿಕವಾಗಿ ತಳಸ್ಥರದಲ್ಲಿದ್ದು, ಅವರ ಮೂಲ, ಪ್ರಸಾರ, ಹಂಚಿಕೆ, ಬೆಡಗು, ಆಚರಣೆ–ಸಂಪ್ರದಾಯಗಳಿಂದ ಚಹರೆಯನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಬುಡಕಟ್ಟು ಲಕ್ಷಣಗಳಿದ್ದರೂ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿದ್ದು, ಸರ್ಕಾರಿ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಈ ಸಮುದಾಯ ಆಧುನೀಕರಣ ಮತ್ತು ಜಾಗತೀಕರಣದ ಸಂದರ್ಭದಲ್ಲಿ ಹೇಗೆ ಸ್ಥಿತ್ಯಂತರಗಳಿಗೆ ಒಳಗಾಗಿದೆ. ಇಂತಹ ಅಲೆಮಾರಿ ಸಮುದಾಯ ಅಭಿವೃದ್ಧಿಗೆ ಕೈಗೊಳ್ಳಬಹುದಾದ ಕ್ರಮಗಳ ಕುರಿತು ಅಧ್ಯಯನದಲ್ಲಿ ಸೂಚಿಸಲಾಗಿದೆ.

ಪ್ರಸ್ತುತ ಅಧ್ಯಯನವು ಕರ್‌ಕರ್ ಮುಂಡ ಸಮುದಾಯದ ಚಾರಿತ್ರಿಕ ಹಿನ್ನೆಲೆಯಿಂದ ಚಹರೆಯನ್ನು ಗುರುತಿಸಲಾಗುವುದು. ಶೈಕ್ಷಣಿಕ, ಆರ್ಥಿಕ, ರಾಜಕೀಯವಾಗಿ ಹಿನ್ನಡೆ ಅನುಭವಿಸಿದ್ದು, ಇದಕ್ಕೆ ಕಾರಣವಾದ ಅಂಶಗಳು ಮತ್ತು ಇವರ ಬದುಕಿನಲ್ಲಿ ಉಂಟಾದ ಸ್ಥಿತ್ಯಂತರಗಳನ್ನು ಅನಾವರಣಗೊಳಿಸಿ ಪರಿಹಾರ ಕಂಡುಕೊಳ್ಳಲು ಸಹಕಾರಿಯಾಗುತ್ತದೆ ಎಂಬ ಅಂಶವನ್ನಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಸಂಶೋಧನೆಯು ವಸ್ತು ನಿಷ್ಠತೆಯಿಂದ ಕೂಡಿರಬೇಕಾದರೆ ಅಧ್ಯಯನಕ್ಕೊಂದು ಚೌಕಟ್ಟು, ಸರಹದ್ದು, ಎಲ್ಲೆ ಬೇಕಾಗುತ್ತದೆ. ಆಗ ಮಾತ್ರ ಆ ಕ್ಷೇತ್ರದಲ್ಲಿ ಉತ್ತಮ ಫಲಿತಾಂಶ ಪಡೆಯಬಹುದಾಗಿದೆ. ಕರ್‌ಕರ್ ಮುಂಡರು ಆಂಧ್ರಪ್ರದೇಶದಿಂದ ವಲಸೆ ಪ್ರಕ್ರಿಯೆ ಆರಂಭಿಸಿ ಕರಾವಳಿ ಕರ್ನಾಟಕವನ್ನು ಹೊರತುಪಡಿಸಿ ಎಲ್ಲಾ ಜಿಲ್ಲೆಗಳಲ್ಲಿ

ನೆಲೆಯೂರಿದ್ದಾರೆ. ಅಲೆಮಾರಿ ಸಮುದಾಯವಾಗಿದ್ದು ಅಲ್ಪ ಸಂಖ್ಯಾತವಾಗಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯವನ್ನು ಅಧ್ಯಯನ ವ್ಯಾಪ್ತಿಯನ್ನಾಗಿಸಿಕೊಳ್ಳಲಾಗಿದೆ. ಕರ್ನಾಟಕ ರಾಜ್ಯದ ಜೊತೆಗೆ ತೆಲಂಗಾಣದ ಎಲ್ ಬಿ ನಗರ ಹೈದರಾಬಾದ್, ಆಂಧ್ರಪ್ರದೇಶದ ಗುಂಟೂರುಗಳಲ್ಲಿ ಹೆಚ್ಚಿನ ಮಾಹಿತಿ ಸಂಗ್ರಹಿಸಲಾಗಿದೆ. ಕರ್ನಾಟಕದ ವಿಜಯಪುರ, ಯಾದಗಿರಿ, ಧಾರವಾಡ, ಬಾಗಲಕೋಟೆ, ಬೆಳಗಾವಿ, ರಾಯಚೂರು, ತುಮಕೂರು, ದಾವಣಗೆರೆ, ಬಳ್ಳಾರಿ, ಕೊಪ್ಪಳ, ಚಿತ್ರದುರ್ಗ, ಹಾವೇರಿ ಜಿಲ್ಲೆಗಳಲ್ಲಿ ಮಾಹಿತಿ ಸಂಗ್ರಹಿಸಲಾಗಿದೆ. ತೆಲಂಗಾಣದ ಹೈದ್ರಾಬಾದ್‌ನ ಎಲ್.ಬಿ.ನಗರ ಮತ್ತು ಆಂಧ್ರಪ್ರದೇಶದ ಗುಂಟೂರು ಜಿಲ್ಲೆಗಳಿಂದಲೂ ಮಾಹಿತಿ ಸಂಗ್ರಹಿಸಲಾಗಿದೆ. ಇದರಿಂದ ಕರ್ನಾಟಕದ ವ್ಯಾಪ್ತಿಯ ಜೊತೆಗೆ ಆಂಧ್ರಪ್ರದೇಶ ತೆಲಂಗಾಣ ರಾಜ್ಯಗಳು ಸಂಶೋಧನೆಯನ್ನು ತುಲನಾತ್ಮಕವಾಗಿ ವಿಶ್ಲೇಷಿಸಲು ಸಹಕಾರಿಯಾಗಿದೆ.

**ಅಧ್ಯಯನ ವಿಧಾನಗಳು**

ಸಂಶೋಧನೆಯಲ್ಲಿ ಹಲವಾರು ವಿಧಾನಗಳನ್ನು ಬಳಸಿ ಮಾಹಿತಿ ಸಂಗ್ರಹಿಸಲಾಗಿದೆ. ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ಮಾಹಿತಿಯನ್ನು ಪ್ರಾಥಮಿಕ ಮಾಹಿತಿ ಎಂದು ಹಿಂದೆ ನಡೆದಿರುವ ಅಧ್ಯಯನಗಳಿಂದ ಸಂಗ್ರಹಿಸಿದ ಮಾಹಿತಿಯನ್ನು ಅನುಷಂಗಿಕ ಮಾಹಿತಿ ಎಂದು ಕರೆಯುವರು. ಪ್ರಾಥಮಿಕ ಮಾಹಿತಿ ಸಂಗ್ರಹಿಸಲು ಸಮೀಕ್ಷೆ, ಸಹಭಾಗಿ ಅವಲೋಕನ, ವ್ಯಕ್ತಿ ಅಧ್ಯಯನ (ಏಕ ವಿಷಯ ಅಧ್ಯಯನ), ಸಂದರ್ಶನ ಪ್ರಶ್ನಾವಳಿಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ.

ಕರ್‌ಕರ್ ಮುಂಡರು ಅಲ್ಪ ಸಂಖ್ಯಾತರಾಗಿರುವುದರಿಂದ ವಿಸ್ತೃತ ಸಮೀಕ್ಷೆ ಮಾಡಲಾಗಿದೆ. ರಾಜ್ಯದಲ್ಲಿ ದೊರೆಯಬಹುದಾದಷ್ಟು ಕುಟುಂಬಗಳನ್ನು ಸಂದರ್ಶಿಸಿ ಮಾಹಿತಿ ಸಂಗ್ರಹಿಸಲಾಗಿದೆ. ರಾಜ್ಯದಲ್ಲಿ ೩೨೧ ಕುಟುಂಬಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ. ಧಾರವಾಡ ಜಿಲ್ಲೆಯಲ್ಲಿ ೦೫, ಯಾದಗಿರಿ ೦೪, ಬಾಗಲಕೋಟೆ ೩೬, ಬೆಳಗಾವಿ ೧೧೪, ರಾಯಚೂರು ೫೦, ತುಮಕೂರು ೩೪, ದಾವಣಗೆರೆ ೩೭, ಬಳ್ಳಾರಿ ೦೪, ಕೊಪ್ಪಳ ೧೩, ಚಿತ್ರದುರ್ಗ ೦೮, ಹಾವೇರಿಯಲ್ಲಿ ೧೬ ಕುಟುಂಬಗಳ ಮಾಹಿತಿಯನ್ನು ಸಮೀಕ್ಷೆಯ ಮೂಲಕ ಸಂಗ್ರಹಿಸಲಾಗಿದೆ. ಕೌಟುಂಬಿಕ ಸಮೀಕ್ಷೆಯಲ್ಲಿ ಕರ್‌ಕರ್ ಮುಂಡರ ಕುಲ, ಪರ್ಯಾಯ ಹೆಸರು, ಜನಸಂಖ್ಯೆ, ಸರ್ಕಾರಿ ಸೌಲಭ್ಯಗಳ ಬಳಕೆ, ಪಶು-ಪಕ್ಷಿ ಸಂಪತ್ತು, ವಾಸಿಸುವ ನೆಲೆ, ವಸತಿಯ ಮಾದರಿ, ಕೃಷಿ ಭೂಮಿ, ಆಧಾರ್‌ಕಾರ್ಡ್, ಓಟಿನ ಚೀಟಿ, ಜಾಬ್‌ಕಾರ್ಡ್, ಶೈಕ್ಷಣಿಕ ಸ್ಥಿತಿಗತಿ, ಲಿಂಗಾನುಪಾತ, ವೈವಾಹಿಕ ಸ್ಥಿತಿ ಇತ್ಯಾದಿ ಅಂಶಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಲಾಗಿದೆ.

ಕರ್‌ಕರ್ ಮುಂಡರ ನಂಬಿಕೆ, ಆಚರಣೆ, ಜೀವನಾವರ್ತಕ ಆಚರಣೆಗಳು, ಚಾರಿತ್ರಿಕ ಹಿನ್ನಲೆ ಮತ್ತು ಐತಿಹ್ಯಗಳು ಇತ್ಯಾದಿ ಅಂಶಗಳ ಕುರಿತು ಸಮಗ್ರ ಮಾಹಿತಿ ಸಂಗ್ರಹಿಸಲು ೧೫ ಜನರನ್ನು ಏಕ ವಿಷಯ ಅಧ್ಯಯನ ವಿಧಾನದ ಮೂಲಕ ಸಂದರ್ಶಿಸಿ ಮಾಹಿತಿ ಕಲೆ ಹಾಕಲಾಗಿದೆ.

ಅಧ್ಯಯನ ವಿಧಾನಗಳಲ್ಲಿ ಕರ್‌ಕರ್‌ಮುಂಡ ಸಮುದಾಯದ ಕುರಿತಾಗಿ **ಐತಿಹಾಸಿಕ** ವಿಧಾನದ ಮೂಲಕ ಸಮುದಾಯದ ಚಾರಿತ್ರಿಕ ಹಿನ್ನಲೆಯನ್ನು ತಿಳಿಲಾಗಿದೆ. ಪ್ರಶ್ನಾವಳಿ ವಿಧಾನದಿಂದ ಕರ್‌ಕರ್ ಮುಂಡ ಸಮುದಾಯದ ಜೀವನಾವರ್ತಕ ಮತ್ತು ವಾರ್ಷಿಕಾವರ್ತನ ಆಚರಣೆಗಳನ್ನು ಜೊತೆಗೆ ಸ್ಥಿತಿಗತಿಯನ್ನು ತಿಳಿಯಲಾಗಿದೆ. ಅಂಕಿ-ಸಂಖ್ಯೆ ಶಾಸ್ತ್ರೀಯ ವಿಧಾನದ ಮೂಲಕ ದತ್ತಾಂಶಗಳನ್ನು ಪಟ್ಟಿಕರಣ ಮಾಡಿ ಶೇಕಡಾವಾರು ಮಾಹಿತಿ ಸಂಗ್ರಹಿಸಲಾಗಿದೆ. ಸಹಭಾಗಿ ಅವಲೋಕನದ ಮೂಲಕ ಸಮುದಾಯದ ಹಬ್ಬ, ಮದುವೆ ಇತ್ಯಾದಿ ಆಚರಣೆ ಸಂಪ್ರದಾಯಗಳ ಮಾಹಿತಿ ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಸಂಶೋಧನಾ ವಿನ್ಯಾಸ**

'ಕರ್‌ಕರ್ ಮುಂಡರ ಸಾಮಾಜಿಕ ಅಧ್ಯಯನ' ಶೀರ್ಷಿಕೆ ಅಡಿಯಲ್ಲಿ ಸಂಶೋಧನೆಯನ್ನು ಕೈಗೊಳ್ಳಲಾಗಿದ್ದು ಅಧ್ಯಯನದಲ್ಲಿ ಹಲವು ವಿಧಾನಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಪ್ರಶ್ನಾವಳಿ, ಸಂದರ್ಶನ, ವ್ಯಕ್ತಿ ಅಧ್ಯಯನ (ಏಕ ವಿಷಯ), ಅವಲೋಕನಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದ್ದು, ಅದನ್ನು ಸಂಶೋಧನಾ ಚೌಕಟ್ಟಿನೊಳಗೆ ಜೋಡಿಸಲು ಸಂಶೋಧನಾ ವಿನ್ಯಾಸವನ್ನು ರಚಿಸಿಕೊಳ್ಳಲಾಯಿತು. ಆ ಮೂಲಕವಾಗಿ ಮಾಹಿತಿಯುನ್ನು ಆರು ಅಧ್ಯಾಯಗಳಲ್ಲಿ ಕ್ರಮಾನುಗತವಾಗಿ ಜೋಡಿಸಲಾಗಿದೆ.

**ಅಧ್ಯಾಯ** ಒಂದರಲ್ಲಿ ಅಧ್ಯಯನದ ಪ್ರವೇಶ, ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ, ಪ್ರಾಕಲ್ಪನೆ, ಅಧ್ಯಯನದ ಉದ್ದೇಶಗಳು, ಅಧ್ಯಯನದ ವ್ಯಾಪ್ತಿ, ಅನುಸರಿಸಿರುವ ವಿಧಾನ, ಅಧ್ಯಯನದ ಸ್ವರೂಪ, ಅಧ್ಯಯನದ ಮಹತ್ವ ಎಂಬ ಉಪಶೀರ್ಷಿಕೆಗಳಲ್ಲಿ ಸಂಶೋಧನಾ ವಿಧಾನಗಳನ್ನು ತಿಳಿಸಲಾಗಿದೆ.

**ಅಧ್ಯಾಯ ಎರಡು** : ಸಂಸ್ಕೃತಿಯ ವಿಕಾಸ ಕರ್‌ಕರ್ ಮುಂಡ ಸಮುದಾಯ ಎಂಬ ಶೀರ್ಷಿಕೆಯನ್ನು ನೀಡಿದ್ದು, ಇದರಲ್ಲಿ ಕರ್‌ಕರ್‌ಮುಂಡ ಸಮುದಾಯದ ಚಾರಿತ್ರಿಕ ಹಿನ್ನೆಲೆ, ಪದನಿಷ್ಪತ್ತಿ, ಪ್ರಾದೇಶಿಕ ಮಿತಿಯಲ್ಲಿನ ಮುಂಡಾಲಬಂಡ, ಮೊಂಡ ಜೇಡರು ಎಂಬ ಪರ್ಯಾಯ ಹೆಸರುಗಳ ಪದನಿಷ್ಪತ್ತಿ ಮತ್ತು ಹಿನ್ನಲೆಯನ್ನು ತಿಳಿಸುವ ಪ್ರಯತ್ನ

ಮಾಡಲಾಗಿದೆ. ಕರ್‌ಕರ್ ಮುಂಡ ಸಮುದಾಯ ಚಹರೆಯನ್ನು ಬೆಡಗು, ಆಚರಣೆ ಮತ್ತು ಸಂಪ್ರದಾಯಗಳ ಹಿನ್ನಲೆಯಲ್ಲಿ ಅನುಷಂಗಿಕ ಕುಲಶಾಸ್ತ್ರೀಯ ಅಧ್ಯಯನಗಳು ಮತ್ತು ಕ್ಷೇತ್ರಕಾರ್ಯ ಮಾಹಿತಿಯಿಂದ ದೃಢಪಡಿಸುವ ಪ್ರಯತ್ನ ಮಾಡಲಾಗಿದೆ. ಈ ಅಧ್ಯಾಯವು ಕರ್‌ಕರ್ ಮುಂಡರ ಚಹರೆಯನ್ನು ಅರಿಯುವಲ್ಲಿ ಸಹಕಾರಿಯಾಗಿದೆ.

**ಅಧ್ಯಾಯ ಮೂರು** : ಕರ್‌ಕರ್‌ಮುಂಡರ ಸಾಮಾಜಿಕ ಬದುಕನ್ನು ತಿಳಿಯಲು ಸಹಾಯಕವಾಗಿದೆ. ಈ ಅಧ್ಯಾಯದಲ್ಲಿ ಸಮುದಾಯದ ಕೌಟುಂಬಿಕ ವ್ಯವಸ್ಥೆ, ವಾಸಿಸುವ ನೆಲೆ, ಮನೆಯ ಮಾದರಿಗಳು, ಆಹಾರ ಪದ್ಧತಿ, ಬಂಧುತ್ವ, ಮೊಂಡ ದೀಕ್ಷೆ, ಭಿಕ್ಷೆ, ಬೇಟೆ, ಕುಲಪಂಚಾಯ್ತಿ, ಕಸುಬುಗಳು, ಆರಾಧನಾ ದೈವಗಳು, ಹಬ್ಬ-ಜಾತ್ರೆಗಳು ಮತ್ತು ಜನಪದ ಸಾಹಿತ್ಯ ಕುರಿತಂತೆ ಬೆಳಕು ಚೆಲ್ಲುತ್ತದೆ.

**ಅಧ್ಯಾಯ ನಾಲ್ಕು** : ಸಮುದಾಯದ ಜೀವನಾವರ್ತನ ಆಚರಣೆಗಳು, ಜನನ ಸಂಬಂಧಿ ಆಚರಣೆಗಳು ಇದರಲ್ಲಿ ನಾಮಕರಣ, ಬಾಣಂತಿ, ಜವುಳ, ಋತುಮತಿ, ವಿವಾಹ, ಮರುವಿವಾಹ (ಕೂಡಿಕೆ) ಶವಸಂಸ್ಕಾರದ ಆಚರಣೆಗಳನ್ನು ಮತ್ತು ಸ್ಥಿತ್ಯಂತರಗಳನ್ನು ವಿವರಿಸಲಾಗಿದೆ.

**ಅಧ್ಯಾಯ ಐದು** : ಕರ್‌ಕರ್ ಮುಂಡರ ಪ್ರಸ್ತುತ ಸ್ಥಿತಿಗತಿಗಳು ಕರ್ನಾಟಕದಲ್ಲಿ ಹಂಚಿಕೆಯಾಗಿರುವ ಈ ಸಮುದಾಯದ ಪ್ರಸ್ತುತ ಸಂದರ್ಭದ ಶೈಕ್ಷಣಿಕ ಸ್ಥಿತಿಗತಿ, ಆರ್ಥಿಕತೆ, ಸರ್ಕಾರಿ ಸೌಲಭ್ಯಗಳ ಫಲಾನುಭವಿಗಳ ವಿವರ, ಹಂದಿಸಾಕಾಣಿಕೆ, ಕೂದಲು ವ್ಯಾಪಾರ, ಭಿಕ್ಷಾಟನೆಯಲ್ಲಿ ತೊಡಗಿರುವವರ ಪ್ರಮಾಣವನ್ನು ಮತ್ತು ಜನಸಂಖ್ಯೆ, ಲಿಂಗ ಪ್ರಮಾಣ, ವೈವಾಹಿಕ ಸ್ಥಿತಿಗತಿಗಳ ಕುರಿತು ಕೋಷ್ಟಕಗಳ ಮೂಲಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಅಧ್ಯಾಯ ಆರು** : ಫಲಿತಗಳು, ಸಲಹೆಗಳು ಅಧ್ಯಯನದ ಮುಂದಿನ ಸಾಧ್ಯತೆಗಳು. ಕರ್‌ಕರ್ ಮುಂಡರ ಕುರಿತಾಗಿ ಕೈಗೊಂಡಿರುವ ಅಧ್ಯಯನದಲ್ಲಿ ವ್ಯಕ್ತವಾದ ಫಲಿತಗಳನ್ನು ಜೊತೆಗೆ ಸಲಹೆಗಳನ್ನು ತಿಳಿಸುವ ಪ್ರಯತ್ನವನ್ನು ಸಮಾರೋಪ ಅಧ್ಯಯನದಲ್ಲಿ ತಿಳಿಸಲಾಗಿದೆ. ನಂತರ ಅನುಬಂಧದಲ್ಲಿ ಆಧಾರಗ್ರಂಥಗಳು, ನಕ್ಷೆಗಳು, ಛಾಯಾಚಿತ್ರಗಳು, ವಕ್ತೃಗಳ ವಿವರವನ್ನು ಜೋಡಿಸಲಾಗಿದೆ. ಒಟ್ಟು ಆರು ಅಧ್ಯಾಯಗಳಲ್ಲಿ ಸಮುದಾಯದ ಚಿತ್ರಣವನ್ನು ಸಾಮಾಜಿಕವಾಗಿ ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದೆ.

## ಅಧ್ಯಾಯ ಎರಡು

## ಕರ್‌ಕರ್ ಮುಂಡ ಸಮುದಾಯದ ಚಾರಿತ್ರಿಕ ಹಿನ್ನೆಲೆ

ಪ್ರಾರಂಭಿಕ ಕಾಲದಿಂದಲೂ ಆದಿಮಾನವ ತನ್ನದೇ ಆದ ಮೂಲ ಸಂಸ್ಕೃತಿಯೊಂದನ್ನು ರೂಪಿಸುವ ಪ್ರಯತ್ನಗಳನ್ನು ಮಾಡುತ್ತಲೇ ಬಂದಿದ್ದಾನೆ. ಈ ಪ್ರಯತ್ನದಲ್ಲಿ ಆತನು ಪ್ರಕೃತಿ ಸನ್ನಿವೇಶಗಳನ್ನು ಗೆದ್ದದ್ದು ಇಲ್ಲವೇ ಪ್ರಕೃತಿಯೊಡನೆ ಮಾಡಿಕೊಂಡ ಹೊಂದಾಣಿಕೆಗಳು ಪ್ರತಿಬಿಂಬತವಾಗುತ್ತವೆ. ಪ್ರಾರಂಭದಲ್ಲಿ ಆಹಾರ ಶೇಖರಣೆ ಮಾಡುವ ಸಸ್ಯಾಹಾರಿ ಸಮಾಜವೊಂದು ಕಾಣಿಸಿಕೊಂಡು, ಅದು ಮಾಂಸಹಾರಿ ಸಮಾಜಕ್ಕೆ ಎಡೆಮಾಡಿಕೊಟ್ಟಿತು. ಕ್ರಮೇಣ ಆಹಾರ ಸಂಗ್ರಹಣೆ ಮತ್ತು ಬೇಟೆಗಾರ ಸಮಾಜಗಳು ಸೃಷ್ಟಿಯಾದವು. ಈ ಹಂತದ ಸಾಂಸ್ಕೃತಿಕ ವಿಕಾಸವನ್ನು ಕಾರ್ಲ್‌ಮಾರ್ಕ್ಸ್ "ಫುಡ್‌ಗ್ಯಾದರಿಂಗ್ ಮತ್ತು ಹಂಟಿಂಗ್ ಸ್ಟೇಜ್"(ಶ್ರೀನಿವಾಸ ರೆಡ್ಡಿ ಕೆ:೨೦೦೮:೩೧೦) ಎಂದು ಹೆಸರಿಸಿದ್ದಾರೆ. ಆಹಾರ ಸಂಗ್ರಹಣೆ ಮತ್ತು ಬೇಟೆಗಾರ ಸಮಾಜಗಳು ಮುಂದೆ ಪಶುಪಾಲನೆಯ ಜೊತೆಗೆ ಬೇಟೆಯನ್ನು ಬೆರೆಸಿಕೊಂಡು 'ಬೇಟೆಗಾರ ಪಶುಪಾಲಕ ಸಮಾಜಗಳಾಗಿ ರೂಪಿತವಾದವು. ಸಾವಿರಾರು ಚದರ ಮೈಲಿ ಹರಡಿರುವ ಹುಲ್ಲುಗಾವಲು ಪ್ರದೇಶಗಳಲ್ಲಿ ರೂಪತಾಳಿದ ಇಂತಹ ಸಮುದಾಯಗಳು ಮುಂದೆ ಅಲೆಮಾರಿ ಸಮುದಾಯಗಳಾದವು. ತಮ್ಮ ಪಶು ಸಂಪತ್ತನ್ನು ಕಾಡುಮೃಗಗಳಿಂದ ರಕ್ಷಿಸಿಕೊಳ್ಳಲು ಬಿಲ್ಲು, ಕೊಡಲಿ ಇತ್ಯಾದಿ ಆಯುಧಗಳನ್ನೇ ಹಿಡಿಯಬೇಕಾಯಿತು. ಇದರಿಂದ ಬೇಟೆಗೆ ಸಂಬಂಧಪಟ್ಟ ದೀಕ್ಷಾ ವಿಧಿಗಳು ಸಂಸ್ಕೃತಿಯ ಅಂಗವಾಗಿ ಬೆಳೆಯತೊಡಗಿದವು. ಇದರ ಜೊತೆಗೆ ಇವರ ಜೀವನ ಶೈಲಿ, ಮನರಂಜನೆ, ಆಚರಣೆಗಳೆಲ್ಲವೂ ತಮ್ಮ ವೃತ್ತಿ ಜೀವನದ ಸುತ್ತಲೂ ಹೆಣೆಯಲ್ಪಟ್ಟಿವು. ಪಶುಸಂಪತ್ತಿನ ಪರಿಕಲ್ಪನೆಯ ಕಾಲಘಟ್ಟದಲ್ಲಿ ನೆರೆಹೊರೆಯ ಸಮೂಹಗಳಿಂದ ದನಕರುಗಳನ್ನು ಕೊಳ್ಳೆಹೊಡೆದು ಅಥವಾ ಯುದ್ಧಮಾಡಿ

ಹಿಂದಿರುಗಿದ ವರ್ಗಗಳು ಬಹು ವಿಜೃಂಭಣೆಯಿಂದ ಆಚರಿಸಲ್ಪಡುತ್ತಿದ್ದರು. ಈ ಹಂತದ ಸಮುದಾಯಗಳಲ್ಲಿ ಭೂಮಿಸಂಪತ್ತಿನ ಪರಿಕಲ್ಪನೆ ಇರಲಿಲ್ಲ. ಬದಲಾಗಿ ಪಶುಸಂಪತ್ತಿನ ತಿಳುವಳಿಕೆ ಮೈಗೂಡಿಸಿಕೊಂಡಿತ್ತು. ಅತಿಹೆಚ್ಚಿನ ಗೋ ಸಂಪತ್ತು ಹೊಂದಿದವರು ಆರ್ಥಿಕವಾಗಿ ಬಲಿಷ್ಟರಾಗುವುದರ ಜೊತೆಗೆ ಸಾಮ್ರಾಜ್ಯಗಳನ್ನು ಕಟ್ಟಿಕೊಂಡು ಜೀವಿಸತೊಡಗಿದರು. ಇದು ನಮ್ಮ ಇತಿಹಾಸ ಕಾಲದ "೧೬ ಮಹಾ ಜನಪದಗಳು ಮತ್ತು ಗಣರಾಜ್ಯಗಳ" (ಸದಾಶಿವ ಕೆ:೨೦೧೦:೧೪೨) ಕಾಲದಲ್ಲಿ ಪ್ರಚಲಿತವಾಗಿರುವುದು ದೃಢವಾಗಿದೆ. ಗೋಸಂಪತ್ತಿಗಾಗಿ ಮಹಾಭಾರತದ ವಿರಾಟಪರ್ವದ ಉತ್ತರ ಕುಮಾರನ ಪ್ರಸಂಗ ಹಾಗೂ"ಚಿತ್ರದುರ್ಗದ ಮದಕರಿ ನಾಯಕ ಮತ್ತು ರಾಯದುರ್ಗದ ಪಾಳೇಯಗಾರರ" (ಶಿವರುದ್ರಸ್ವಾಮಿ ಎಸ್ ಎನ್:೨೦೧೦:೫೦೨)ನಡುವೆ ನಡೆದ ಕುಯ್ಲುಹಳ್ಳಿ ಯುದ್ಧಗಳಿಂದ ಖಚಿತ ಪಡಿಸಿಕೊಳ್ಳಬಹುದಾಗಿದೆ. ಪಶುಪಾಲಕರಿಂದ ಛಿದ್ರಗೊಂಡ ಕೆಲವೊಂದು ಸಮುದಾಯಗಳು ನದಿ ಬಯಲು ಪ್ರದೇಶಗಳಲ್ಲಿ ಕೃಷಿಯಲ್ಲಿ ತೊಡಗಿದರು. ಇಂತಹ ಕೃಷಿವರ್ಗ ಸೃಷ್ಟಿಯಾಗಿ ನಾಗರಿಕತೆಗಳು ಉದ್ಭವಿಸಿದವು. ನಾಗರಿಕತೆಯಿಂದಾಗಿ ಮಾನವ ಅಲೆಮಾರಿತನದಿಂದ ವಿರಾಮಹೊಂದಿ ಕೃಷಿಯಲ್ಲಿ ತೊಡಗಿದ್ದರಿಂದ ಹಳ್ಳಿ, ಪಟ್ಟಣ, ಸಾಮ್ರಾಜ್ಯಗಳು ಹುಟ್ಟಿಕೊಂಡವು. ಆದರೆ ಪ್ರದೇಶದಿಂದ ಪ್ರದೇಶಕ್ಕೆ ಅಲೆದಾಡುತ್ತಿದ್ದ ಅಲೆಮಾರಿ ಸಮುದಾಯಗಳಿಗೆ ನಿರ್ದಿಷ್ಟ ಗಡಿ ಇಲ್ಲದೆ ಯಾವುದೇ ಸಾಮ್ರಾಜ್ಯದ ಪ್ರಭುತ್ವಕ್ಕೆ ಒಳಗಾಗಲಿಲ್ಲ. ಕಾಡನ್ನು ದೇವರೆಂದು ನಂಬಿಕೊಂಡು ಪ್ರಕೃತಿ ಆರಾಧನಾ ಸಮುದಾಯಗಳು ಅನ್ಯಪ್ರದೇಶದ ಜನತೆಯ ಆಕ್ರಮಣದಿಂದಾಗಿ ಕ್ರಮೇಣ ಉತ್ತರದಿಂದ ದಕ್ಷಿಣದ ಕಡೆಗೆ ವಲಸೆಪ್ರಕ್ರಿಯೆ ಆರಂಭಿಸಿದವು. ಇದಕ್ಕೆ ಮೂಲ ಕಾರಣವಾದವರು ಆರ್ಯರು.

ಭಾರತದಲ್ಲಿ ಗಣರಾಜ್ಯಗಳ ಯುಗದಲ್ಲಿ ಆರ್ಯರು ಮಧ್ಯಏಷ್ಯಾದಿಂದ ಬಂದವರು ಎಂದು ಇತಿಹಾಸತಜ್ಞರ ಅಧ್ಯಯನಗಳಿಂದ ದೃಢಪಡಿಸಲಾಗಿದೆ. ಇವರ ರಕ್ತಯುತ ಆಕ್ರಮಣಗಳು ಭಾರತದ ಮೂಲನಿವಾಸಿ ಬುಡಕಟ್ಟುಗಳ ಮೇಲೆ ಬಲವಾದ ಪೆಟ್ಟುನೀಡಿದವು. ಇದರಿಂದಾಗಿ ಭಾರತದ ಮೂಲಿಗರು ಮತ್ತು ಸಾಂಸ್ಕೃತಿಕ ಅನನ್ಯತೆ ಹೊಂದಿದ ಆದಿಮ ಬುಡಕಟ್ಟುಗಳಾದ ಶಬರ, ವ್ಯಾದ, ಗೊಂಡ, ಕಿರಾತ, ಮುಂಡ, ಬಿಲ್ಲವ (ಚಂದ್ರಪ್ಪ ಎನ್:೨೦೦೪:೦೨) ಇತ್ಯಾದಿಗಳು ದಕ್ಷಿಣ ಭಾರತದ ವಿಂದ್ಯಾಪರ್ವತ, ಸಾತ್ಪುರ, ಪಶ್ಚಿಮ ಪೂರ್ವ ಘಟ್ಟಗಳ ಅರಣ್ಯ ಪ್ರದೇಶಗಳಲ್ಲಿ ನೆಲೆಯೂರಿದವು. ಆರ್ಯರು ಸಿಂಧೂ, ಗಂಗಾ, ಯಮುನಾ, ಬ್ರಹ್ಮಪುತ್ರ ಇತ್ಯಾದಿ ಫಲವತ್ತಾದ ನದಿ ಬಯಲು ಪ್ರದೇಶಗಳಲ್ಲಿ ನೆಲೆನಿಂತರು. ಕೃಷಿಯನ್ನು ಅವಲಂಬಿಸಿದ ಪರಿಣಾಮ ಚಿಕ್ಕ ಚಿಕ್ಕ ಗಣರಾಜ್ಯಗಳು ರೂಪುಗೊಂಡವು. ಅಳಿದುಳಿದ ಮೂಲನಿವಾಸಿ ಸಮುದಾಯಗಳು ಈ

ಹಿಂದಿನ ದಾಳಿಗಳ ಪರಿಣಾಮವಾಗಿ ತಮ್ಮಲ್ಲಿಯೇ ಒಬ್ಬ ನಾಯಕನನ್ನು ಆಯ್ದುಕೊಂಡು ಉಳಿದವರೆಲ್ಲ ಬೆನ್ನೆಲುಬಾಗಿ ನಿಂತು ಸಣ್ಣ ಸಣ್ಣ ಪಾಳೆಯಪಟ್ಟುಗಳನ್ನು ರೂಪಿಸಿಕೊಂಡವು. ರಾಜಪ್ರಭುತ್ವ ಅನುವಂಶೀಯವಾದಾಗ ಪೂರಕವಾಗಿ ನಿರ್ವಹಿಸುತ್ತಿದ್ದು ಕಾರ್ಯಗಳು ವೃತ್ತಿಗಳಾಗಿ, ವರ್ಣವ್ಯವಸ್ಥೆ ಅಸ್ತಿತ್ವಕ್ಕೆ ಬಂದಿತು. ಗುಪ್ತರ ಕಾಲದಲ್ಲಿ ವರ್ಣವ್ಯವಸ್ಥೆ ಜಾತಿಯಾಗಿ ಕಟುವಾದದ್ದನ್ನು ಕಾಣಬಹುದಾಗಿದೆ.

ಭಾರತ ಸಂಸ್ಕೃತಿಯ ವಿಕಾಸದಲ್ಲಿ ಮತ್ತೊಂದು ತಿರುವು ನೀಡಿದ್ದೆಂದರೆ ಭಾರತಕ್ಕೆ ಯೂರೋಪಿಯನ್ನರ ಆಗಮನ. ವಿಶಾಲ ಭಾರತದಲ್ಲಿ ಅನೇಕ ಸಣ್ಣಪುಟ್ಟ ರಾಜ್ಯಗಳು ಮತ್ತು ಸಾಮ್ರಾಜ್ಯಗಳು ಆಳ್ವಿಕೆ ನಡೆಸುತ್ತಿದ್ದ ಕಾಲಾವಧಿಯಲ್ಲಿ ಭಾರತೀಯ ಉತ್ಪನ್ನಗಳಾದ ಸಂಬಾರಪದಾರ್ಥಗಳು, ಸೌಂದರ್ಯವರ್ಧಕ ವಸ್ತುಗಳು ಭಾರತದ ವಾಯುವ್ಯ ಭಾಗದ ಖೈಬರ್ ಮತ್ತು ಬೋಲನ್ ಕಣಿವೆಯ ಭೂಮಾರ್ಗದ ಮೂಲಕ ಯುರೋಪಿಯನ್ನರಿಗೆ ಸರಬರಾಜು ಆಗುತ್ತಿದ್ದವು. ಈ ವಸ್ತುಗಳು ಯುರೋಪಿನ ಜನತೆಗೆ ಅನಿವಾರ್ಯವು ಆದಾಗ ಅವುಗಳ ಬೇಡಿಕೆ ದಿನೆ ದಿನೇ ಹೆಚ್ಚಾಗತೊಡಗಿತು. ಇದಕ್ಕೆ ತಡೆಯೊಡ್ಡಿದ ಪ್ರಮುಖ ಘಟನೆ "೧೪೫೩ರಲ್ಲಿ ಟರ್ಕರು ಕಾನ್‌ಸ್ಟಂಟ್‌ನೋಪಲ್(ಇಸ್ತಾಂಬುಲ್) ನಗರವನ್ನು ವಶಪಡಿಸಿಕೊಂಡು ಭಾರತ ಮತ್ತು ಯುರೋಪಿನ ಏಕೈಕ ಭೂಮಾರ್ಗವನ್ನೇ ಕಡಿತಗೊಳಿಸಿದರು"(ಬಿಪಿನ್‌ಚಂದ್ರ;೨೦೧೨:೬೬). ಪರಿಣಾಮವಾಗಿ ಯುರೋಪಿನಲ್ಲಿ ಹುಟ್ಟಿಕೊಂಡ ಭೂಅನ್ವೇಷಣೆಗಳು ವಿಶ್ವದ ಹಲವು ದೇಶಗಳ ಸಾಂಸ್ಕೃತಿಕ ಪಲ್ಲಟಗಳಿಗೆ ಪ್ರಮುಖ ಕಾರಣವಾದವು. "೧೪೯೮ರಲ್ಲಿ ಪೋರ್ಚ್‌ಗೀಸ್‌ನ ವಾಸ್ಕೋಡಿಗಾಮನು" (ಅದೇ:೬೭) ಭಾರತಕ್ಕೆ ಬಂದಿಳಿದು ಕಡಿತಗೊಂಡಿದ್ದ ಭೂಮಾರ್ಗಕ್ಕೆ ಬದಲಿವ್ಯವಸ್ಥೆಯಾಗಿ ಜಲಮಾರ್ಗವನ್ನು ಕಂಡುಹಿಡಿದನು. ಇದರಿಂದ ಕ್ರಮವಾಗಿ ಪೋರ್ಚ್‌ಗೀಸರು, ಡಚ್ಚರು, ಫ್ರೆಂಚರು, ಇಂಗ್ಲಿಷರು ಭಾರತಕ್ಕೆ ಬಂದರು.

ವ್ಯಾಪಾರ ಮತ್ತು ತಮ್ಮ ದೇಶದ ಐಶರಾಮಿ ಬದುಕಿನ ಜನತೆಯ ಬೇಡಿಕೆ ಈಡೇರಿಸಲು ಬಂದ ಈ ಯುರೋಪಿಯನ್ನರು, ಭಾರತದಲ್ಲಿನ ಅರಾಜಕತೆ, ಅಂತರಿಕ ಮತ್ಸರ, ಅಸಂಘಟಿತತೆಯನ್ನು ಮನಗೊಂಡು ಭಾರತೀಯ ರಾಜಕೀಯವಲಯದಲ್ಲಿ ಹಸ್ತಕ್ಷೇಪಮಾಡತೊಡಗಿದರು. ಇದರಿಂದ ಭಾರತದಲ್ಲಿ ರಾಜಪ್ರಭುತ್ವದ ಅವನತಿ ಮತ್ತು ಅಧೀನತೆಯ ಲಕ್ಷಣಗಳು ಕಂಡುಬಂದವು. ಸ್ವತಂತ್ರ ರಾಜ್ಯಗಳ ಆಡಳಿತದ ಅವಧಿಯಲ್ಲಿ ರಾಜನ ಆಡಳಿತ ಮತ್ತು ರಾಜ್ಯದ ಉಳುವಿಗಾಗಿ ಯುರೋಪಿಯನ್ನರಿಗೆ ವಿರುದ್ಧವಾಗಿ ಕಾರ್ಯನಿರ್ವಹಿಸಿದ್ದವು. ರಾಜನ ಪರವಾಗಿ ಕಾರ್ಯನಿರ್ವಹಿಸಿದ ಆಪ್ತವರ್ಗಗಳು ಸಹಜವಾಗಿ ಬ್ರಿಟಿಷರ ಕೆಂಗಣ್ಣಿಗೆ ಗುರಿಯಾಗಿ ದಮನೀಯ ಸ್ಥಿತಿಗೆ ಬರಬೇಕಾಯಿತು.

ಕರಕುಶಲ ವರ್ಗಗಳು, ಪಾತ್ರದವರು, ಭವಿಷ್ಯ, ಕಣಿ ಹೇಳುವ, ತಳವಾರಿಕೆ, ಗುಪ್ತಚರವರ್ಗಗಳು ತಮ್ಮ ಮೂಲ ನೆಲೆಯಿಂದ ಹೊರಬರಬೇಕಾಯಿತು. ಆ ಸಂದರ್ಭದಲ್ಲಿಯೂ ಅವರನ್ನು ಬೆಂಬಿಡದೇ ಕಾಡಿದ್ದು ಬ್ರಿಟಿಷರ "೧೮೭೧ ಅಪರಾಧಿ ಬುಡಕಟ್ಟು ಕಾಯ್ದೆ". (ಮೇತ್ರಿ ಕೆ ಎಂ ಮತ್ತು ಗುರುಲಿಂಗಯ್ಯ ಸಂ:೨೦೧೦:೨೩)

ಬ್ರಿಟಿಷರು ಭಾರತದಲ್ಲಿ ಬೇರೂರಿದ ಮೇಲೆ ಶಿಷ್ಟವರ್ಗದ ಚಲನವಲನಗಳನ್ನು ಅವರ ವೈದಿಕ ಸಾಹಿತ್ಯದ ಮೂಲಕ ಅರಿತು ತಮ್ಮ ಹತೋಟಿಗೆ ತಂದುಕೊಂಡರು. ವೈವಿಧ್ಯಮಯ ಭಾಷೆ, ಜೀವನ ವಿಧಾನ, ಸಂಸ್ಕೃತಿಹೊಂದಿದ ಸ್ವಾಭಿಮಾನಿ ಬುಡಕಟ್ಟು ಸಮುದಾಯಗಳು ಬ್ರಿಟಿಷರ ಆಡಳಿತಯಂತ್ರ ಸಲೀಸಾಗಿ ನಡೆಯಲು ತೊಡಕಾಗಿದ್ದರು. ಇವರನ್ನು ಅರಿಯಲು ಭಾಷೆ, ಸಾಹಿತ್ಯ ಕೊರತೆ ಇದ್ದುದರಿಂದ ಇವರು ಕಂಡುಕೊಂಡ ಮಾರ್ಗ 'Criminal tribe act' ಈ ಆಕ್ಟ್‌ನ ಪ್ರಕಾರವಾಗಿ ಬ್ರಿಟಿಷರಿಗೆ ಸಹಕರಿಸದ ಮತ್ತು ಸ್ವಾತಂತ್ರ್ಯಕ್ಕೆ ಧಕ್ಕೆ ಮಾಡಿದವರ ವಿರುದ್ಧ ಅಭೇದ್ಯ ರಕ್ಷಣ ತಂತ್ರಗಳನ್ನು ಮೈಗೂಡಿಸಿಕೊಂಡಿದ್ದ ಬುಡಕಟ್ಟು ಸಮುದಾಯಗಳು ಅಪರಾಧಿ ಹಣೆಪಟ್ಟಿಯೊಂದಿಗೆ ಬ್ರಿಟಿಷರು ನಿರ್ಮಿಸಿದ ಬೇಲಿಯೊಳಗೆ ಜೀವಿಸುವಂತಾಯಿತು.

ವಸಹಾತು ಕಾಲಘಟ್ಟದ ಆದಿವಾಸಿ ಮತ್ತು ಪ್ರದರ್ಶನ ಕಲೆಯ ಸಮುದಾಯಗಳ ಪಲ್ಲಟ, ಮೊಗಲ್ ಕಾಲದ ಕಟ್ಟುನಿಟ್ಟಾದ ಆಡಳಿತಾತ್ಮಕ ನಿಯಮಗಳಿಂದ ಆರಂಭವಾಯಿತು. ಮಧ್ಯಯುಗೀನ ಕಾಲದಲ್ಲಿ ವೃತ್ತಿಗಾಯಕ ಮತ್ತು ಪ್ರದರ್ಶನ ಕಲೆಗಳನ್ನು ಅವಲಂಬಿಸಿದ್ದ ಸಮುದಾಯಗಳು ಸ್ಥಳೀಯ ಸಾಮಂತ ಮತ್ತು ರಾಜಪ್ರಭುತ್ವವನ್ನು ಅವಲಂಬಿಸಿಯೇ ಬದುಕಬೇಕಿತ್ತು. ಇವರುಗಳ ದಾನ ಇನಾಮುಗಳನ್ನು ಸದಾ ನಿರೀಕ್ಷಿಸುತ್ತಲೇ ಇರಬೇಕಾದ ಜೀವನ ಮತ್ತು ಶ್ರೀಮಂತರು, ಭೂಮಾಲೀಕರು, ರಾಜರು ಕೆಲವು ವಿಶೇಷ ಸಂದರ್ಭಗಳಲ್ಲಿ ಈ ಕಲಾವಿದರನ್ನು ಕರೆದು ಮನರಂಜನೆ ಪಡೆದು ಇದಕ್ಕೆ ಪ್ರತಿಯಾಗಿ ಕಾಣಿಕೆಗಳನ್ನು ಕೊಡುತ್ತಿದ್ದರು. ಹಳ್ಳಿಯ ಹಬ್ಬ ಹರಿದಿನಗಳಲ್ಲಿ ಜನರು ಒಟ್ಟಾಗಿ ಸೇರಿಸಿ ಆಯಾ (ವರ್ತನೆ) ಕೊಟ್ಟು ಇವರನ್ನು ಪೋಷಿಸುವುದರ ಜೊತೆಗೆ ಕಲೆಯ ಉಳುವಿಗೆ ಕಾರಣವಾಗುತ್ತಿದ್ದರು. ಇಂತಹ ನಿರೀಕ್ಷೆಗಳನ್ನು ಇಟ್ಟುಕೊಂಡು ತಮ್ಮೊಳಗಿನ ನೋವನ್ನು ನುಂಗಿಕೊಂಡು ಮನರಂಜನೆಯನ್ನು ಉಣಬಡಿಸುತ್ತಾ ಬಂದ ಇಂತಹ ಸಮುದಾಯಗಳು ಭೂಮಿಯೇ ಮುಖ್ಯ ಆರ್ಥಿಕ ಮೂಲವಾಗಿ ಪರಿಗಣಿತವಾದ ಸಂದರ್ಭದಲ್ಲಿ ಆರ್ಥಿಕವಾಗಿ ಕುಸಿಯಬೇಕಾಯಿತು. ಇದಕ್ಕೆ ಪ್ರತಿಯಾಗಿ ಆರ್ಥಿಕ ಮೂಲ ಹುಡುಕಾಟ ಅನಿವಾರ್ಯವಾಗಿ ಅಲೆಮಾರಿಗಳಾಗಬೇಕಾಯಿತು. ಅಲೆಮಾರಿ ಸಮುದಾಯಗಳು ಆಳುವ ವರ್ಗದ ಕೆಲವು ಅನಿಶ್ಚಿತ ಆರ್ಥಿಕ ಕೊಡುಗೆಗಳಿಂದ ರಾಜರ ದತ್ತಿ ಮತ್ತು ಇನಾಮು ಭೂಮಿಗಳನ್ನು

ನಂಬಿಕೊಂಡು ಬಂದ ಈ ಸಮುದಾಯಗಳು ಮಧ್ಯಕಾಲೀನ ರಾಜಕೀಯ ತಲ್ಲಣಗಳು ಇವರ ಜೀವನದ ಮೇಲೆ ವ್ಯತಿರಿಕ್ತವಾದ ಪರಿಣಾಮಕ್ಕೆ ಕಾರಣವಾಯಿತು. ಭಾರತದಲ್ಲಿ ಮೊಗಲ್ ಆಡಳಿತದ ಅವಧಿಯಲ್ಲಿ ರೂಪಗೊಂಡ ಭೂಮಿಗೆ ಸಂಬಂಧಿಸಿದ ಕಾನೂನುಗಳು ಈ ಸಮುದಾಯಗಳ ಪಾರಂಪರಿಕ ಹಕ್ಕುಗಳನ್ನು ಇಲ್ಲವಾಗಿಸಿದವು. ಈ ಕುರಿತು ಖ್ಯಾತ ಇತಿಹಾಸಕಾರರಾದ ಇರ್ಫಾನ್ ಹಬೀಬರ ಮತ್ತು ಲೇಖಕ ಮಿದವೊಯ್ ಅವರು ತಮ್ಮ ಬರಹಗಳಲ್ಲಿ ದಾಖಲಿಸಿದ್ದಾರೆ.

ಮಧ್ಯಕಾಲೀನ ಮೊಘಲ್ ಆಳ್ವಿಕೆಯ ಸಂದರ್ಭದಲ್ಲಿ ವಿಶೇಷವಾಗಿ ಉತ್ತರ ಭಾರತದಲ್ಲಿ ಕೃಷಿ, ಒಟ್ಟು ರಾಜ್ಯದ ರಾಜ್ಯಾದಾಯವನ್ನು ನಿರ್ಣಯಿಸುವ ಉದ್ಯಮವಾಗ ತೊಡಗಿದ ಮೇಲೆ ಕೃಷಿಗೆ ವಿಶೇಷ ಮಹತ್ವ ಒದಗತೊಡಗಿತು. ಅಲ್ಲದೆ ಹೆಚ್ಚಿನ ಭೂಮಿ ಕೃಷಿಗೆ ಒಳಪಟ್ಟ ನಂತರದಲ್ಲಿ ಕೃಷಿ ಭೂಮಿಗೆ ಸಂಬಂಧಿಸಿದ ಮತ್ತು ಭೂಕಂದಾಯಕ್ಕೆ ಸಂಬಂಧಿಸಿದ ಕಾನೂನುಗಳು ರೂಪಗೊಂಡವು. ಮೊಘಲರ ಜಮೀನ್ದಾರಿ ಪದ್ಧತಿ ಮೊದಲ ಬಾರಿಗೆ ಭೂಮಿಯನ್ನು ಖಾಸಗಿ ಆಸ್ತಿಯನ್ನಾಗಿ ಪರಿಗಣಿಸಿತು. ರೈತರು ಕೇವಲ ಗೇಣಿದಾರರಾಗಿ ಇನಾಮು ಭೂಮಿಗಳು ಜಮೀನ್ದಾರರ ವಶವಾದವು. ಏಕೆಂದರೆ ಯಾವ ಸಮುದಾಯಗಳು ಕಂದಾಯ ಪಾವತಿಸಲು ವಿಫಲವಾಗುತ್ತಿದ್ದವೋ ಆ ಸಮುದಾಯಗಳ ಜಮೀನುಗಳನ್ನು ಜಮೀನ್ದಾರರು ವಶಪಡಿಸಿಕೊಳ್ಳುತ್ತಿದ್ದರು. ಹೀಗೆ ವಶಪಡಿಸಿಕೊಂಡು ಬಂದಿದ್ದ ಸಮುದಾಯಗಳು ವಂಶಪಾರಂಪರ್ಯವಾಗಿ ರಾಜರುಗಳಿಂದ ಪಡೆದ ಇನಾಮು ಭೂಮಿಗಳೇ ಆಗಿದ್ದವು. ಹೀಗೆ ವಂಶಪಾರಂಪರ್ಯ ಒಡೆತನವಿರುವ ಭೂಮಿಯನ್ನು ಅನುಭವಿಸುವ ಕುಟುಂಬ ಕಣ್ಮರೆಯಾದರೆ ದೀರ್ಘಕಾಲದವರೆಗೆ ಕಾಣೆಯಾದರೆ ಆ ಕೃಷಿ ಭೂಮಿಯನ್ನು ವಶಪಡಿಸಿಕೊಳ್ಳುವ ಮತ್ತು ಅದನ್ನು ತನ್ನ ಖಾಸಗಿ ಆಸ್ತಿಯನ್ನಾಗಿಸಿಕೊಳ್ಳುವ ಅಧಿಕಾರವನ್ನು ಊರ ಪಟೇಲನಿಗೆ ಅಥವಾ ಗ್ರಾಮದ ಮುಖ್ಯಸ್ಥನಿಗೆ ಕೊಡಮಾಡಲ್ಪಟ್ಟಿರುತ್ತದೆ. ಅಲ್ಲದೆ ಗ್ರಾಮದ ಬಂಜರು ಇಲ್ಲವೇ ಕೃಷಿಯೇತರ ಭೂಮಿಯನ್ನು ಸಹ ಪಟೇಲನ ಗ್ರಾಮಾಧಿಕಾರದ ವ್ಯಾಪ್ತಿಗೆ ಅಂದಿನ ಸರಕಾರ ಒಳಪಡಿಸಿತ್ತು. ಈ ಪ್ರಕ್ರಿಯೆ ಜಮೀನ್ದಾರಿ ವರ್ಗದ ಬಲಿಷ್ಟತೆ, ಭೂಮಿನಂಬಿಕೊಂಡ ವರ್ಗಗಳ ಶೋಷಣೆಗೆ ಕಾರಣವಾಯಿತು. ಇದಷ್ಟೇ ಅಲ್ಲದೇ "೧೭೯೨ರಲ್ಲಿ ಜಾರಿಯಾದ ಶಾಶ್ವತ ಜಮೀನ್ದಾರಿ" (ಪ್ರಭಾಕರ್ ಎ ಎಸ್ :೨೦೦೮:೧೨) ರಾಜರಿಂದ ನಿಷ್ಠೆ ಮತ್ತು ಸೇವೆಯ ಪರಿಣಾಮವಾಗಿ ಇನಾಮು ಭೂಮಿಗಳನ್ನು ಪಡೆದುಕೊಳ್ಳುತ್ತಿದ್ದರು. ಅನುವಂಶಿಕವಾಗಿ ಅದರ ಒಡೆತನವನ್ನು ಹೊಂದಿದ್ದ ಸಮುದಾಯಗಳು ಪ್ರದರ್ಶನ ಕಲೆ ಮತ್ತು ಕರಕುಶಲಕಲೆಗಳನ್ನು ಅವಲಂಬಿಸಿ ಬದುಕುತ್ತಿದ್ದವು. ಆ ಸಮುದಾಯಗಳ ಭೂಮಿಗಳು ಶಾಶ್ವತವಾಗಿ ಜಮೀನ್ದಾರರ ಮತ್ತು ಕಂದಾಯ ವಸೂಲಿ ಮಾಡುವ

ವರ್ಗಗಳ ಅಧೀನಕ್ಕೆ ಒಳಪಟ್ಟವು. ಬ್ರಿಟೀಷರು ತಮ್ಮ ಖಜಾನೆಗೆ ಯಾವುದೇ ಅಡ್ಡಿಯಿಲ್ಲದಂತೆ ನೀರಿನಂತೆ ಹಣ ಹರಿದುಬರಲು ರೂಪಿಸಿಕೊಂಡ ಭೂಕಾಯ್ದೆ ಇದಾಗಿತ್ತು. ಇದರ ಪರಿಣಾಮವಾಗಿ ಗುಜರಾತ್, ರಾಜಸ್ಥಾನ, ಮಹಾರಾಷ್ಟ್ರ, ಓರಿಸ್ಸಾ ಮತ್ತು ಆಂಧ್ರಪ್ರದೇಶದಿಂದ ಅನೇಕ ಸಮುದಾಯಗಳು ದಕ್ಷಿಣದತ್ತ ವಲಸೆ ಪ್ರಕ್ರಿಯೆಯನ್ನು ಆರಂಭಿಸಬೇಕಾಯಿತು. ಈ ಕಾಲಘಟ್ಟದಲ್ಲಿ ಉತ್ತರ ಭಾರತದ ಫಲವತ್ತಾದ ಭೂಮಿ ಬ್ರಿಟೀಷರ ವಾಣಿಜ್ಯ ಬೆಳೆಗಳನ್ನು ಬೆಳೆಯುವ ಕೇಂದ್ರವಾಗಿದ್ದು ಮತ್ತೊಂದು ಪ್ರಮುಖಕಾರಣ. ಆ ವೇಳೆಗಾಗಲೇ ದತ್ತಿ ಇನಾಮು ಮತ್ತು ಉಂಬಳಿಗಗಳು ನಿಂತುಹೋಗಿ ಮೊಘಲ್ ಆಡಳಿತ ಅಷ್ಟು ಪ್ರಬಲವಾಗಿಲ್ಲವಾದದ್ದು. ಪ್ರಸ್ತುತ ಕರ್ನಾಟಕದಲ್ಲಿನ ಬಹುತೇಕ ಅಲೆಮಾರಿಗಳು ಮಹಾರಾಷ್ಟ್ರ, ಓರಿಸ್ಸಾ, ಅಸ್ಸಾಂ ಬಂಗಾಳ, ಗುಜರಾತ್ ರಾಜಸ್ಥಾನ ಮತ್ತು ಆಂಧ್ರಪ್ರದೇಶದಿಂದ ವಲಸೆ ಬಂದಿರುವುದಾಗಿ ತಾವೇ ಹೇಳಿಕೊಳ್ಳುತ್ತಿವೆ.

ಕರ್ನಾಟಕದ ಜಾತಿ ಪಟ್ಟಿಯಲ್ಲಿ ೫೦ ಬುಡಕಟ್ಟು ಸಮುದಾಯಗಳಿದ್ದು, ಇನ್ನೂ ಈ ಪಟ್ಟಿಗೆ ಸೇರಬಹುದಾದ ಬುಡಕಟ್ಟು ಸಮುದಾಯಗಳು ಪರಿಶಿಷ್ಟ ಜಾತಿ ಮತ್ತು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಲ್ಪಟ್ಟಿವೆ. ಇದಕ್ಕೆ ಜನಸಂಖ್ಯೆ, ಆರ್ಥಿಕತೆ, ಶಿಕ್ಷಣ, ರಾಜಕೀಯ ಅಂಶಗಳು ಕಾರಣವಾಗಿವೆ. ಆದರೆ ಇವರ ಸಂಸ್ಕೃತಿ ಶ್ರೀಮಂತವಾಗಿದೆ. ಸಾಂಸ್ಕೃತಿಕವಾಗಿ ಶ್ರೇಷ್ಠತೆ ಹೊಂದಿದ್ದರೂ, ಪ್ರಸ್ತುತ ಬದುಕಿನಲ್ಲಿ ತನ್ನ ಜೀವನ ನಿರ್ವಹಣೆಗಾಗಿ ಅಲೆಮಾರಿಗಳಾಗಿ ಬ್ರಿಟಿಷರ ಆಗಮನ, ರಾಜ್ಯಗಳ ಅವನತಿ ಸ್ಥಳೀಯ ಬಹುಸಂಖ್ಯಾತ ವರ್ಗಗಳ ತುಳಿತ ಪ್ರಾಕೃತಿಕ ಕಾರಣಗಳಿಂದ ಚಹರೆಯನ್ನು ಕಂಡುಕೊಳ್ಳದೇ ಹಲವಾರು ಕ್ಷೇತ್ರಗಳಲ್ಲಿ ಹಿಂದುಳಿದಿರುವುದನ್ನು ಕಾಣಬಹುದು. ಅದರಂತೆಯೇ ಆಂಧ್ರಪ್ರದೇಶದಿಂದ ವಲಸೆ ಬಂದ ಕರ್‌ಕರ್‌ಮುಂಡ ಸಮುದಾಯ ಈ ಮೇಲ್ಕಂಡ ಕಾರಣಗಳಿಂದ ತನ್ನ ಚಾರಿತ್ರಿಕ ಹಿನ್ನೆಲೆಯ ಅರಿವು ಇಲ್ಲದೇ ಸಮಾಜದ ಕೆಳಸ್ತರದ ಬದುಕನ್ನು ನಿರ್ವಹಿಸುತ್ತಿದೆ. ಸಮಾಜದ ಮುಕ್ತವಾಹಿನಿಯಿಂದ ವಂಚಿತವಾದ ಇಂತಹ ಸಮುದಾಯಗಳನ್ನು ಹೊರಜಗತ್ತಿನ ಜನರು ಅರಿಯುವುದು ಪ್ರಮುಖವಾಗಿದೆ.

**ಕರ್ ಕರ್ ಮುಂಡ ಪದ ನಿಷ್ಪತ್ತಿ**

ಭಾರತದ ಮಟ್ಟಿಗೆ ಸಮುದಾಯಗಳ ಕುರಿತಾಗಿ ಅವುಗಳ ಹೆಸರಿನಿಂದ ಮತ್ತು ಸಮುದಾಯಗಳು ಮಾಡುವ ವೃತ್ತಿಯಿಂದ ಬಂದಿರುವ ಹೆಸರುಗಳ ಹಿನ್ನಲೆಯಲ್ಲಿ ಹಾಗೂ ಬೆಡಗು, ಬಂಧುತ್ವ, ಜೀನ್ಸ್‌ಗಳ ಆಧಾರವಾಗಿಟ್ಟುಕೊಂಡು ಚರಿತ್ರೆಯನ್ನು ಮೂಲಕ್ಕೆ ಕೊಂಡೊಯ್ಯುವ ಸಂಶೋಧನೆಗಳು ನಡೆಯುತ್ತಾ ಬಂದಿವೆ. ಇವುಗಳಲ್ಲಿ ಇಣಖಜಟಠಠಟಠಠಥ ಪರಿಕಲ್ಪನೆಯು ಸಹ ಒಂದಾಗಿದೆ. ಸಮುದಾಯಕ್ಕೆ ಬಂದಿರುವ

ಸಾಮಾಜಿಕ ಹಣೆಪಟ್ಟಿಯನ್ನು ಇತರರು ಹೇಗೆ ಅಂಕಿತಗೊಳಿಸಿದ್ದಾರೆ. ವೃತ್ತಿಗೆ ಅನುಗುಣವಾಗಿ ಬಂದಿದೆಯೇ ಅಥವಾ ಸ್ಥಳ ಪುರಾಣದಿಂದ ಬಂದಿದೆಯೇ ಎಂಬಿತ್ಯಾದಿ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಭಾಷಾಶಾಸ್ತ್ರದ ಪದನಿಷ್ಪತ್ತಿಯನ್ನು ಚರ್ಚಿಸುವ ಹಿನ್ನೆಲೆಯಲ್ಲಿ ಸಮುದಾಯದ ಚರಿತ್ರೆಯನ್ನು ಕಟ್ಟುವ ಕಾರ್ಯದಲ್ಲಿ ತೊಡಗಿರುವುದು ಸಾಮಾನ್ಯವಾಗಿದೆ.

ಪದನಿಷ್ಪತ್ತಿ ಶಾಸ್ತ್ರವು ಜನರ ಜನಪದ ಕಥೆ, ಪುರಾಣ, ವೃತ್ತಿ ಇತ್ಯಾದಿಗಳ ಆಧರಿಸಿದಂತೆ ಬಹುತೇಕ ಸಮುದಾಯಗಳು ಚರಿತ್ರೆಯನ್ನು ತಿಳಿಯುವಲ್ಲಿ ಸಫಲವಾಗಿದೆ. ಆ ಹಿನ್ನೆಲೆಯಲ್ಲಿ ಕರ್‌ಕರ್‌ಮುಂಡ ಪದನಿಷ್ಪತ್ತಿಯನ್ನು ಈ ರೀತಿಯಲ್ಲಿ ಗುರುತಿಸಲಾಗಿದೆ.

**ಕರ್‌ಕರ್ ಮುಂಡ :** ಕರ್‌ಕರ್‌ಮುಂಡ ಸಮುದಾಯವು ಆಂಧ್ರಪ್ರದೇಶದಿಂದ ವಲಸೆ ಬಂದಿದ್ದು, ಮಾತೃಭಾಷೆ ತೆಲುಗು ಆಗಿದೆ. ಇವರ ಜೀವನಾವರ್ತಕ ಆಚರಣೆಗಳಲ್ಲಿ ಇಂದಿಗೂ ತೆಲುಗು ಪದಗಳು ಮರುಕಳಿಸಲ್ಪಟ್ಟಿವೆ. ತೆಲುಗು ಮತ್ತು ಕನ್ನಡ ಎರಡು ಭಾಷೆಗಳನ್ನು ಪರೀಕ್ಷಿಸಿದಾಗ ಕರಕರ ಎಂದರೆ ಕರೇ ಕರೇ ಅಂದರೆ ಕಿರಿ ಕಿರಿ ಮಾಡುವುದು ಎಂಬುದಾಗಿಯೂ,ಮುಂಡ ಎಂದರೆ ಅಂಗ ಊನವಾದ, ತೆಲುಗಿನ ಮೊಂಡೇಡು ಕನ್ನಡದಲ್ಲಿ ಮೊಂಡ–ಹಠಮಾರಿ ಎಂದರ್ಥ, ತೆಲುಗಿನಲ್ಲಿ ಬಂಡ ಎಂದರೆ ಬಂಡೆ ಅಥವಾ ಕಲ್ಲು ಎಂದಾಗುತ್ತದೆ. ಕಲ್ಲಿನಂತೆ ಗಟ್ಟಿಯಾದ ಮನಸ್ಥಿತಿ ಹೊಂದಿದ ಹಠಮಾರಿಗೆ ಮೊಂಡ ಎಂದು ಕರೆಯಲಾಗುವುದು. ಈ ಪದವು ಮೊಂಡ ಎಂದು ಮುಂದೆ ಮುಂಡ ಎಂದು ಕರೆಯಲ್ಪಟ್ಟಿದೆ.

ಕರ್‌ಕರ್ ಮುಂಡ ಎಂದು ಕರೆಯುವುದಕ್ಕೂ ಮೊದಲು ಈ ಸಮುದಾಯದವರನ್ನು ಮರಗ್ಯಾಲೋ ಎಂದು ಕರೆಯಲಾಗುತ್ತಿತ್ತು. 'ಮಕರ್‌ಗ್ಯಾಲೋ' ಎಂದರೆ ರಾಜರ ಅಸ್ಥಾನದಲ್ಲಿ ಬೇಹುಗಾರರಾಗಿ(ಗುಪ್ತಚರ) ಕಾರ್ಯನಿರ್ವಹಿಸುವ ಸಂದರ್ಭದಲ್ಲಿ ಮಾರುವೇಷ(ಭಿಕ್ಷುಕ) ಧರಿಸಿದ ವ್ಯಕ್ತಿ ತೆಲುಗಿನಲ್ಲಿ 'ಕರೇಂ ಕರೇಂ ಎವಡು ಚಪ್ಪುತಾಡೋ ವಾಡೇ ಕರಕರ ಮುಂಡಿ. ಕರೇಂ ಕರೇಂ ಅಂದರೆ ಸತ್ಯ ಅಥವಾ ನಿಜವನ್ನು ಹೇಳುವುದು. ಮಕರಗ್ಯಾಲೋ ಎಂದರೆ ರಾಜನಿಗೆ ಮತ್ತು ಆಸ್ಥಾನಿಕರಿಗೆ ಯಾವತ್ತಿಗೂ ಸುಳ್ಳು ಹೇಳದ ಸತ್ಯವನ್ನೇ ನುಡಿಯುವ ವ್ಯಕ್ತಿ ಎಂಬ ಅಭಿಪ್ರಾಯವಿತ್ತು. ಈ ಹಿನ್ನೆಲೆಯಲ್ಲಿ ನಿಜ ಅಥವಾ ಸತ್ಯವನ್ನು ಹೇಳುವುದರಿಂದ ಅದನ್ನು ಕನ್ನಡಕ್ಕೆ ಅನ್ವಯಿಸಿದಾಗ ಕರೆ ಕರೆ ಮುಂಡಿ ಎಂದು ಬಂದಿರಲು ಸಾಧ್ಯತೆ ಇದೆ. ಶ್ರೀಶೈಲ ಪರ್ವತ ಶ್ರೇಣಿಯಿಂದ ವಲಸೆ ಪ್ರಕ್ರಿಯೆ ಆರಂಭಿಸಿರುವ ಬಹುತೇಕ ಸಮುದಾಯಗಳು ಕಿಷ್ಕಿಂದೆ(ಹಂಪಿ) ಅಂದರೆ ತುಂಗಭದ್ರ ಕೃಷ್ಣಾನದಿಯನ್ನು ಬಳಸಿಕೊಂಡು ಸುರಪುರ, ಕಿತ್ತೂರು, ಕನಕಗಿರಿ, ಇತ್ಯಾದಿ ಪ್ರದೇಶಗಳಲ್ಲಿ

ನೆಲೆನಿಂತವು. ಮತ್ತೆ ಕೆಲವು ದಕ್ಷಿಣದ ತುಂಗಭದ್ರ ನದಿಯ ಉಪನದಿಗಳಾದ ಹಗರಿ, ವೇದಾವತಿ ನದಿಗಳ ಮೈದಾನ ಪ್ರದೇಶಗಳಲ್ಲಿ ನೆಲೆ ಕಂಡುಕೊಂಡವು. ಈ ರೀತಿ ಬಂದ ಸಮುದಾಯಗಳು ರಾಜಾಶ್ರಯದಲ್ಲಿ ತಮ್ಮ ಕೌಶಲ್ಯಗಳಿಂದ ರಾಜರಿಗೆ ಆಪ್ತ ವೃತ್ತಿ ಆರಂಭಿಸಬೇಕಾಯಿತು. ಬ್ರಿಟಿಷರ ಆಗಮನದಿಂದಾಗಿ ಸ್ಥಳೀಯ ಸಂಸ್ಥಾನಗಳು ತಮ್ಮ ಅಸ್ಮಿತೆಯನ್ನು ಕಳೆದುಕೊಂಡರು. ಆಗ ಸಹಜವಾಗಿ ರಾಜನ ಆಪ್ತವರ್ಗಗಳು ಅಭದ್ರ ಜೀವನಕ್ಕೆ ತುತ್ತಾಗಬೇಕಾಯಿತು. ಅದೇ ಸಂದರ್ಭದಲ್ಲಿ ಬ್ರಿಟಿಷರ ಸ್ನೇಹಿ ನಿಜಾಮನ ಆಪ್ತ ಗುಂಪಾದ ರಜಾಕಾರರು ಈಗಿನ ಹೈದ್ರಾಬಾದ್ ಕರ್ನಾಟಕದ ಹಲವು ಪ್ರದೇಶಗಳಲ್ಲಿ ನೆಲೆನಿಂತ ಬುಡಕಟ್ಟು ಸಮುದಾಯಗಳನ್ನು ಶೋಷಿಸುತ್ತ ಕೊಲ್ಲಲ್ಪಡುವ ಕಾರ್ಯದಲ್ಲಿ ನಿರತರಾದರು. ಮತ್ತೊಂದು ಕಾರಣವಾಗಿ ಮಹಾಮಾರಿಯಾಗಿ ಪರಿಣಮಿಸಿದ ಪಿಕಾಲಿ ಬೇನೆಯಿಂದ ಬೇಸತ್ತಾ ಸಮುದಾಯಗಳಲ್ಲಿ ಕರ್‌ಕರ್ ಮುಂಡರು ಸೇರಿ ಹೋಗಿರುವುದನ್ನು ಕಾಣಬಹುದು. ತಮ್ಮ ಉಳುವಿಗಾಗಿ ಕಿತ್ತೂರು ಸಂಸ್ಥಾನದ ಅವನತಿ ನಂತರ ಇಂದಿನ ಕೊಪ್ಪಳ, ಹಾವೇರಿ, ಬಳ್ಳಾರಿ ಇತ್ಯಾದಿ ಭಾಗಗಳಿಗೆ ಪ್ರಸಾರವಾಗಿರವುದನ್ನು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಈ ಸಮುದಾಯದ ತಿಳುವಳಿಕೆದಾರರು ತಿಳಿಸಿದ್ದಾರೆ.

ಕರ್‌ಕರ್ ಮುಂಡ ಸಮುದಾಯ ಉತ್ತರ ಕರ್ನಾಟಕದ ವಿಜಯಪುರ, ಬೆಳಗಾವಿ, ಬಾಗಲಕೋಟೆ, ಯಾದಗಿರಿ, ಮೊದಲಾದ ಜಿಲ್ಲೆಗಳಲ್ಲಿ ಅಧಿಕ ಸಂಖ್ಯೆಯಲ್ಲಿದ್ದು, ಮಧ್ಯಕರ್ನಾಟಕದ, ಕೊಪ್ಪಳ, ಹಾವೇರಿ, ದಾವಣಗೆರೆ ಜಿಲ್ಲೆಗಳಲ್ಲಿ ಮುಂಡಾಲ ಬಂಡೆ ಎಂಬ ಹೆಸರಿನಿಂದ ಗುರುತಿಸಿಕೊಂಡಿದೆ. ತುಮಕೂರು, ಚಿತ್ರದುರ್ಗ ಜಿಲ್ಲೆಗಳಲ್ಲಿ ಮೊಂಡಬೇಡ ಎಂದು ಸಹ ಕರೆಯಲ್ಪಟ್ಟಿದೆ. ಈ ಮೂರು ಹೆಸರಿನಲ್ಲಿ ಒಂದು ಸಮುದಾಯ ಹೇಗೆ ಕರೆಯಲ್ಪಟ್ಟಿತು ಎಂಬುದನ್ನು ತಿಳಿಯುವುದು ಅಗತ್ಯವಾಗಿದೆ.

**ಮುಂಡಾಲ ಬಂಡ :** ಕರ್‌ಕರ್‌ಮುಂಡ ಸಮುದಾಯದ ಪರ್ಯಾಯಪದವಾದ ಮುಂಡಾಲಬಂಡ ಪದವನ್ನು 'ಮೊಂಡಿಬಂಡ' ಎಂದು ಸಹ ಕರೆಯಲಾಗುತ್ತದೆ. ಮೊಂಡಿ ಬಂಡ ಸಮುದಾಯವು ಆಂಧ್ರಪ್ರದೇಶದ ಗುಂಟೂರು, ವಿಶಾಖಪಟ್ಟಣ, ನೆಲ್ಲೂರು ಕರ್ನೂಲು ಮತ್ತು ತೆಲಂಗಾಣದ ಹೈದ್ರಾಬಾದ್‌ನಸುತ್ತಮುತ್ತಲ ಅಧಿಕ ಸಂಖ್ಯೆಯಲ್ಲಿ ನೆಲೆಸಿದ್ದಾರೆ. ಹೈದ್ರಾಬಾದ್‌ನ ಲಾಲ್‌ಬಹದ್ದೂರ್ ಶಾಸ್ತ್ರಿನಗರದ ಶೀನು ಎಂಬ ತಿಳುವಳಿಕೆದಾರನ ಅಭಿಪ್ರಾಯದಂತೆ 'ಮೊಂಡುತನದಿಂದ ಭಿಕ್ಷೆಬೇಡುತ್ತಿದ್ದರಿಂದ ನಮಗೆ ಈ ಹೆಸರು ಬಂದಿದೆ. ಪ್ರಸ್ತುತದಲ್ಲಿ ನಾವು ಕೂದಲು ವ್ಯಾಪಾರ, ಹಂದಿಸಾಕಾಣಿಕೆ, ಮತ್ತು ಗುಜರಿ ವ್ಯಾಪಾರದಲ್ಲಿತೊಡಗಿದ್ದೇವೆ. ಮತ್ತು ಅವರು ತಿಳಿಸಿರುವ ಜೆಡಗು

ದೇವರುಗಳು ಹಾಗೂ ಆಚರಣೆ ಮತ್ತು ಸಂಪ್ರದಾಯಗಳು ಕರ್‌ಕರ್‌ಮುಂಡ ಸಮುದಾಯದಲ್ಲಿ ಕಂಡುಬರುತ್ತವೆ. ಇದರಿಂದ ಮೊಂಡಿಬಂಡ ಸಮುದಾಯ ಕರ್‌ಕರ್‌ಮುಂಡ ಸಮುದಾಯ ಒಂದೇ ಎಂದು ಹೇಳಬಹುದಾಗಿದೆ. ಈ ಹೆಸರಿನಲ್ಲಿ ದಾವಣಗೆರೆ ಪಟ್ಟಣದ ಹೊಸಕ್ಯಾಂಪ್, ಕೋಲಾರ ಜಿಲ್ಲೆಯಲ್ಲಿ ಸಮುದಾಯ ಕಂಡುಬರುತ್ತದೆ.

ಮುಂಡಾಲಬಂಡೆ ಎಂಬ ಹೆಸರು ಕರ್ನಾಟಕ ರಾಜ್ಯದ ಯಾವುದೇ ಜಾತಿ ಪಟ್ಟಿಯಲ್ಲಿ ಕಂಡುಬರುವುದಿಲ್ಲ. ವೊಂಡೋಳ್ ಎಂಬ ತೆಲುಗು ಪದ ಕನ್ನಡಿಕರಣಗೊಂಡಾಗ ಮೊಂಡರು ಎಂದಾಗುತ್ತದೆ. ಮೊಂಡರು ಎಂಬ ಬಹುವಚನ ಶಬ್ದವನ್ನು ತಪ್ಪಾದ ಪರಿಭಾಷೆಯ ಬಳಕೆಯಲ್ಲಿ ಮುಂಡಾಲ ಎಂದು ಬಳಸಲಾಗಿದೆ. ಬಂಡ ತೆಲುಗು ಪದ ಕನ್ನಡದಲ್ಲಿ ಹಠಮಾರಿ ಎಂದಾಗುತ್ತದೆ. ಮುಂಡಾಲಬಂಡ ಕರ್ನಾಟಕದ ಯಾವುದೇ ಜಾತಿ ಪಟ್ಟಿಯಲ್ಲಿ ಇಲ್ಲದಿದ್ದರೂ, ಆಂಧ್ರಪ್ರದೇಶ ಮತ್ತು ತೆಲಂಗಾಣ ರಾಜ್ಯಗಳಲ್ಲಿ ಬಿಸಿಎ ಪಟ್ಟಿಯಲ್ಲಿ ಸೇರಿದ್ದು, ಮೊಂಡಿಬಂಡ ಎಂಬ ಹೆಸರಿನಿಂದ ಗುರುತಿಸಲ್ಪಟ್ಟಿದೆ. ಮುಂಡಾಲ ಬಂಡ ಸಮುದಾಯಕ್ಕೆ ಸಂಬಂಧಿಸಿದಂತಹ ಚಹರೆಯನ್ನು ಗುರುತಿಸುವಲ್ಲಿ ಎದುರಾಗಬಹುದಾದ ಮತ್ತೊಂದು ತೊಡಕೆಂದರೆ ಮುಂಡಾಲ ಎಂಬ ಸಮುದಾಯ.

ಮುಂಡಾಲ ಮತ್ತು ಮುಂಡಾಲಬಂಡೆ ಎಂಬ ಪದಗಳು ಒಂದೆನಾ? ಎಂದು ತಿಳಿಯುವ ಪ್ರಯತ್ನ ಮಾಡಿದಾಗ ಕುತೂಹಲಕಾರಿ ಅಂಶಗಳು ಕಂಡುಬರುತ್ತವೆ. ಏಕೆಂದರೆ ಮುಂಡಾಲ ಎಂಬ ಹೆಸರು ಈಗಾಗಲೇ ಪರಿಶಿಷ್ಟ ಜಾತಿಯ ಕ್ರ.ಸಂ. ೮೦ರಲ್ಲಿ ಗುರುತಿಸಲ್ಪಟ್ಟಿದೆ. ಮುಂಡಾಲ ಸಮುದಾಯದ ಕುರಿತಾಗಿ ಹಲವು ಅಧ್ಯಯನಗಳು ನಡೆದಿವೆ. ಪೀಪಲ್ ಆಫ್ ಇಂಡಿಯಾ ಕರ್ನಾಟಕ ಅವತರಣಿಕೆ ಅನ್ವಯ ಮುಂಡಾಲ ಸಮುದಾಯದ ಕುರಿತಂತೆ The mundala claim to belong to the adi Dravida group some of them consider themselves to be part of the Uppara community of udupi and Kundapura taluks ಎಂದು ತಿಳಿಸಲಾಗಿದೆ (ಸಿಂಗ್ ಕೆ ಎಸ್:೨೦೦೩:೧೦೮೩).

**ಮುಂಡಾಲ ಸಮುದಾಯದಲ್ಲಿ**

೧. ಕೊಟ್ಟದನಯ್ಯ

೨. ಪರಾಕ್ಯದನಯ್ಯ

೩. ಬೋಲ್‌ದನ್ಯ ಅಥವಾ ಕೊಲ್‌ದನಯ್ಯ

೪. ಮಂದಿರದಯ್ಯ

೫. ಆರದನಯ್ಯ

೬. ಬಕ್ಯದನಯ್ಯ ನಲಮ್ಮರದನಯ್ಯ, ಬೆಡಗುಗಳು ಕಂಡುಬರುತ್ತವೆ.

ಮುಂಡಾಲಬಂಡ ಅಥವಾ ಮೊಂಡಿಬಂಡ ಸಮುದಾಯದಲ್ಲಿ

೧. ತೆಲ್ಲಮ್ಯಾಕಲೋಳ್

೨. ಮಿಡುಗುಂಡೋಳ್

೩. ಪ್ರಸಾದ್‌ಲೋಳ್

೪. ಶೆಟ್ಟೆಯೋಳ್

೫. ಸದಿವೋಳ್

೬. ಪೋಗರ್ತ್ರೋಳ್

೭. ಕತ್ತಿಯೋಳ್

೮. ಸಲ್ಲೋಳ್

೯. ಪಿಕಿಲೋಳ್

೧೦. ಜಾಜುಗೋಳ್

೧೧. ಗುಂಜಿಲೋಳ್

೧೨. ಪಿನ್ಲಾರು

೧೩. ಎನುಮಳೋಳ್

೧೪. ಮಂದ್ಲರು

೧೫. ಕಿಮ್ಲೇರು

೧೬. ಬುಸ್ಸಿಲೋಳ್ ಇತ್ಯಾದಿ ಬೆಡಗುಗಳಳು ಕಂಡುಬರುತ್ತವೆ. ಮೇಲಿನ ಎರಡು ಸಮುದಾಯಗಳ ಬೆಡಗುಗಳನ್ನು ಗಮನಿಸಿದಾಗ ಪರಸ್ಪರ ವಿಭಿನ್ನವಾಗಿದ್ದು; ಸಾಮ್ಯತೆ ಕಂಡುಬರುವುದಿಲ್ಲ. ಜೊತೆಗೆ ಮುಂಡಾಲಬಂಡ ಸಮುದಾಯದ ಮಾತೃಭಾಷೆ, ತೆಲುಗು, ಮುಂಡಾಲ ಸಮುದಾಯದವರು ತುಳು ಮಾತೃ ಭಾಷೆಯನ್ನಾಗಿಸಿಕೊಂಡಿದ್ದಾರೆ.

ಮುಂಡಾಲ ಸಮುದಾಯವು "In Karnataka the mundala are regarded as a subdivision of the Holaya'' (tharston) the mundala are largely a land less community the were traditionally attached to particular hous hold as bonded agricultural labourers"(ಅದೇ :೧೦೮೩) ಎಂದು ತಿಳಿಸಿದ್ದಾರೆ. ಆದರೆ ಮುಂಡಾಲ ಬಂಡ ಅಥವಾ ಮೊಂಡಿ ಬಂಡ ಸಮುದಾಯವು ಕೃಷಿ ಭೂಮಿ ರಹಿತವಾಗಿ ಅಲೆಮಾರಿ ಭಿಕ್ಷುಕರಾಗಿದ್ದಾರೆ. ಮುಂಡಾಲ ಮತ್ತು ಮುಂಡಾಲಬಂಡಎರಡು ಸಮುದಾಯಗಳು ಶೀರ್ಷಿಕೆಯಲ್ಲಿ ಮೇಲ್ನೋಟಕ್ಕೆ ಒಂದೇ ಎನಿಸಿದರೂ ಇವರ ಬೆಡಗು, ವೃತ್ತಿಗಳು ಪರಸ್ಪರ ವಿಭಿನ್ನವಾಗಿವೆ. ಈ ಎಲ್ಲಾ ಅಂಶಗಳನ್ನು ಪರಿಸೀಲಿಸಿದಾಗ ಮುಂಡಾಲ ಮತ್ತು ಮುಂಡಾಲಬಂಡ ಸಮುದಾಯಗಳು ಪ್ರತ್ಯೇಕವಾಗಿದ್ದು, ಎರಡು ಒಂದೇ ಅಲ್ಲ ಎಂದು ತಿಳಿಯಬಹುದಾಗಿದೆ.

"ಮೊಂಡಿ ಭಿಕ್ಷುಕ ವರ್ಗಕ್ಕೆ ಬಂಡರೆಂದು ಕರೆಯುತ್ತಿದ್ದರು. ಹಟಮಾರಿ ಎಂಬ ಅರ್ಥದಲ್ಲಿ ಇದನ್ನು ಬಳಸಿದಂತೆ ತೋರುತ್ತದೆ. ಭಿಕ್ಷೆ ಬೇಡಲು ಹೋಗುವವನು ಜೊತೆಯಲ್ಲಿಯೇ ಕಲ್ಲನ್ನು ತೆಗೆದುಕೊಂಡು ಹೋಗಿ ಭಿಕ್ಷೆನೀಡದಿದ್ದರೆ ತಲೆ ಚಚ್ಚಿಕೊಳ್ಳುವೆನೆಂದು ಹೆದರಿಸುತ್ತಿದ್ದನು. ಇಂಥ ಭಿಕ್ಷುಕನಿಗೆ ಹಿಂದೆ ಈ ಹೆಸರು ಅನ್ವಯವಾಗುತ್ತಿತ್ತು "ಬಂಡ ಎಂದರೆ ಕಲ್ಲು ಎಂದು ತಿಳಿಸಿದ್ದಾರೆ." (ಚಂದ್ರಪ್ಪ ಎನ್:೧೯೯೩:೦೪)

ಅಸಹ್ಯಕರವಾಗಿ ಭಯಂಕರವಾದ ಕೆಲಸಗಳನ್ನು ಮಾಡುತ್ತಾ ಭಿಕ್ಷೆ ಬೇಡುವರು ಮೊಂಡಿಬಂಡ ಎಂದು ಆಂಧ್ರಪ್ರದೇಶದ ಪಾಪಿರೆಡ್ಡಿ ಮತ್ತು ನರಸಿಂಹ ರೆಡ್ಡಿಯವರು ತಿಳಿಸಿದ್ದಾರೆ.

**ಮೊಂಡಬೇಡ**

ಕನ್ನಡ ರತ್ನಕೋಶ ಅನ್ವಯ ಮೊಂಡ ಎಂದರೆ ಹಠಮಾರಿ ಅಂಗ ಊನವಾದವ ಎಂಬರ್ಥವಿದೆ. ಮ್ಯಾಸಬೇಡರ ಒಂದು ಬಳಿ ಆಗಿರುವ 'ಮಂದ್ಲರು' ಎಂಬ ಹೆಸರಿನ ರೂಢಿಗತವಾಗಿ ಮೊಂಡರು ಎಂಬ ಹೆಸರು ಬಂದಿದೆ. ಆದರೆ ಇವರ ಹಟಮಾರಿತನದಿಂದ ಭಿಕ್ಷೆಬೇಡುವುದರಿಂದ ಮೊಂಡರು ಎಂದು ಕರೆಯಲಾಗಿದೆ.

"ಆಂಧ್ರದ ಕಲಕರಿ ಕಥೆಯು ನಮ್ಮ ಮೂಲ ಪುರುಷ ಕಾಡಿನಲ್ಲಿ ಕುರಿಯನ್ನು ಮೇಯಿಸುವಾಗ ಕುರಿಗಳ ಮೇಲೆ ಬಿದ್ದ ಹುಲಿಯೊಂದಿಗೆ ಹೋರಾಡಿ ಕೈ ಕಾಲುಗಳನ್ನು ಕಳೆದುಕೊಂಡು ಮೊಂಡಗಾಲು ಹೊಂದಿ ಅಸಹಾಯಕನಾಗುವನು. ಆ ಪ್ರದೇಶದ ಊರಿನವರಲ್ಲಿ ಅವನ ಜೀವನೋಪಾಯಕ್ಕೆ ವರ್ಷಕ್ಕೊಮ್ಮೆ ವರ್ತನೆ (ಕಾಣಿಕೆ)

ನೀಡಬೇಕೆಂದು ಶಾಸನ ಮಾಡಿದರಂತೆ ಅದರನ್ವಯ ಪ್ರತಿವರ್ಷ ಮನೆ ಮನೆಗೆ ಹೋಗಿ ಭಿಕ್ಷೆ(ವರ್ತನೆ) ಪಡೆಯುತ್ತಿದ್ದ ಕಾಲುಕಳೆದುಕೊಂಡ ವ್ಯಕ್ತಿಯಿಂದ ಮೊಂಡ ಎಂಬ ಹೆಸರು ಬಂದಿದೆ ಎಂದು ತಿಳಿಯುತ್ತದೆ.

ಬುಡಕಟ್ಟು ಸಮುದಾಯಗಳಲ್ಲಿ ಒಂದೇ ಬೆಡಗಿನವರು ವೈವಾಹಿಕ ಸಂಬಂಧ ಬೆಳೆಸುವಂತಿಲ್ಲ. ಒಂದು ಕಾಲಘಟ್ಟದಲ್ಲಿ ಬೇಡರ ಒಂದೇ ಬೆಡಗಿನ ಹೆಣ್ಣು ಗಂಡು ಮೋಹಿತರಾಗಿ ವಿವಾಹವಾಗುತ್ತಾರೆ. ಅಣ್ಣತಂಗಿಯಾಗುವವರು ವಿವಾಹವಾದುದರಿಂದ ಸಮುದಾಯದವರು ಕುಲನಿಷೇಧ (ಬಹಿಷ್ಕಾರ) ಹಾಕುತ್ತಾರೆ. ವಿವಾಹವಾದ ದಂಪತಿಗಳು ಹೊಸ ಬೆಡಗನ್ನು ಸೃಷ್ಟಿಸಿಕೊಳ್ಳುತ್ತಾರೆ. ಆ ಬೆಡಗು ಮಂದ್ಲರು ಬೆಡಗು ಆಯಿತು. ಇದು ಮುಂದುವರೆದು ಮೊಂಡರು ಎಂದು ಕರೆಯಲಾಯಿತು. ಬೇಡರ ಸಮುದಾಯದವರಾಗಿದ್ದರಿಂದ ಈ ಕುಲದವರಿಗೆ ಮೊಂಡಬೇಡರು ಎಂದು ರೂಢಿಗತವಾಯಿತು ಎಂದು ಹೆಚ್ ವಿ ನಂಜುಂಡಯ್ಯನವರು ಎಥ್ನೋಗ್ರಫಿಕಲ್ ಸರ್ವೇ ಆಫ್ ಮೈಸೂರು ಪುಸ್ತಕದಲ್ಲಿ ತಿಳಿಸಿದ್ದಾರೆ.

ಅಲೆಮಾರಿ ಸಮುದಾಯಗಳು ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗುತ್ತಿದ್ದರಿಂದ ಪರ್ಯಾಯ ಹೆಸರುಗಳಿಂದ ಗುರುತಿಸಲ್ಪಡುವುದು ಸಹಜ. ಅದಕ್ಕೆ ಸ್ಥಳೀಯ ರಾಜಕೀಯ, ಸಾಂಸ್ಕೃತಿಕ ಅಂಶಗಳು ಕಾರಣವಾಗುತ್ತವೆ. ಈ ಮೇಲ್ಕಂಡ ಕರ್‌ಕರ್ ಮುಂಡ, ಮುಂಡಾಲ ಬಂಡ ಅಥವಾ ಮೊಂಡಿಬಂಡ, ಮೊಂಡರು ಅಥವಾ ಮೊಂಡಬೇಡರು ಹೆಸರುಗಳು ವೃತ್ತಿ ಬೆಡಗು, ಸಾಂಸ್ಕೃತಿಕ ಅಂಶಗಳಲ್ಲಿ ಒಂದೇ ಆಗಿವೆ. ಆದರೆ ಈ ಹೆಸರುಗಳಲ್ಲಿ ಕರ್‌ಕರ್ ಮುಂಡ ಹೆಸರು ಮಾತ್ರ ಕರ್ನಾಟಕದ ಹಿಂದುಳಿದ ವರ್ಗಗಳ ೨ಎ ಮೀಸಲಾತಿ ಪಟ್ಟಿಯಲ್ಲಿದೆ. ಮೊಂಡಿಬಂಡ (ಮುಂಡಾಲಬಂಡಾ) ಮೊಂಡಬೇಡ ಎಂಬ ಹೆಸರುಗಳು ಪ್ರಾದೇಶಿಕ ಮಿತಿಯಲ್ಲಿ ಕರ್‌ಕರ್‌ಮುಂಡ ಸಮುದಾಯದ ಪರ್ಯಾಯ ಪದಗಳು ಎಂದು ಹೇಳಬಹುದಾಗಿದೆ.

ಕರ್‌ಕರ್ ಮುಂಡ ಸಮುದಾಯವು ಮೊಂಡರು ಮೊಂಡಬೇಡ ಮೊಂಡಿಬಂಡ, ಮುಂಡಾಲಬಂಡ ಎಂಬ ಪರ್ಯಾಯ ಹೆಸರುಗಳಿಂದ ಗುರುತಿಸಲಾದ ನಂತರದಲ್ಲಿ ಚಹರೆಯನ್ನು ಗುರುತಿಸುವುದು ಪ್ರಮುಖವಾಗಿದೆ.

**ಬೇಡ ಸಮುದಾಯದೊಂದಿನ ಸಂಬಂಧ**

ಬೇಡ ಸಮುದಾಯದ ಮಂದ್ಲರು ಎಂಬ ಬೆಡಗಿನಿಂದ ಮೊಂಡ ಬೇಡ ಎಂಬ ಸಮುದಾಯ ರೂಪಿತವಾಯಿತು ಎಂದು ಈಗಾಗಲೇ ಪ್ರಕಟಿತ ಸಾಹಿತ್ಯ ಮತ್ತು ಆಚರಣೆ, ಬೆಡಗುಗಳಿಂದ ತಿಳಿಯಲಾಗಿದೆ.

ಬೇಡಸಮುದಾಯುಗಳ ಒಳಪಂಗಡಗಳನ್ನು ಮೇತ್ರಿ ಕೆ.ಎಂ. ಇವರು ಗುರುತಿಸಿರುವಂತೆ

೧. ಮ್ಯಾಸಬೇಡರು (ಪೆದ್ದಬೋಯಿವಾಂಡ್ಲು)ಚಂಚುಬೇಡ ಸಮುದಾಯ ಮೂಲ ಪಶುಪಾಲಕ ವೃತ್ತಿಯನ್ನು ಅನುಸರಿಸಿಕೊಂಡು ಬಂದವರಾಗಿದ್ದು, ದ್ರಾವಿಡ, ತೆಲುಗು ಭಾಷೆಯನ್ನು ಮಾತನಾಡುವರು. ಮೇಷ(ಕುರಿ ಅಥವಾ ಮೇಕೆ)ಗಳನ್ನು ಮೇಯಿಸುತ್ತಿದ್ದರಿಂದ ಮ್ಯಾಸಬೇಡರು ಎಂಬ ಹೆಸರು ಬಂದಿದೆ.

೨. ಊರಬೇಡರು (ಚಿನ್ನಬೋಯಿವಾಂಡ್ಲು) ಊರಿನಲ್ಲಿ ವಾಸಿಸುವ ಬೇಡರೆ ಊರ ಬೇಡರು. ಮ್ಯಾಸಬೇಡರಿಂದ ವಿಘಟನೆಹೊಂದಿ, ಕಾಡಿನ ಸಂಸ್ಕೃತಿ(ಪಶುಪಾಲಕ) ಯಿಂದ ವಿಮುಕ್ತರಾಗಿ ನಾಡಿನ ಸಂಸ್ಕೃತಿಗೆ ಸೇರ್ಪಡೆಗೊಂಡವರು. ಮಾತೃಭಾಷೆ ತೆಲುಗನ್ನು ವಿಸ್ಮೃತಿಗೊಳಿಸಿ ಕನ್ನಡ ಕಲಿತವರು. ನಂತರ ಊರಿನಲ್ಲಿ ನಾಯಕರಾಗಿ ಜೀವನ ನಿರ್ವಹಿಸುವರಾಗಿದ್ದಾರೆ.

೩. ಗುಡ್ಲು ಬೇಡರು (ಗುಂತ ಬೋಯಿ ವಾಂಡ್ಲು) ಗಡುಸಿಗಳಲ್ಲಿ ವಾಸಿಸುವವರು ಗುಡ್ಲು ಬೇಡರು ಎನಿಸಿಕೊಂಡರು.

೪. ಮಾರಮ್ಮನ ಬೇಡರು (ಮುತ್ಯಾಲಮ್ಮ ಅಥವಾ ಉರುಮೆಬೇಡರು)

ಮಾರಮ್ಮನ ಆರಾಧಿಸುತ್ತಾ ಊರೂರು ಅಲೆಯುತ್ತ ಜೀವನ ಸಾಗಿಸುವವರು ಮಾರಮ್ಮ ಬೇಡರು ಎನಿಸಿಕೊಂಡರು.

೫. ಹಾಲುಬೇಡರು ಪಶುಪಾಲಕ ವೃತ್ತಿಯುನ್ನು ಜೀವನಾಧಾರ ವೃತ್ತಿಯನ್ನಾಗಿಸಿಕೊಂಡವರು.

೬. ಮೊಂಡ ಬೇಡರು ಅಲೆಮಾರಿಗಳು ಭಿಕ್ಷು ಬೇಡುವವರನ್ನು ಮೊಂಡ ಬೇಡರೆಂದು ಕರೆಯಲಾಯಿತು. ಎಂಬುದಾಗಿ ವಿಂಗಡಣೆಯನ್ನು ಮಾಡಲಾಗಿದೆ.

ಪೂಜಾರಹಳ್ಳಿ ವಿರೂಪಾಕ್ಷಿ ಇವರು ಬೇಡ ಸಮುದಾಯವನ್ನು ವಿಭಾಗಿಸಿ ಊರ ಬೇಡ ಅಥವಾ ಚಿನ್ನಬೇಡರು, ಮ್ಯಾಸಬೇಡರು ಅಥವಾ ಪೆದ್ದ ಬೋಯ, ಉರುಮೆ ಬೇಡರು, ಮೊಂಡಬೇಡರು ಎಂಬ ನಾಲ್ಕು ಉಪಪಂಗಡಗಳಿವೆ ಎಂದು ಗುರುತಿಸಿದ್ದಾರೆ. "ಬೇಡರಂತೆ ಎಲ್ಲಾ ರೀತಿಯ ಆಚಾರ-ವಿಚಾರಗಳನ್ನು ರೂಢಿಸಿಕೊಂಡಿರುವ ಮೊಂಡಬೇಡರು. ನಾವು ಮ್ಯಾಸ ಬೇಡರಿಗೆ ನೆಂಟರಾಗಬೇಕೆಂದು ಹೇಳಿಕೊಳ್ಳುತ್ತಾರೆ. ಅವರ ಮತ್ತು ನಮ್ಮ ಆರಾಧ್ಯ ದೇವತೆಗಳು ಬೆಡಗುಗಳು ಒಂದೇ ಎನ್ನುತ್ತಾರೆ.

ಬೇಡರಲ್ಲಿ ಹುಚ್ಚಬೇಡ ನೀಚಬೇಡ, ತೆಲುಗುಬೇಡ, ಗೋಸೆ ಬೇಡ ಎಂಬ ಉಪ ಪಂಗಡಗಳಿದ್ದು, ಬೇಡರ ಗೋಸಲ ಬೆಡಗಿನವರು ಗೋಸೆ ಬೇಡರೆಂದು ಕರೆಯಲ್ಪಡುತ್ತಿದ್ದು, ಆ ಬೆಡಗಿನವರು ಕರ್‌ಕರ್ ಮುಂಡರಲ್ಲಿದ್ದಾರೆ. ಸುರಪುರದ ಅರಸರು ಗೋಸಲ ಬೆಡಗಿನವರಾಗಿದ್ದು, ಅವರು ಗೋಸೆ ಬೇಡರಾಗಿದ್ದಾರೆ. ಅವರು ನಮ್ಮ ಪೂರ್ವಿಕರು ಎಂದು ಲಕ್ಷ್ಮಣ ಕೋಡೆಕಲ್ ಎಂಬ ತಿಳುವಳಿಕೆದಾರರು ಅಭಿಪ್ರಾಯ ಪಡುತ್ತಾರೆ. ಇದಕ್ಕೆ ಪೂರಕವೆಂಬಂತೆ "ಕ್ರಿ.ಶ. ೧೬೩೬ ರಿಂದ ೧೮೫೮ರ ವರೆಗೆ ಹನ್ನೆರಡು ಜನ ನಾಯಕ ಅರಸರು ಸುರಪುರ ಸಂಸ್ಥಾನದಲ್ಲಿ ಆಳ್ವಿಕೆ ಮಾಡಿದ್ದಾರೆ. ಈ ಅರಸರಿಗೆ ಗೋಸಲ ವಂಶದವರೆಂದು ಕರೆಯುತ್ತಾರೆ. (ಅಮರೇಶ್ ಯತಗಲ್.೨೦೧೧.xiv) ಇಲ್ಲಿ ಪ್ರಮುಖವಾಗಿ ಗಮನಿಸಬಹುದಾದ ಅಂಶವೆಂದರೆ ಗೋಸಲ ಎಂಬ ಬೇಡರ ಬೆಡಗು ಗೋಸೆ ಬೇಡ ಎಂಬ ಉಪಪಂಗಡವಾಗಿದೆ. ಇದೇ ತರಹ ಮಂದ್ಲಾರು ಎಂಬ ಬೆಡಗು ಮೊಂಡರಾಗಿರುವ ಸಾಧ್ಯತೆಗಳಿವೆ. ಜೊತೆಗೆ ಗೋಸಲ ಎಂಬ ಬೆಡಗು ಕರ್‌ಕರ್ ಮುಂಡರಲ್ಲಿ ಕಂಡುಬರುತ್ತದೆ. ಕರ್‌ಕರ್ ಮುಂಡರ ಪೂರ್ವಿಕರು ಸುರಪುರ ಸಂಸ್ಥಾನದಲ್ಲಿ ಗುಪ್ತಚರರಾಗಿ ಕಾರ್ಯನಿರ್ವಹಿಸಿದ್ದರು ಎಂದು ತಿಳಿಸಿರುತ್ತಾರೆ. ಇದಕ್ಕೆ ಯಾವುದೇ ಲಿಖಿತ ದಾಖಲೆಗಳು ಇರುವುದಿಲ್ಲ. ಇನಾಮು ಭೂಮಿಗಳ ಕುರಿತಾದ ಲಿಖತ ದಾಖಲೆಗಳು ಹಿಂದೆ ಇದ್ದವು. ಆದರೆ ಅವುಗಳು ಅಲಭ್ಯವಾಗಿರುವುದು ಸಂಶೋಧನೆಯ ಮಿತಿಯಾಗಿದೆ. ಇಂದು ಸುರಪುರ ಸಮೀಪದ ರಂಗನಪೇಟೆ ಮತ್ತು ಬೊಮ್ಮನ ಜೋಗಿಯಲ್ಲಿ ಕರೆಕರೆಯ ಹೆಸರಿನ ಬಾವಿ, ತೋಟಕಂಡುಬರುತ್ತವೆ. ಕರ್‌ಕರ್ ಮುಂಡರು ನಾವು ಬೇಡರ ಒಂದು ಒಳಪಂಗಡದವರಾಗಿದ್ದು ಕೆಲವೊಂದು ವಿಧಿ ನಿಷೇಧಗಳಿಂದ ದೂರವಾಗಿದ್ದೇವೆ ಎಂಬ ಭಾವನೆಯಿಂದ ಜೀವನ ನಿರ್ವಹಿಸುತ್ತಿದ್ದಾರೆ.

ಬೇಡರಲ್ಲಿನ ಒಳಪಂಗಡಗಳಲ್ಲಿ ಕರ್‌ಕರ್ ಮುಂಡರು ಅಥವಾ ಮೊಂಡಬೇಡರು ಎಂದು ಅಧ್ಯಯನಕಾರರ ಮತ್ತು ಮಾಹಿತಿದಾರರ ತಿಳುವಳಿಕೆಯಿಂದ ದೃಢಪಟ್ಟ ಮೇಲೆ ಇನ್ನೂ ಸೂಕ್ಷ್ಮವಾಗಿ ಮಾನವಶಾಸ್ತ್ರ ಮತ್ತು ಸಮಾಜಶಾಸ್ತ್ರಜ್ಞರ ನೆಲೆಯಲ್ಲಿ ಅಧ್ಯಯನ ಮಾಡಬೇಕಾಗದ ಅಗತ್ಯತ್ತೆ ಇದೆ.

ಕರ್‌ಕರ್ ಮುಂಡ ಮತ್ತು ಬೇಡರ, ಬೆಡಗು, ಆಚರಣೆ ಮತ್ತು ಸಂಪ್ರದಾಯಗಳ ಹೋಲಿಕೆ ಮತ್ತು ವ್ಯತ್ಯಾಸಗಳನ್ನು ಅರಿಯುವುದರ ಮೂಲಕ ಈ ಸಮುದಾಯದ ಚಹರೆ ಅಥವಾ ಮೂಲವನ್ನು ತಿಳಿಯಬಹುದಾಗಿದೆ. ಕರ್‌ಕರ್ ಮುಂಡ ಸಮುದಾಯದ ಬೆಡಗುಗಳನ್ನು ಅಯ್ಯರ್ ಮತ್ತು ಹೆಚ್.ವಿ.ನಂಜುಂಡಯ್ಯ ಅವರು ಗುರುತಿಸಿರುವಂತೆ

ಗವರಡ್ಡಿ

ಸಾಕೆ

ಕಾಮದುಲ

ಸಾಕೆ

ಮಡ್ಲಿಬುಟ್ಲು

ತೆಲ್ಲಮ್ಯಾಕ್ಲು

ಮಳಲೇರು ಎಂಬ ಬೆಡಗುಗಳಿವೆ. ಕರ್‌ಕರ್ ಮುಂಡರಲ್ಲಿ ಶೆರಕ್ಲೋಳ್ ಪಿಕಿಲೋಳ್, ಯನಗೊಂಡ್ಲೋಳ್, ಶೆಟ್ಟಿಯೊಳ್, ತೆಲ್ಲಮ್ಯಾಕಲೋಳ್, ಗುಂಜೋಳ್, ಯರಕಂಟಿಯೋಳ್, ಎನುಮಲೋಳ್ ಗುಜ್ಜಿಲೋಳ್, ಪೆದ್ದಗುಜ್ಜಿಲೋಳ್ ಎಂಬ ಬೆಡಗುಗಳಿವೆ ಎಂದು ಕೆ.ಎಸ್.ಸಿಂಗ್‌ರವರು ಗುರುತಿಸಿದ್ದಾರೆ. ಕ್ಷೇತ್ರಕಾರ್ಯದಲ್ಲಿ ತಿಳುವಳಿಕೆದಾರರು ತಿಳಿಸಿರುವಂತೆ ಇವರಲ್ಲಿ

ತೆಲ್ಲಮ್ಯಾಕಲೋಳ್

ಮಿಡಗುಂಡೋಳ್

ಪ್ರಸಾದ್‌ಲೋಳ್

ಶೆಟ್ಟಿಯೊಳ್ ಚೆನ್ನಶೆಟ್ಟಿಯೋಳ್ ಪೆದ್ದಶೆಟ್ಟಿಯೋಳ್

ಸದಿವಲೋಳ್

ಪೊಗರ್ತ್ರೋಳ್

ಕತ್ತಿಯೋಳ್

ಸಲ್ಲೋಳ್

ಪಿಕ್ಕಿಲೋಳ್

ಜಾಜುಗೋಳ್

ಗುಂಜಿಲೋಳ್

ಪೆದ್ದ ಗುಂಜಿಲೋಳ್ ಚಿನ್ನಗುಂಜಲೋಳ್

ಪಿಸ್ಲುರು (ಪಿಕ್ಕಿಲೋಳ್)

ಎನುಮಲೋರ್

ಕಿಮ್ಲೇರು

ಮಂದ್ಲಾರು

ಬುಸ್ಸಿಲೋಳ್

ಗೋಸೆಯೋಳ್ ಬೆಡಗುಗಳು ಕಂಡುಬರುತ್ತವೆ.

ಕರ್‌ಕರ್ ಮುಂಡರಲ್ಲಿ ಕಂಡುಬರುವ ಈ ಬೆಡಗುಗಳನ್ನು ಇತರ ಸಮುದಾಯಗಳಲ್ಲಿ ಗಮನಿಸಿದಾಗ ಬಹುತೇಕ ಬೆಡಗುಗಳು ಬೇಡರಲ್ಲಿ ಕಂಡುಬರುತ್ತವೆ. (ಅನುಬಂಧ:) ಕೆ.ಎಸ್.ಸಿಂಗ್ ಅವರು ಶರಕ್ಲೋಳ್, ಪಿಕಿಲೋಳ್, ಯರಗೊಂಡ್ಲರು, ಶೆಟ್ಟಿಯೋಳ್, ತೆಲ್ಲಮ್ಯಾಕ್ಲೋಳ್, ಗುಂಜಿಯೋಳ್ ಎನುಮೋಳೋಲ್, ಸಿನ್ನಗುಜ್ಜಿಲೋಳ್ ಮತ್ತು ಪೆದ್ದಗುಜ್ಜಿಲೋಳ್‌ಎಂಬ ಬೆಡಗುಗಳನ್ನು ಗುರುತಿಸಿರುವರು.

ಅನಂತಕೃಷ್ಣಅಯ್ಯರ್ ಮತ್ತು ಎಚ್.ವಿ.ನಂಜುಂಡಯ್ಯ ಅವರುಗಳು ಗವರಡ್ಡಿ,ಸಲ್ಲ,ಸಾಕೆ ತೆಲ್ಲಮ್ಯಾಕೋಲೋಳ್, ಮಡ್ಡಿಬುಟ್ಲು ಬೆಡಗುಗಳನ್ನು ಗುರುತಿಸಿದ್ದು, ಆ ಬೆಡಗುಗಳು ಬೇಡರಲ್ಲಿ ಕಂಡುಬರುತ್ತವೆ. ಆದರೆ ಹಿಂದಿನ ಅಧ್ಯಯನಗಳಲ್ಲಿ ದಾಖಲಾಗದೆ ಮತ್ತು ಬೇಡರಲ್ಲಿ ಇಲ್ಲದ ಪೋಗತ್ರೋಳ್ ಸದಿವೋಳ್ ಎಂಬ ಬೆಡಗುಗಳು ಕಂಡುಬರುತ್ತವೆ. ಪೋಗತ್ರೋಳ್ ಎಂಬ ತೆಲುಗು ಪದ ಕನ್ನಡದಲ್ಲಿ ಕಳೆದುಕೊಂಡವರು ಎಂದಾಗುತ್ತದೆ. ಬಹುಶಃ ಈ ಬೆಡಗಿನವರು ಹಿಂದೆ ಉನ್ನತ ಸ್ಥಾನಮಾನಹೊಂದಿ ಕುಲಕಳೆದುಕೊಂಡವರ ಗುಂಪು ಆಗಿರಬಹುದಾಗಿದೆ. ಅದೇರೀತಿ ಸದಿವೋಳ್ ಎಂಬ ಬೆಡಗು ಕನ್ನಡದಲ್ಲಿ ಕಲಿತವರು ಬುದ್ಧಿವಂತರು ಎಂದಾಗುತ್ತದೆ. ಕರ್‌ಕರ್ ಮುಂಡರಲ್ಲಿ ಮೊದಲು ಅಕ್ಷರ ಕಲಿತದ್ದರಿಂದ ಮತ್ತು ತಿಳುವಳಿಕೆಯಿಂದ ಇತರರಿಗೆ ತಿಳಿಹೇಳುವ ವರ್ಗದವರಾಗಿದ್ದು, ಮುಂದುವರೆದು ಸದಿವೋಳ್ ಎಂಬ ಹೊಸ ಬೆಡಗು ರೂಪಗೊಂಡಿರಬಹುದಾಗಿದೆ. ಈ ಮೇಲಿನ ಎಲ್ಲಾ ಬೆಡಗುಗಳನ್ನು ಹೋಲಿಸಿ ನೋಡಿದಾಗ ಕರ್‌ಕರ್ ಮುಂಡರು ಬೇಡರ ಒಂದು ಒಳಪಂಗಡವಾಗಿರುವ ಸಾಧ್ಯತೆ ಇದೆ. ಈ ನಿರ್ಣಯವನ್ನು ದೃಢಪಡಿಸಿಕೊಳ್ಳಲು ಆಚರಣೆ-ಸಂಪ್ರದಾಯ ಹಿನ್ನೆಲೆಯಲ್ಲಿ ತಿಳಿಯುವುದು ಅಗತ್ಯವಾಗಿದೆ. ಮುಂದಿನ ಅಧ್ಯಯನಗಳಲ್ಲಿ ಇದರ ವಿವರಣೆಯನ್ನು ತಿಳಿಯಬಹುದಾಗಿದೆ.

ಕರ್‌ಕರ್ ಮುಂಡರು, ಬೇಡರ ಒಂದು ಒಳಪಂಗಡದವರು ಇರಬಹುದೇ ಎಂದು ತಿಳಿದುಕೊಳ್ಳುವ ಪ್ರಯತ್ನ ಮಾಡಿದಾಗ ಇವರು ಬೇಡ ಸಮುದಾಯದ

ವಿಘಟನೆ ಹೊಂದಲು ಅಥವಾ ಹೊರಗುಳಿಯಲು ಸಾಂಸ್ಕೃತಿಕ ಮತ್ತು ರಾಜಕೀಯ ಕಾರಣಗಳು ಇರಲೇಬೇಕು. ಅವುಗಳನ್ನು ತಿಳಿಯುವಲ್ಲಿ ಕರ್‌ಕರ್ ಮುಂಡರ ವಲಸೆ ಮತ್ತು ಹಂಚಿಕೆ ನೆರವಾಗುತ್ತವೆ.

**ಕರ್‌ಕರ್ ಮುಂಡರ ಚಾರಿತ್ರಿಕ ಹಿನ್ನೆಲೆ**

ಕರ್‌ಕರ್ ಮುಂಡ ಸಮುದಾಯದವರು ಮೂಲತಃ ಆಂಧ್ರಪ್ರದೇಶ ಶ್ರೀಶೈಲದಿಂದ ವಲಸೆ ಬಂದಿದ್ದಾರೆ. ಇವರ ಮಾತೃಭಾಷೆ ಇಂದಿಗೂ ತೆಲುಗು ಆಗಿದೆ. ಕರಕರ ಮುಂಡ ಎಂಬ ಹೆಸರು ಹಠಮಾರಿತನದ ಭಿಕ್ಷಾ ವೃತ್ತಿಯಿಂದ ಬಂದಿದೆ. ಆದರೂ ಈ ಪದವನ್ನು ನಾಮಾಂಕಿತಗೊಳಿಸಿದವರು ಶ್ರೀಶೈಲದ ಜಗದ್ಗುರುಗಳು. ಬೇಡರು ಸಹ ಶ್ರೀಶೈಲದಿಂದ ವಲಸೆ ಬಂದವರು. ಮೂಲದಲ್ಲಿ ಅಂದರೆ ಊರಬೇಡ ಮ್ಯಾಸಬೇಡ ಪಂಗಡಗಳ ವಿಘಟನೆಗಿಂತ ಪೂರ್ವದ ಪಶುಪಾಲನ ವೃತ್ತಿಯ ಹಂತದಲ್ಲಿ ತೆಲುಗು ಇವರೆಲ್ಲರ ಮಾತೃಭಾಷೆಯಾಗಿತ್ತು. ಇವರು ತುಂಗಭದ್ರ ನದಿಪಾತ್ರವನ್ನು ಬಳಸಿ ಕಿಷ್ಕಿಂಧ ಪ್ರದೇಶದ ಕಡೆ ಪ್ರಯಾಣ ಬಳಸಿರುವ ಸಾಧ್ಯತೆಗಳಿದ್ದು, ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯವಾಗಿ ತಮ್ಮ ಆಸ್ತಿತ್ವಕಂಡುಕೊಂಡು ಅದರ ಪತನವಾದ ಮೇಲೆ ಉತ್ತರದ ಸುರಪುರ, ಕಿತ್ತೂರು, ಗುಡುಗುಂಟ, ಸಂಸ್ಥಾನಗಳಲ್ಲಿ ಒಂದು ಗುಂಪು ಪ್ರಯಾಣ ಬೆಳೆಸಿ ನೆಲೆಯೂರಿತು. ಮತ್ತೊಂದು ಗುಂಪು ಚಿನ್ನಹಗರಿ, ವೇದಾವತಿ ನದಿಯ ನಡುವಣ ಪ್ರದೇಶದಲ್ಲಿ ನೆಲೆಯೂರಿತು ಎಂದು ಹೇಳಬಹುದು.

ವಿಜಯನಗರ ಸಾಮ್ರಾಜ್ಯದ ಪತನಾ ನಂತರದಲ್ಲಿ ಈ ಹಿಂದೆ ಅಧೀನವಾಗಿ ಕಪ್ಪಕಾಣಿಕೆ ಮತ್ತು ಸೈನ್ಯವನ್ನು ಒದಗಿಸುತ್ತಿದ್ದ ಅನೇಕ ಚಿಕ್ಕ ಚಿಕ್ಕ ಸಂಸ್ಥಾನಗಳು ಸ್ವತಂತ್ರ್ಯವೆಂದು ಘೋಷಿಸಿಕೊಂಡರು. ಉತ್ತರದ ಸುರಪುರ, ಕಿತ್ತೂರು ಸಂಸ್ಥಾನಗಳು ದಕ್ಷಿಣದಲ್ಲಿ ಹರಪನಹಳ್ಳಿ, ಚಿತ್ರದುರ್ಗ, ಪಾವಗಡ, ಬಸ್ಮಂಗಿದುರ್ಗ, ಗುಡೆಕೋಟೆ, ಜರಿಮಲೆ, ಸಂಸ್ಥಾನಗಳು ಆಳ್ವಿಕೆ ನಡೆಸಿದವು. ಈ ಸಂಸ್ಥಾನಗಳ ಆಡಳಿತ ಸೈನ್ಯಗಳಲ್ಲಿ ಬೇಡರ ಸೇವೆ ಮುಖ್ಯವಾಗಿ ಕಂಡುಬರುವಂಹದ್ದು.

ಕರ್‌ಕರ್ ಮುಂಡರು ಅಥವಾ ಮೊಂಡರ ಪೂರ್ವಿಕರು, ಈ ರಾಜ್ಯಗಳ ರಾಜನ ಆಪ್ತವರ್ಗವಾಗಿ ಆಡಳಿತದ ರಾಜ್ಯದ ಹಿತಕ್ಕಾಗಿ ಗುಪ್ತಚರರಾಗಿ ಕಾರ್ಯನಿರ್ವಹಿಸುತ್ತಿದ್ದರು. ಎಂಬುದು ಮಾಹಿತಿದಾರರ ಮತ್ತು ಹಿಂದಿನ ಅಧ್ಯಯನಕಾರರ ತಿಳುವಳಿಕೆಯಾಗಿದೆ. ಆದರೆ ಯಾವುದೇ ಲಿಖಿತದಾಖಲೆಗಳಿಲ್ಲ. ಭಾರತಕ್ಕೆ ಯುರೋಪಿಯ್ನರ ಆಗಮನವು ಭಾರತದ ಚರಿತ್ರೆಯಲ್ಲಿ ಬಹುದೊಡ್ಡ ಮೈಲುಗಲ್ಲು ಎಂದರೆ ತಪ್ಪಾಗಲಿಕ್ಕಿಲ್ಲ. ಕಾರಣ ವ್ಯಾಪಾರಕ್ಕಾಗಿ ಬಂದ ಇವರು ಇಲ್ಲಿನ ಆರಾಜಕತೆ ಮತ್ತು ಸಂಪತ್ತು ರಾಜಕೀಯವಾಗಿ

ಹಿಡಿತ ಸಾಧಿಸುವಂತೆ ಪ್ರೇರೆಪಿಸಿತು. ಇದರ ಅಂತಿಮಕಾದಾಟದಲ್ಲಿ ಮೇಲುಗೈ ಸಾಧಿಸಿದ ಬ್ರಿಟಿಷರು ಭಾರತೀಯ ರಾಜರ ಅಧಿಕಾರವನ್ನು ಕಸಿದುಕೊಳ್ಳಲು ಹಲವಾರು ಕಾನೂನುಗಳನ್ನು ಜಾರಿಗೆ ತಂದರು.

ಬ್ರಿಟಿಷರು ಜಾರಿಗೆ ತಂದ ಕಾನೂನುಗಳಲ್ಲಿ ದತ್ತುಮಕ್ಕಳಿಗೆ ಹಕ್ಕಿಲ್ಲ ಮತ್ತು ಸಹಾಯಕಸೈನ್ಯ ಪದ್ಧತಿಗಳು ಪ್ರಮುಖವಾಗಿವೆ. ದತ್ತುಮಕ್ಕಳಿಗೆ ಹಕ್ಕಿಲ್ಲ ಎಂಬ ಕಾಯ್ದೆಯನ್ನು ಕಿತ್ತೂರು ಸಂಸ್ಥಾನದ ಮೇಲು ಸಹಾಯಕ ಸೈನ್ಯ ಪದ್ಧತಿಯನ್ನು ಸುರಪುರದ ಮೇಲು ಹೇರಲಾಯಿತು. ಈ ವೇಳೆಗಾಗಲೇ ಸುರಪುರ ಸಂಸ್ಥಾನ ಹೈದ್ರಾಬಾದ್ ನಿಜಾಮನ ಅಧೀನವಾಗಿ ನಿಜಾಮನು ಭಾರತದಲ್ಲಿ ಸಹಾಯಕ ಸೈನ್ಯ ಪದ್ಧತಿಗೆ ಒಳಪಟ್ಟು ಮೊದಲಿಗನಾಗಿದ್ದರಿಂದ ಈ ಎರಡು ಸಂಸ್ಥಾನಗಳು ಬ್ರಿಟಿಷರ ಅಧೀನವಾದವು. ಈ ಎರಡು ಸಂಸ್ಥಾನಗಳ ಮುಖ್ಯವಾಗಿ ಪರಿಗಣಿಸಲು ಕರ್‌ಕರ್ ಮುಂಡರ ಪೂರ್ವಿಕರು ಕಿತ್ತೂರು ಮತ್ತು ಸುರಪುರಗಳಲ್ಲಿ ಗುಪ್ತಚರರಾಗಿ ಕಾರ್ಯನಿರ್ವಹಿಸುತ್ತಿದ್ದರು ಎಂಬ ಮಾಹಿತಿಯನ್ನು ಆಧರಿಸಿ ಇವರ ಚಾರಿತ್ರಿಕ ಹಿನ್ನೆಲೆಯನ್ನು ಗುರುತಿಸಲಾಗಿದೆ.

ಮಧ್ಯಯುಗೀನ ಕಾಲದ ಅಂತ್ಯದಲ್ಲಿ ಮುಸ್ಲಿಂ ಅರಸರ ಶೋಷಣೆ, ಮತಾಂಧತನ ಮತ್ತು ಅಂತಿಮವಾಗಿ ಅವರ ಬಲಹೀನತೆಯು ಬ್ರಿಟಿಷರಿಗೆ ತಮ್ಮ ವಸಹಾತುಶಾಹಿ ಸಾಮ್ರಾಜ್ಯವನ್ನು ವಿಸ್ತರಿಸಲು ಸಹಾಯಕವಾಯಿತು. ಇದರಿಂದಾಗಿ ಸುರಪುರ, ಕಿತ್ತೂರಿನಂತಹ ಚಿಕ್ಕ ಚಿಕ್ಕ ಸಂಸ್ಥಾನಗಳು ತಮ್ಮ ಪರಮಾಧಿಕಾರವನ್ನು ಕಳೆದುಕೊಂಡು ಬ್ರಿಟಿಷರ ಅಧೀನದಲ್ಲಿ ರಕ್ಷಣೆಯಲ್ಲಿ ನಡೆದುಕೊಳ್ಳಬೇಕಾಯಿತು. ರಾಜ್ಯದ ಜನತೆಯ ಭಾರ ಹೊತ್ತಿದ್ದ ರಾಜ ತನ್ನ ಸಿಂಹಾಸನ ಉಳಿಸಿಕೊಳ್ಳಲು ಪರದಾಡುತ್ತಾ ತನ್ನ ರಾಜ್ಯದಲ್ಲಿಯೇ ಪರಾಧೀನವಾದನು. ಸ್ವತಂತ್ರವಾಗಿದ್ದ ಅವಧಿಯಲ್ಲಿ ರಾಜನ ಆಡಳಿತದಲ್ಲಿ ಆಪ್ತವರ್ಗಗಳಾಗಿದ್ದ ಕರಕುಶಲಕರ್ಮಿಗಳು ಪ್ರದರ್ಶನ ಕಲೆಯ ಮೂಲಕ ಭಿಕ್ಷುಕರ ವೇಷದಲ್ಲಿ ದೇಶದ ಆಗುಹೋಗುಗಳ ಮಾಹಿತಿ, ಶತೃಳ ಕುಟಿಲೋಪಾಯಗಳು ಇತ್ಯಾದಿ. ಸುದ್ದಿ ಸೂಚನೆಗಳನ್ನು ನೀಡುತ್ತಿದ್ದ ವರ್ಗಗಳು ಸಹಜವಾಗಿಯೇ ರಾಜನ ದೃಷ್ಟಿಯಲ್ಲಿ ನಿಷ್ಪ್ರಯೋಜಕವಾಗಿ ಕಂಡವು. ಕಾರಣ ರಾಜ್ಯದ ರಕ್ಷಣೆಯ ಜವಾಬ್ದಾರಿ ಬ್ರಿಟಿಷರದಾಗಿತ್ತು. ಇದರ ಪರಿಣಾಮವಾಗಿ ಈ ಹಿಂದೆ ರಾಜನಿಂದ ಕೆಲವೊಂದು ಸಂದರ್ಭಗಳಲ್ಲಿ ಇನಾಮುಭೂಮಿ ಪಡೆದಿದ್ದ ಈ ವರ್ಗಗಳು ಕೃಷಿಯನ್ನು ಮೈಗೂಡಿಸಿಕೊಂಡಿರಲಿಲ್ಲ. ಬದಲಾಗಿ ಸದಾ ಸಂಚಾರಿ ಸಮುದಾಯಗಳಾಗಿ ಹಲವು ವೇಷಗಳನ್ನು ಹಾಕಿಕೊಂಡು ರಾಜನಿಗಾಗಿ ಸೇವೆ ಸಲ್ಲಿಸುತ್ತಿದ್ದ ವರ್ಗಗಳಾಗಿದ್ದವು. ಇತ್ತ ರಾಜನ ಆಶ್ರಯವು ಇಲ್ಲದೆ, ಕೃಷಿ ಜ್ಞಾನ ಇಲ್ಲದೆ ಮತ್ತೊಂದು ಕಡೆ ರಾಜನಿಗೆ ಸಹಾಯಮಾಡಿದ್ದರ

ಫಲವಾಗಿ ಬ್ರಿಟಿಷರ ಅಧೀನಕ್ಕೆ ಒಳಗಾಗಿ ಅತಂತ್ರ ಬದುಕಿಗೆ ಬರಬೇಕಾಯಿತು. ಅಂತಿಮವಾಗಿ ಅವರ ಮುಂದಿದ್ದ ಒಂದೇ ಮಾರ್ಗ ರಾಜನಿಗಾಗಿ ಮಾಡಿದ ಸೇವೆಯನ್ನು ತೊಟ್ಟ ಮಾರುವೇಷವೇ ಜೀವನ ನಿರ್ವಹಣೆಗಾಗಿ ತೊಟ್ಟು, ಭಿಕ್ಷುಕರಂತೆ ಬೇಡಿ ತಿನ್ನುವ ಜೀವನಕ್ಕೆ ನಾಂದಿ ಹಾಡಿತು ಎಂದು ಹೇಳಬಹುದು.

ಕರ್‌ಕರ್ ಮುಂಡ ಸಮುದಾಯವು ಬೇಡಿತಿನ್ನುವ ಜೀವನಕ್ಕೆ ಒಳಗಾಗಿ ಮುಂದುವರೆಯುತ್ತಿರುವಾಗಲೇ ಎದುರಾದ ಮತ್ತೊಂದು ಸಂಕಷ್ಟವೆಂದರೆ ರಜಕಾರರ ಹಾವಳಿ. ರಜಾಕಾರರ ಹಾವಳಿಗಿಂತ ಮುಂಚಿತವಾಗಿ ಭಾರತವು ಸ್ವತಂತ್ರ್ಯಗಳಿಸಿದ ಮೇಲೆ ೧೯೪೭-೪೮ರ ವರೆಗೆ ಹೈದ್ರಾಬಾದ್ ನಿಜಾಮನ ಸಾಮ್ರಾಜ್ಯಕ್ಕೆ ಒಳಪಟ್ಟಿದ ಪ್ರಾಂತ್ಯಗಳಲ್ಲಿ ಸ್ಥಳೀಯ ಜಮೀನ್ದಾರ ವರ್ಗ ಪ್ರಬಲವಾಗಿತ್ತು. ಕರ್‌ಕರ್ ಮುಂಡ ಸಮುದಾಯದಂತಹ ಹಲವಾರು ಸಮುದಾಯಗಳ ಇನಾಮುಭೂಮಿಗಳು ಜಮೀನ್ದಾರರ ಪಾಲಾಗಿದ್ದವು. ಈ ಕಾರಣದಿಂದ ಇಂದಿಗೂ ಹೈದ್ರಾಬಾದ್ ಕರ್ನಾಟಕದ ಅಲೆಮಾರಿಗಳು ಇಂದಿಗೂ ಭೂಮಿ ಇಲ್ಲದಂತೆ ಬದುಕಲು ಕಾರಣವಾಗಿದೆ.

ಹೈದ್ರಾಬಾದ್ ನಿಜಾಮ ಭಾರತದ ಒಕ್ಕೂಟ ವ್ಯವಸ್ಥೆಗೆ ಸೇರದೆ ಸ್ವತಂತ್ರವಾಗಿರಲು ಬಯಸಿದನು. ಇಂತಹ ಸಂದರ್ಭದಲ್ಲಿ ಕರ್ನಾಟಕ ಬಹುಭಾಗಗಳು ಮೈಸೂರು ರಾಜ್ಯದಲ್ಲಿ ವಿಲೀನವಾಗಿ ಸ್ವತಂತ್ರ್ಯವಾಗಿದ್ದವು. ನಿಜಾಮನ ಆಡಳಿತಕ್ಕೆ ಮತ್ತು ಅವನ ಸ್ಥಾನ ಭದ್ರವಾಗಿಡಲು ನೆರವಾಗಲು ಕಾಸೀಂರಜ್ಮಿ, ಎಂಬ ಮುಸ್ಲಿಂ ಮತಾಂಧನ ನೇತೃತ್ವದಲ್ಲಿ ಒಂದು ಗುಂಪು ಸಿದ್ದವಾಗಿತ್ತು. ಆ ಗುಂಪನ್ನು ರಜಾಕಾರರು ಎಂದು ಕರೆಯಲಾಗುತ್ತಿತ್ತು. ಇವರನ್ನು ಸ್ವಯಂ ಸೇವಕರು ಎಂದು ನಿಜಾಮ ಕರೆಯುತ್ತಿದ್ದ. ರಜಾಕಾರರು, ನಿಜಾಮನ ವಿರುದ್ಧವಾಗಿ ದಂಗೆ ಎದ್ದು, ಮರಾಠವಾಡ, ಬೀದರ, ಗುಲ್ಬರ್ಗಾ, ರಾಯಚೂರು ರಾಯಲಸೀಮಾ ಮೊದಲಾದ ಪ್ರಾಂತ್ಯಗಳಲ್ಲಿನ ತೆಲುಗು, ಕನ್ನಡ, ಮರಾಠಿ ಭಾಷಿಕ ಜನರನ್ನು ಹಿಂಸಿಸತೊಡಗಿದರು. ಈ ಸಂದರ್ಭದಲ್ಲಿ ಅನೇಕ ಜಮೀನ್ದಾರರು ದೇಶಮುಖರು ದೇಸಾಯಿ, ಪಟೇಲ್, ಗೌಡ, ಸಾಹುಕಾರರು ಅವರ ವಿರುದ್ಧ ಹೋರಾಟ ಆರಂಭಿಸಿದರು. ಇವರ ಮಧ್ಯದಲ್ಲಿ ಹಿಂಸೆಗೊಳಗಾದವರು ಜನಸಾಮಾನ್ಯರು.

ಹೈದ್ರಾಬಾದ್ ನಗರದಲ್ಲಿ 'ಇತ್ರೆಹಾದುಲ್ ಮುಸಿಲ್ಮೀನ್' (ರಾಜಶೇಖರ ಹಳೆಮನೆ:೨೦೦೮:೩೭) ಎಂಬ ಮತೀಯವಾದಿ ಸಂಘಟನೆಯು ಕಾಸೀಂ ರಜ್ಮಿ ಮುಂದಾಳತ್ವದಲ್ಲಿ ರೂಪಗೊಂಡಿತು. ಇದರ ಚಟುವಟಿಕೆಗೆ ನಿಜಾಮನ ಬೆಂಬಲ ದೊರೆಯಿತು. ಈ ಸಂಘಟನೆಯು ಸಂಸ್ಥಾನದಲ್ಲಿ ಅಲ್ಪಸಂಖ್ಯಾತರಾಗಿದ್ದ ಮುಸ್ಲಿಂರನ್ನು

"ಇಸ್ಲಾಂ ಖತರೇಮೇಹೈ" ಎಂಬ ವಾದವನ್ನು ಮುಂದು ಮಾಡಿ ಕೆರಳಿಸಲಾಯಿತು. ನಿಜಾಮ ಸಂದಿಗ್ಧ ಸ್ಥಿತಿಗೆ ಸಿಕ್ಕು ಈ ಸಂಘಟನೆಯನ್ನು ಬೆಂಬಲಿಸಿದ. ಈ ಸಂಘಟನೆಯಲ್ಲಿ ಕೆಲಸ ಮಾಡುವ ಕಾರ್ಯಕರ್ತರನ್ನು ರಜಾಕಾರರು(ಸ್ವಯಂಸೇವಕರು) ಎಂದು ಕರೆಯಲಾಯಿತು. ಈ ಸಂದರ್ಭದಲ್ಲಿ ನಿಜಾಮ ಒಂದು ಪರ್ಮಾನವನ್ನು ಹೊರಡಿಸಿದ ಮುಸ್ಲಿಂ, ಇತರೆ ಜಾತಿಯವರ ಜಮೀನುಗಳನ್ನು ಖರೀದಿಸಬಹುದು. ಆದರೆ ಬೇರೆ ಜಾತಿಯವರು ಮುಸ್ಲಿಂ ಸಮುದಾಯದವರ ಜಮೀನನ್ನು ಖರೀದಿಸಬಾರದು. ಜಮೀನು ಒತ್ತೆ ಹಾಕಿ ಸಾಲಗಾರರಾಗಿದ್ದ ಮುಸ್ಲಿಂ ಜನರು ಸಾಲದಿಂದ ಮುಕ್ತರು, ಸಾಲಮಾಡಿದ ಬಡವರು ಮತಾಂತರವಾದರೆ ಸಾಲದಿಂದ ಮುಕ್ತರು. ಈ ಕಾನೂನಿಂದಾಗಿ ನಿಜಾಮನ ಆಡಳಿತಕ್ಕೆ ಒಳಪಟ್ಟ ಪ್ರಾಂತ್ಯಗಳಲ್ಲಿ ದಲಿತರಿಗೆ ಮತಾಂತರವಾಗಲು ಆಸೆ ಹುಟ್ಟಿಸಿತು. ಇದನ್ನು ಆರ್ಯಸಮಾಜ ತೀವ್ರವಾಗಿ ವಿರೋಧಿಸಿತು.

ಭಾರತದಲ್ಲಿ ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟ ತೀವ್ರ ಸ್ವರೂಪ ಪಡೆದಾಗ ಬ್ರಿಟಿಷರು ಸ್ವತಂತ್ರ್ಯ ನೀಡುವ ಸಂದರ್ಭದಲ್ಲಿ ಸಂಸ್ಥಾನಿಕರಿಗೆ "ಸ್ವತಂತ್ರ ಭಾರತದಲ್ಲಿ ವಿಲೀನವಾಗರಬಹುದು. ಇಲ್ಲ ಸ್ವತಂತ್ರ್ಯವಾಗಿಯೇ ಇದ್ದು ರಾಜ್ಯಾಡಳಿತ ನಡೆಸಬಹುದು." (ಅದೇ:೩೭) ಎಂಬ ಹೇಳಿಕೆಯನ್ನು ಹೊರಡಿಸಿದರು. ಭಾರತದಲ್ಲಿ ದೊಡ್ಡ ಸಂಸ್ಥಾನವನ್ನು ಹೊಂದಿದ್ದ ನಿಜಾಮ ಇದರಿಂದ ಪ್ರೇರೇಪಿತನಾಗಿ ಹೈದ್ರಬಾದ್ ಸಂಸ್ಥಾನವು ಸ್ವತಂತ್ರವಾಗಿಯೇ ಮುಂದುವರೆಯುತ್ತದೆ. ಪ್ರಜೆಗಳು ಸಂಸ್ಥಾನಕ್ಕೆ, ನಿಜಾಮನಿಗೆ ನಿಷ್ಠೆಯಿಂದಿರಬೇಕು ಎಂದು ಕಾನೂನು ಹೊರಡಿಸಿದನು. ಇದರಿಂದಾಗಿ ಭಾರತಕ್ಕೆ ಸ್ವತಂತ್ರ್ಯ ಬಂದರೂ, ಹೈದ್ರಾಬಾದ್ ಸಂಸ್ಥಾನಕ್ಕೆ ಸ್ವತಂತ್ರ್ಯ ಬರಲಿಲ್ಲವಾದುರಿಂದ ನಿಜಾಮನ ಆಡಳಿತ ಮುಂದುವರೆದಿತ್ತು.

ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರ ಸ್ವಾತಂತ್ರ್ಯಕ್ಕಾಗಿ ತೆಲುಗು, ಕನ್ನಡ, ಮರಾಠಿ ಭಾಷಿಕರು, ಉರ್ದುವಿನ ಶೋಷಣೆಯಿಂದ ಬೇಸೆತ್ತು ಹೋರಾಟ ಆರಂಭಿಸಿದರು. ಇದರ ಫಲವಾಗಿ ಕರ್ನಾಟಕದ ಇಂದಿನ ಬೀದರ್, ಗುಲ್ಬರ್ಗಾ, ರಾಯಚೂರು ಜಿಲ್ಲೆಗಳ ಜನರು ಅಪಾರ ಸಾವು–ನೋವುಗಳಿಗೆ ಒಳಗಾದರು. ನಿಜಾಮ ಅಧಿಕಾರ ಉಳಿಸಿಕೊಳ್ಳಲು ಯಾವುದೇ ಕಾರ್ಯಮಾಡಲು ಸಿದ್ಧನಾಗಿದ್ದರಿಂದ ಬೆನ್ನೆಲುಬಾಗಿ ನಿಂತಿದ್ದು, 'ಇತ್ತೆಹಾದುಲ್ ಮುಸಲ್ಮೀನ್ ಸಂಘಟನೆ' ಈ ಸಂಘಟನೆಯ ಸದಸ್ಯರಾದ ರಜಾಕಾರರು ನಿಜಾಮನ ಅಶಕ್ತತೆಯನ್ನು ಬಳಸಿಕೊಂಡು ಮತಾಂಧರಾಗಿ, ದಾಳಿಕೋರರಾಗಿ ಬೆಳೆಯತೊಡಗಿದರು. ನಿಜಾಮನ ಪ್ರಭುತ್ವವನ್ನು ಒಪ್ಪಿಕೊಳ್ಳುವಂತೆ ಜನಸಾಮಾನ್ಯರನ್ನು ಒತ್ತಾಯಿಸಿ ಸ್ವೇಚ್ಛಚಾರಿಗಳಂತೆ ವರ್ತಿಸತೊಡಗಿದರು.

ರಜಾಕಾರರು ತಮ್ಮ ಪಡೆಗೆ ಜನರನ್ನು ಒತ್ತಾಯದಿಂದ ಸೇರಿಸಿಕೊಳ್ಳತೊಡಗಿದರು. ಅವರ ಜತೆ ಪಠಾಣರು ಮತ್ತು ನಿಜಾಮನ ಪೋಲಿಸ್ ಪಡೆ ಸೇರಿಕೊಂಡು ಹಳ್ಳಿಹಳ್ಳಿಗಳಲ್ಲಿ ದಾಳಿನಡೆಸಿದರು. ಅತ್ಯಾಚಾರಗಳು, ದರೋಡೆಗಳು, ಕೊಲೆ-ಸುಲಿಗೆಗಳು ಈ ಪ್ರಾಂತ್ಯದಲ್ಲಿ ದೈನಂದಿನ ಚಟುವಟಿಕೆಗಳಾದವು. ಇಷ್ಟೇ ಅಲ್ಲದೇ ರಜಾಕಾರರ ಹೆಸರಿನಲ್ಲಿ ಸ್ಥಳೀಯವಾಗಿ ಸಮಯ ಸಾಧಕರು ಹುಟ್ಟಿಕೊಂಡು ದಾಳಿ ನಡೆಸತೊಡಗಿದರು. ಇದರಿಂದಾಗಿ ಶೋಷಿತರಾದ ಜನರು ಪಕ್ಕದ ಗಡಿಗಳಿಗೆ ವಲಸೆ ಹೋಗತೊಡಗಿದರು. ಈ ಸಂದರ್ಭದಲ್ಲಿ ದೊಡ್ಡ ದೊಡ್ಡ ಸ್ಥಳೀಯ ಜಮೀನ್ದಾರರು ಮುಸ್ಲಿಂ ಧರ್ಮಕ್ಕೆ ಮತಾಂತರ ಹೊಂದಲು ಮುಂದಾದರು. ನಿಜಾಮ ಹಿಂದೂಗಳ ಧಾರ್ಮಿಕ ಭಾವನೆಗಳಿಗೆ ತೊಡಕಾಗಿ ಹಿಂದೂಗಳ ಮದುವೆ, ಹಬ್ಬ, ಉತ್ಸವ, ಜಾತ್ರೆ ಮುಂತಾದ ಧಾರ್ಮಿಕ ಆಚರಣೆಗಳಿಗೆ ನಿರ್ಬಂಧ ಹೇರಿದನು. ಈ ಎಲ್ಲ ಕಿರುಕುಳ ತಾಳಲಾರದೇ, ಮುಸ್ಲಿಂಧರ್ಮಕ್ಕೆ ಮತಾಂತರ ಹೊಂದಲು ಒಪ್ಪದ ಸ್ವಾಭಿಮಾನಿಗಳು ತಾವು ನೆಲೆಸಿದ್ದ ನಿಜಾಮ ಪ್ರಾಂತ್ಯಗಳಿಂದ ಬೇರೆ ಕಡೆಗಳಿಗೆ ವಲಸೆ ಪ್ರಕ್ರಿಯೆ ಆರಂಭಿಸಿದರು.

ಕರ್‌ಕರ್ ಮುಂಡರು ನಿಜಾಮನ ಅಧೀನವಾಗಿದ್ದ ಸುರಪುರ ನೆಲೆಯಿಂದ ದಕ್ಷಿಣದ ಕೊಪ್ಪಳ, ಧಾರವಾಡ, ದಾವಣಗೆರೆ, ಹಾವೇರಿ, ಬಳ್ಳಾರಿ ಕಡೆಗೆ ನಮ್ಮ ಪೂರ್ವಿಕರು ವಲಸೆ ಬಂದಿದ್ದಾರೆ ಎಂದು ಮಾಹಿತಿದಾರರು ತಿಳಿಸಿದ್ದಾರೆ. ವಿಜಯನಗರದಿಂದ ವೇದಾವತಿ, ಚಿನ್ನಹಗರಿ ಪ್ರದೇಶದಲ್ಲಿಯ ಮೊಂಡಬೇಡರು ಬೇಡ ಸಮುದಾಯಗಳಲ್ಲಿ ಸೇರಿಹೋಗಿದ್ದು, ನಾವು ಬೇಡರಿಗೆ ನೆಂಟರಾಗಬೇಕು ಎಂಬ ಹಕ್ಕೊತ್ತಾಯಗಳನ್ನು ವ್ಯಕ್ತಪಡಿಸುತ್ತಾ ವರ್ಷಕ್ಕೊಮ್ಮೆ ಮೊಂಡ ವೇಷ ಧರಿಸಿ ಭಿಕ್ಷೆ ಬೇಡುತ್ತಿದ್ದಾರೆ. ಕೆಲವೊಂದು ಹಳ್ಳಿಗಳಲ್ಲಿ ಮೊಂಡರು ಎಂಬುದು ಒಂದು ಮನೆತನವಾಗಿ ಮ್ಯಾಸಬೇಡರೊಂದಿಗೆ ವೈವಾಹಿಕ ಸಂಬಂಧ ಬೆಳೆಸಿಕೊಂಡಿದೆ. ದಕ್ಷಿಣದ ಮಧುಗಿರಿ, ಚಿತ್ರದುರ್ಗಗಳಲ್ಲಿ ಹೊಸಬೇಡರೆಂದು ನಾಯಕ ಅಥವಾ ಬೇಡ ಸಮುದಾಯದಲ್ಲಿ ಸೇರಿಹೋಗಿದ್ದಾರೆ. ಕರ್‌ಕರ್ ಮುಂಡರ ಬೇಡ ಸಮುದಾಯದ ಒಳಪಂಗಡ ಎಂದು ಅಧ್ಯಯನಕಾರರ ಮತ್ತು ಮಾಹಿತಿದಾರರ ತಿಳುವಳಿಕೆಯಿಂದ ಒಪ್ಪುವ ಸಾಧ್ಯತೆಗಳಿದ್ದು, ನಮ್ಮೆದುರಿಗೆ ಬರುವ ಪ್ರಶ್ನೆಗಳೆಂದರೆ ಬೇಡರಿಂದ ಯಾವಾಗ ಯಾಕೆ? ವಿಘಟನೆ ಅಥವಾ ದೂರ ಉಳಿಯಲ್ಪಟ್ಟರು? ಎಂಬುದನ್ನು ಈ ಅಧ್ಯಯನದಲ್ಲಿ ಚರ್ಚೆಗೆ ಒಳಪಡಿಸಲಾಗಿದೆ.

**ಬೇಡ ಸಮುದಾಯದೊಂದಿಗಿನ ವಿಘಟನೆ :**

ಕರ್‌ಕರ್‌ಮುಂಡ ಸಮುದಾಯ ಊರಬೇಡ, ಮ್ಯಾಸಬೇಡ ಸಮುದಾಯಗಳ ಸಂಗಮದಂತೆ ಆಚರಣೆ ಮತ್ತು ಸಂಪ್ರದಾಯ ಸಾಂಸ್ಕೃತಿಕ ಲಕ್ಷಣಗಳನ್ನು ಹೊಂದಿದೆ.

ಬೇಡರಿಂದ ವಿಘಟನೆ ಹೊಂದಲು ಕರ್‌ಕರ್‌ಮುಂಡರ ಆಹಾರ ಪದ್ಧತಿಯು ಒಂದು ಕಾರಣವಾಗಿದೆ.

ಮ್ಯಾಸಬೇಡರಿಂದ ಕವಲೊಡೆದ ನಾಡಿನ ಸಂಸ್ಕೃತಿಗೆ ಬಹುಬೇಗ ಹೊದಿಕೊಂಡ ಊರಬೇಡರು, ಮ್ಯಾಸಬೇಡರಿಂದ ವಿಘಟನೆ ಹೊಂದಲು ಇರುವ ಕಾರಣಗಳಲ್ಲಿ ಕೋಳಿ ಬಳಕೆಯು ಒಂದು ಕಾರಣವೆಂದು ಹೇಳಲಾಗುತ್ತದೆ. ಕಾರಣ ಕೋಳಿ ಹೊಲಸು ತಿನ್ನುತ್ತದೆ ಮತ್ತು ಮ್ಯಾಸಬೇಡರು ಪಶುಪಾಲಕರಾಗಿ ಹಟ್ಟಿಗಳಲ್ಲಿ ಜೀವನ ನಡೆಸುತ್ತಿರುವಾಗ ಕೋಳಿಯ ಕರ್ಕಶ ಶಬ್ದದಿಂದ ದನಗಳು ಛಿದ್ರಗೊಂಡ ಪಶುಗಳೇ ಜೀವನಾಧಾರವಾಗಿದ್ದಾಗ ಪಶುಗಳನ್ನು ನಂಬಿಕೊಂಡಿದ್ದರಿಂದ ಹೊಲಸು ತಿನ್ನುತ್ತಿದ್ದ ಕೋಳಿಯ ಸೇವನೆಯಿಂದ ಊರಬೇಡರು ಮ್ಯಾಸಬೇಡರಿಂದ ವಿಗಂಡಣೆಯಾದರು ಎಂದು ಮೌಖಿಕ ಐತಿಹ್ಯಗಳು ತಿಳಿಸುತ್ತವೆ. ಆದರೆ ಅದಕ್ಕೆ ನಿಖರವಾದ ದಾಖಲೆಗಳು ದೊರೆಯದಿರುವದು ಚರಿತ್ರೆಯ ಮಿತಿಯಾಗಿದೆ. ಊರ ಬೇಡ ವಿಂಗಡಣೆಗೆ ಕಾರಣವಾದ ಕೋಳಿಯ ಬಳಕೆ ಕರ್‌ಕರ್ ಮೊಂಡರಲ್ಲಿದೆ. ಎರಡನೆಯದಾಗಿ ಹಂದಿಸೇವನೆ, ಕರ್‌ಕರ್ ಮುಂಡರಲ್ಲಿ ಪ್ರತಿ ಧಾರ್ಮಿಕ ವಿಧಿಗಳಲ್ಲಿ ಹಂದಿಯ ಬಳಕೆ ಸಾಮಾನ್ಯವಾಗಿದೆ. ಮ್ಯಾಸಬೇಡರಲ್ಲಿ ಹಂದಿಯ ಬೇಟೆಯನ್ನು ಕಾಣುತ್ತೇವೆ. ಆದರೆ ಅದನ್ನು ಸೇವಿಸುವುದಿಲ್ಲ. ಬದಲಾಗಿ ಬೇಟೆಯಾಡಿದ ಹಂದಿಯನ್ನು ಊರಲ್ಲಿನ ಹಂದಿ ಸೇವಿಸುವ ವರ್ಗಗಳಿಗೆ ನೀಡಲಾಗುತ್ತಿತ್ತು. ಹಂದಿಯ ಕೂದಲು ಮತ್ತು ಕಿವಿಯನ್ನು ಕೊಯ್ದು ಬುಡ್ಡೆಕಲ್ಲಿನ ಸಮೀಪ ಹೂಳುವ ಸಂಪ್ರದಾಯವನ್ನು ಇಂದಿಗೂ ಕಾಣಬಹುದು.

ಕರ್‌ಕರ್‌ಮುಂಡರು ಹಿಂದೆ ಹಂದಿ ಬೇಟೆಯಾಡುತ್ತಿದ್ದರು. ಆದರೆ ತಿನ್ನುತ್ತಿರಲಿಲ್ಲ. ರಜಾಕಾರರ ಹಾವಳಿಯ ಸಂದರ್ಭದಲ್ಲಿ ಮುಸ್ಲಿಂ ಮತಾಂತರದಿಂದ ತಪ್ಪಿಸಿಕೊಳ್ಳಲು ಮುಸ್ಲಿಂಮರಿಗೆ ಅನಿಷ್ಟವಾದ ಹಂದಿ ತಿನ್ನುವುದರ ಮೂಲಕ ಮೂಲಧರ್ಮದಲ್ಲಿ ಉಳಿಯಲು ಸಾಧ್ಯವಾಯಿತು. ಮುಂದುವರೆದು ಹಂದಿ ಬೇಟೆಯು ನಶಿಸುತ್ತಾ ಹಂದಿ ಸಾಕಾಣಿಕೆ ಆರಂಭವಾಯಿತು. ಆ ವೇಳೆಗಾಗಲೇ ಹಂದಿಯ ಆಹಾರ, ಪ್ರತಿ ಆಚರಣೆಗಳಲ್ಲಿಸೇರಿಹೋಗಿತ್ತು ಎಂದು ಮಾಹಿತಿದಾರರು ತಿಳಿಸುತ್ತಾರೆ. ಕೋಳಿಯ ಬಳಕೆಯು ಮ್ಯಾಸಬೇಡರಿಂದ ಊರಬೇಡರು ವಿಘಟನೆ ಹೊಂದಲು ಕಾರಣವಾದರೆ ಹಂದಿಯು ಬೇಡರಿಂದ ಕರ್‌ಕರ್ ಮುಂಡರು ದೂರವಾಗಲು ಕಾರಣವಾಗಿರಬೇಕು.

ಬ್ರಿಟಿಷರು ಅಪರಾಧಿ ಬುಡಕಟ್ಟುಗಳ ಕಾಯ್ದೆಯನ್ನು ಜಾರಿಗೊಳಿಸಿದರು. ಬ್ರಿಟಿಷರ ಆಡಳಿತಕ್ಕೆ ವಿರೋಧಿಯಾಗಿದ್ದ ಮತ್ತು ಸ್ಥಳೀಯ ರಾಜರಿಗೆ ಪೂರಕವಾಗಿ ಕಾರ್ಯನಿರ್ವಹಿಸಿದ್ದ ಸಮುದಾಯಗಳನ್ನು ಇದರ ಅಡಿಯಲ್ಲಿ ಸೇರಿಸುತ್ತಾ ನಿರ್ಬಂಧಿಸಿ

ನಿಯಂತ್ರಿಸಲು ಪ್ರಯತ್ನಿಸಿದರು. ಈ ಪಟ್ಟಿಯಲ್ಲಿ ಎಲ್ಲಿಯೂ ಕರ್‌ಕರ್ ಮುಂಡ ಎಂಬ ಹೆಸರು ಕಂಡುಬರುವುದಿಲ್ಲ. ಬೇಡ ಎಂಬ ಹೆಸರು ಮಾತ್ರ ಕಂಡುಬರುತ್ತದೆ. ಏಕೆಂದರೆ ಬೇಡ ಸಮುದಾಯದಿಂದ ಮೊದಲೆ ವಿಂಗಡಣೆ ಹೊಂದಿದ್ದರೆ ಈ ಪಟ್ಟಿಯಲ್ಲಿ ಹೆಸರಿರಬೇಕಿತ್ತು. ಇದರಿಂದಾಗಿ ಕರ್‌ಕರ್ ಮುಂಡ ಸಮುದಾಯ ಸುರಪುರ ಅರಸರ ಅಂತ್ಯದ ಕಾಲದಲ್ಲಿ ಬೇಡ ಸಮುದಾಯದಿಂದ ವಿಂಗಡಣೆ ಹೊಂದಿರುವ ಸಾಧ್ಯತೆ ಇದೆ ಎಂದು ಊಹಿಸಬಹುದು.

ಕರ್‌ಕರ್‌ಮುಂಡರು ಮಾತೃದೇವತಾರಾಧಕರಾಗಿದ್ದು, ಎಲ್ಲಮ್ಮ, ಮಾರಮ್ಮ, ಗೂಗಲಿಮಾರಿದುರ್ಗಮ್ಮ, ಮುತ್ಯಾಲಮಾರಿ, ಹುಲಿಗೆಮ್ಮ, ಲಕ್ಷ್ಮೀ ಮುಂತಾದ ಮಾತೃದೇವರನ್ನು ಮನೆದೇವರೆಂದು ಆರಾಧಿಸುತ್ತಾರೆ. ಈ ದೇವರುಗಳನ್ನು ಬೇಡ ಸಮುದಾಯದವರು ಆರಾಧಿಸುವರು.

ಕರ್‌ಕರ್‌ಮುಂಡರು ಪಶುಪಾಲಕರ ಬೆಡಗುಗಳನ್ನು ಹೊಂದಿದ್ದು, ಅವುಗಳಲ್ಲಿ ಹೆಚ್ಚಾಗಿಬೇಡ ಸಮುದಾಯದಲ್ಲಿ ಕಂಡುಬರುತ್ತವೆ. ಭಾಷಿಕವಾಗಿ ಮ್ಯಾಸಬೇಡರಂತೆ ತೆಲುಗು ಭಾಷೆಯನ್ನೇ ಉಳಿಸಿಕೊಂಡಿದ್ದಾರೆ. ಕೋಳಿಯನ್ನು ಊರಬೇಡರಂತೆ ತಿನ್ನುತ್ತಾರೆ. ಮ್ಯಾಸಬೇಡರಂತೆ ಹಂದಿಯನ್ನು ಬೇಟೆಯಾಡುತ್ತಿದ್ದರು. ಮತಾಂತರದಿಂದ ತಪ್ಪಿಸಿಕೊಳ್ಳಲು ಹಂದಿ ಸೇವಿಸಿ ಬೇಡರಿಂದ ವಿಘಟನೆ ಹೊಂದಿರುವ ಸಾಧ್ಯತೆಗಳಿವೆ ಎಂದು ತಿಳಿಯಬಹುದಾಗಿದೆ.

ಬೇಡರಿಗೂ ಮೊಂಡರಿಗೂ ಇರುವ ಸಂಬಂಧವನ್ನು ತಿಳಿಸುವ ಬೇಡ ನಾಯಕ ಸಮುದಾಯ ಕೆಲವು ಐತಿಹ್ಯಗಳಲ್ಲಿ ನಾಗಪ್ಪ–ನರಸಪ್ಪಕಥೆ ಪ್ರಮುಖವಾಗಿದೆ.

ಬೇಡರಿಗೂ ಮತ್ತು ಮೊಂಡರಿಗೂ ಇರುವ ಬಾಂಧವ್ಯದ ಕುರಿತಾಗಿ ಈ ಜನಪದ ಐತಿಹ್ಯವೊಂದು ಈ ರೀತಿಯಾಗಿ ವಿವರಣೆ ನೀಡುತ್ತದೆ. "ಭಿಕ್ಷೆ ಬೇಡಲು ಬಂದ ಮೊಂಡರು ಸ್ಥಳೀಯರಿಂದ ಸಂಗ್ರಹಿಸಿದ ದವಸ ಧಾನ್ಯಗಳನ್ನು ಬೇಡರ ನಾಗಪ್ಪನ ಮನೆಯಲ್ಲಿ ಇಟ್ಟು, ಊಟ ಮುಗಿಸಿದ ನಂತರ ನಾವು ನಿಮಗೆ ಊರು ಕೊಟ್ಟು ಕಾಡು ಸೇರಿ ಮೊಂಡರಾದೆವು. ಎಂದು ಹೇಳಿದ ಮೊಂಡನ ಮಾತನ್ನು ಸಮರ್ಥಿಸಿಕೊಳ್ಳುತ್ತಾ, ನಾಗಪ್ಪ ಹಿಂದಿನ ಕಾಲದಲ್ಲಿ ಬೇಡರ ಮಂದಲಗೋತ್ರ ಇಬ್ಭಾಗವಾಗಿ ಸಿಡಿದು ಮೊಂಡರು ಎಂಬ ಗುಂಪು ಸೃಷ್ಟಿಯಾಯಿತು. ಮಂದಲ ತಾತ ಬೇಡರಿಗೂ ಮತ್ತು ಮೊಂಡರಿಗೂ ಮೂಲಪುರುಷನಾಗಿದ್ದನು. ಪೆದ್ದಟ್ಟಿ ಗೊಲ್ಲರನ್ನು ಮೊಂಡರಂತೆ ಎಚ್ಚರಿಸುತ್ತಾ ತಮ್ಮ ಮನೆಯ ಹೆಣ್ಣು ಮಕ್ಕಳನ್ನು ಮಾಡಿಕೊಟ್ಟ ಮನೆಗಳಿಗೆ ಹೋದಾಗ ಊಟ ಮಾಡಬೇಕೇ ಹೊರತು ಭಿಕ್ಷೆಯನ್ನು ಬೇಡಬಾರದೆಂದು ಮೊಂಡರನ್ನು ಮತ್ತು

ಪೆದ್ದಟ್ಟಿ ಗೊಲ್ಲರನ್ನು ಎಚ್ಚರಿಸುತ್ತಿದ್ದ. ವೃತ್ತಿಗೆ ಹೊಸದಾಗಿ ಬಂದ ಮೊಂಡರು ಮಂದಲ ಗೋತ್ರದಲ್ಲಿ ಭಿಕ್ಷೆಯನ್ನು ಬೇಡುವಾಗ ಮೊಂಡಾಟ ಮಾಡಿದರೆ ಆಯುಧ ವಿಶೇಷಗಳನ್ನೆಲ್ಲ ಕಸಿದುಕೊಂಡು ಕುಲಕಸುಬಿನಿಂದ ಬಹಿಷ್ಕರಿಸುವುದಾಗಿ ಎಚ್ಚರಿಸುತ್ತಿದ್ದನು" (ಲಕ್ಷ್ಮೀದೇವಿ ಎಲ್:೨೦೧೧:೪೨-೪೩) ಎಂದು ತಿಳಿಸುತ್ತದೆ.

ನಾಗಪ್ಪ ಮೊಂಡರಿಗೆ ಅಂಟಿಕೊಂಡಿದ್ದ ಭಿಕ್ಷುಕರು ಎಂಬ ಕಳಂಕವನ್ನು ತೊಳೆಯಲು ತೋರಿದ ಕ್ರಾಂತಿಕಾರಿ ಧೋರಣೆ ಆಗಿರಬಹುದು. ಹಿಂದಿನ ಕಾಲದಲ್ಲಿ ದನದ ಮಂದೆಗಳನ್ನು ಕಾಯುತ್ತಿದ್ದವರನ್ನು ಮಂದಲದವರು ಎಂದು ಕರೆಯಲಾಗುತ್ತಿತ್ತು ಮತ್ತು ಒಂದೇ ಬೆಡಗಿನವರು ಸಮುದಾಯಕ್ಕೆ ವಿರುದ್ಧವಾಗಿ ವಿವಾಹವಾದದ್ದರಿಂದ ಪ್ರತ್ಯೇಕಬೆಡಗಾಗಿ ರೂಪಗೊಂಡು ಮಂದಲದವರೆಂದು ಕರೆಯಲಾಯಿತು. ಕಾರಣಾಂತರಗಳಿಂದಾಗಿ ಭಿಕ್ಷೆ(ವರ್ತನೆ) ಪಡೆಯುವುದು ನಮ್ಮ ಕುಲದ ಹಕ್ಕು ಎಂದು ಸ್ವೀಕರಿಸಿದ ಮೊಂಡರನ್ನು ಬೇಡ ಪಾಳೆಯಗಾರರು ತಮ್ಮ ರಾಜಕೀಯ ಪರ್ವದಲ್ಲಿ ಗುಪ್ತಚರರಾಗಿ ನೇಮಿಸಿಕೊಂಡಿದ್ದರೆಂದು ಈ ಜನಪದ ಕಥೆ ತಿಳಿಸುತ್ತದೆ.

ಪ್ರಸ್ತುತ ಕಥೆಯಿಂದ ವ್ಯಕ್ತವಾಗುವ ಅಂಶಗಳಲ್ಲಿ ಬೆಡಗು, ಪಂಗಡವಾಗುವುದು ಮತ್ತು ಪಾಳೆಯಗಾರರ ಕಾಲದಲ್ಲಿ ಗುಪ್ತಚರರಾಗುವುದು ಮತ್ತು ಇದಕ್ಕೆ ಕಾರಣ ದನಗಳನ್ನು ಕಾಯುತ್ತ ಅಲೆಮಾರಿಗಳಾಗಿದ್ದಾಗ ಶತ್ರುಗಳು ಷಡ್ಯಂತ್ರವನ್ನು ಬಹುಸುಲಭವಾಗಿ ತಿಳಿಯಲು ಸಾಧ್ಯವಾಗುತ್ತಿರಬೇಕು. ನೆಂಟರ ಮನೆಯಲ್ಲಿ ಭಿಕ್ಷೆ ಬೇಡುವ ವೇಷವನ್ನು ಮಾಹಿತಿ ಸಂಗ್ರಹಿಸಲು ಬಳಸಿರುವ ಸಾಧ್ಯತೆಗಳಿವೆ.

ಮೌರ್ಯರ ಕಾಲದಲ್ಲಿ ಚಾಣಾಕ್ಷ ಆಡಳಿತಗಾರನಾಗಿದ್ದ ಕೌಟಿಲ್ಯನು ಆಡಳಿತದಲ್ಲಿನ ಸಪ್ತಾಂಗಗಳ ಕಾರ್ಯವೈಖರಿ ಬಗ್ಗೆ ತಿಳಿಸುತ್ತಾ ಅದರಲ್ಲಿ ಗುಪ್ತಚರರ ಬಗ್ಗೆಯು ವಿವರಣೆ ನೀಡಿದ್ದಾನೆ. ಕೌಟಿಲ್ಯನು ಗುಣಲಕ್ಷಣಗಳನ್ನಾಧರಿಸಿ ನಾಲ್ಕು ರೀತಿಯ ಗೂಢಚಾರಿಗಳನ್ನು ಗುರುತಿಸಿದ್ದಾನೆ.

೧. "ಸತ್ರಿಗಳು : ರಾಜಬಂಧುಗಳು ಮೇಲಾಗಿ ಅವಶ್ಯ ಭರಣೀಯರೂ ಎನಿಸಿದವರಾಗಿ ಹಸ್ತ ಸಾಮುದ್ರಿಕಶಾಸ್ತ್ರ ದೇಹಸ್ಪರ್ಷದಿಂದಲೇ ಶುಭಾಶುಭ ಸೂಚನೆಗಳನ್ನರಿಯುವ ವಿದ್ಯೆ, ಒಬ್ಬರನ್ನು ಸುಲಭವಾಗಿ ಒಲಿಸಿಕೊಳ್ಳುವ ವಶೀಕರಣ ವಿದ್ಯೆ, ಅಂತರ್ಧಾನಮ ವಿದ್ಯೆ, ಇಂದ್ರಜಾಲ, ವರ್ಣಾಶ್ರಮ, ಧರ್ಮಶಾಸ್ತ್ರ ಮತ್ತು ಶಾಸ್ತ್ರಗಳನ್ನು ಅರಿತವರು ಮತ್ತು ಕಾಮಶಾಸ್ತ್ರ, ನೃತ್ಯಗೀತೆಗಳಲ್ಲಿ ನುರಿತವರಾಗಿರುತ್ತಾರೆ.

೨. ದೇಹದ ಮೇಲಿನ ಹಂಗನ್ನು ತೊರೆದು ಹಣಕ್ಕಾಗಿ ಆನೆ, ಹುಲಿ ಮುಂತಾದ ಕ್ರೂರ ಜಂತುಗಳೊಡನೆ ಕಾದಾಡಲು ಹಿಂದೆಗೆಯದ ಶೂರರು ತೀಕ್ಷ್ಣರು ಆಗಿದ್ದಾರೆ.

೩. ಸ್ವ-ಬಂಧುಗಳ ವಿಷಯದಲ್ಲಿಯೂ ಮಮತೆ ಇಲ್ಲದವರಾದ ಕ್ರೂರರು, ಸೋಮಾರಿಗಳು ಎನಿಸಿದರಸದವರು

೪. ಜೀವನಾಭಿರುಚಿಯುಳ್ಳವಳೂ ದರಿದ್ರಳೂ, ಪ್ರಗಲಬ್ದಳು, ಮೇಲಾಗಿ ವಿಧವೆಯು ಆದ ಬ್ರಾಹ್ಮಣ ಹೆಂಗಸು ಪರಿವ್ರಾಚಿಕೆ. ಅವಳು ಅಂತಃಪುರದಲ್ಲಿ ಸತ್ಕೃತಳಾಗಿ ಆಗಾಗ ಮಂತ್ರಿಗಳೇ ಮುಂತಾದವರ ಮನೆಗೆ ಹೋಗಿ ಬರುತ್ತಿರಬೇಕು. ಇವಳಂತೆಯೇ ಇರುವ ಮತ್ತೊಂದು ಗುಂಪು ಮುಂಡಾ ವೃಷಗಳು ಈ ಕಾರ್ಯವನ್ನು ನಿರ್ವಹಿಸುವವರು ಭಿಕ್ಷುಕರು" (ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು (ಅ):೨೦೦೫:೧೫೫).

ಕೌಟಿಲ್ಯನನ್ನು ಈ ರೀತಿಯಾಗಿ ನಾಲ್ಕು ಗೂಢಚಾರಿ ವರ್ಗಗಳ್ನು ಗುರುತಿಸಿದ್ದಾನೆ. ಈ ಗುಪ್ತಚರರು ಮಾಹಿತಿ ತಿಳಿಸುವ ಮತ್ತು ಕಲೆಹಾಕುವ ಸಂದರ್ಭದಲ್ಲಿ ತಮ್ಮ ತಂತ್ರಗಳ ಕುರಿತಾಗಿ ತಿಳಿಸುತ್ತಾ, ಅಂತಃಪುರದೊಳಗೆ ಭಿಕ್ಷುಕರಿಗೆ ಪ್ರವೇಶವಿಲ್ಲದಿದ್ದಾಗ ಅಂತಃಪುರದಲ್ಲಿ ಕೆಲಸ ಮಾಡುವವರ ಸಂಬಂಧಿಕರೆಂದು ಹೇಳಿಕೊಂಡು ಅಥವಾ ಕಣಿ ಹೇಳುವುವವರು, ಹಚ್ಚೆ ಹಾಕುವವರು ಎಂದು ಹೇಳಿ ಒಳಗೆ ಪ್ರವೇಶಿಸುವುದು, ನಿರ್ಬಂಧವಿದ್ದಾಗ ರೋಗ ಹುಚ್ಚಾಟ ಮನೆಗೆ ಬೆಂಕಿ ಹಚ್ಚಿ ಜನರನ್ನು ದಿಗ್ಭ್ರಾಂತರನ್ನಾಗಿ ಮಾಡಿ ಇಲ್ಲಿಂದ ನುಸುಳಿ ಹೊರಬಂದು ಸಮಾಚಾರ ತಿಳಿಸುವುದು. ಗೂಢಾಚಾರಿ ತಂದಿರುವ ಮಾಹಿತಿ ಸತ್ಯವೋ? ಸುಳ್ಳೋ? ಎಂದು ತಿಳಿಯಲು ಮೇಲ್ವಿಚಾರಣೆಗೆ ಮೂರು ಜನರನ್ನು ನೇಮಿಸುತ್ತಿದ್ದರು.ಆ ಮೂವರ ಉತ್ತರ ಒಂದೇ ಆಗಿದ್ದರೆ ಸತ್ಯವೆಂದು ಭಿನ್ನವಾಗಿದ್ದರೆ ಸುಳ್ಳೆಂದು ನಂಬಿ ಸುಳ್ಳು ಹೇಳಿದ ಗುಪ್ತಚರರನ್ನು ರಹಸ್ಯವಾಗಿಯೇ ಕೊಲ್ಲಿಸಲಾಗುತ್ತಿತ್ತು.

ಗುಪ್ತಚರರಾಗಿ ಕಾರ್ಯನಿರ್ವಹಿಸುತ್ತಿದ್ದ ಕರ್‌ಕರ್ ಮುಂಡರು ರಾಜನ ಕಡೆಯಿಂದ ಮತ್ತು ವಿರೋಧಿ ರಾಜ್ಯದಕಡೆಯಿಂದ ಹಾಗೂ ಕ್ರೂರ ಪ್ರಾಣಿಗಳಿಂದ ನೀರಿನ ಮೇಲಿನ ಗುಳ್ಳೆಯಂತೆ ಜೀವನ ನಡೆಸಬೇಕಾಗಿತ್ತು. ಗುಪ್ತಚರರ ಕುರಿತಾಗಿ ಎಲ್ಲಿಯೂ ಬಹಿರಂಗ ಪಡಿಸದ ಹಿನ್ನೆಲೆಯಲ್ಲಿ ಈ ಸಮುದಾಯವು ಚರಿತ್ರೆಯ ಪುಟಗಳಲ್ಲಿ ಅಸ್ತಂಗತವಾಗಿ ಉಳಿದಿರುವ ಸಾಧ್ಯತೆಗಳಿವೆ.ಆದರೆ ಕೇವಲ ನಾಗಪ್ಪ, ನರಸಪ್ಪನಂತಹ ಮೌಖಿಕ ಐತಿಹ್ಯಗಳಿಂದ ಮಾತ್ರ ಇವರ ಇತಿಹಾಸ ತಿಳಿಯಬಹುದಾಗಿದೆ.

**ಮೊಂಡರ ಉಪಪಂಗಡಗಳು**

ಮೊಂಡರ ಕುರಿತಾಗಿ ಹೆಚ್.ವಿ.ನಂಜುಂಡಯ್ಯ ಮತ್ತು ಅನಂತಕೃಷ್ಣ ಅಯ್ಯರ್ ನಡೆಸಿದ ಕುಲಶಾಸ್ತ್ರೀಯ ಅಧ್ಯಯನದಲ್ಲಿ ಮೊಂಡರಲ್ಲಿ ಈ ಕೆಳಗಿನಂತೆ ವಿಂಗಡಿಸಿದ್ದಾರೆ.

೧. **"ಊರ ಮೊಂಡರು :** ಹಳ್ಳಿ ಅಥವಾ ಊರುಗಳಲ್ಲಿ ವಾಸಮಾಡುತ್ತಾ ನಾಡಿನ ಜನರೊಂದಿಗೆ ಬೆರೆತು ಮೊಂಡರಿಗಿಂತ ಮುಂದುವರೆದವರಾಗಿದ್ದಾರೆ.

೨. **ಬಂಡ ಅಥವಾ ಕಾಕುಲ ಮೊಂಡರು :** ಅಲೆಮಾರಿಗಳಾಗಿ ಬೇಡಿ ತಿನ್ನುವವರಾಗಿದ್ದು, ಇವರು ಕಾಗೆ (ಕಾಕುಲು) ಬೇಟೆಯಾಡಿ ತಿನ್ನುತ್ತಿದ್ದರಿಂದ ಇವರಿಗೆ ಕಾಕುಲ ಮೊಂಡರು ಎಂದು ಕರೆಯಲಾಗುತ್ತಿತ್ತು.

೩. **ಸಿಕಂಡಿ ಮೊಂಡರು :** ಉಭಯ ಲಿಂಗಗಳ ಸ್ವಭಾವದಂತೆ ಭಿಕ್ಷಾಟನೆ ಮಾಡುವ ಇವರು ಬೀದಿಗಳಲ್ಲಿ ಮುಖಕ್ಕೆ ಬಣ್ಣ ಅಥವಾ ಮಣ್ಣು ಮೆತ್ತಿಕೊಂಡು ಮಲಗಿ ಭಿಕ್ಷೆ ಬೇಡುತ್ತಾರೆ. ಹುಡುಗಿಯ ವೇಷಧರಿಸಿಕೊಂಡು ಸಿಕಂಡಿಗಳಂತೆ ವರ್ತಿಸುವುದರಿಂದ ಈ ಹೆಸರು ಬಂದಿದೆ.

೧. **ಕಸ್ತೂರಿ ಮೊಂಡರು :** ಮೈಮೇಲೆ ಹಿಕ್ಕೆ, ಮಲ, ಹಚ್ಚಿಕೊಂಡು ಅಥವಾ ಬುರುಡೆಯಲ್ಲಿ ಹಾಕಿ ಕೈಯಲ್ಲಿ ಇಟ್ಟುಕೊಂಡು ಸಮಯ ಬಂದಾಗ ಬಳಸಿ ಭಿಕ್ಷೆ ಬೇಡುವ ಪ್ರವೃತ್ತಿಯಿಂದ ಈ ಹೆಸರು ಬಂದಿದೆ ಎಂದು ಹೇಳುತ್ತಾರೆ". (ನಂಜುಂಡಯ್ಯ ಹೆಚ್.ವಿ:೧೯೧೧:೨)

ಕ್ಷೇತ್ರಕಾರ್ಯ ಸಂದರ್ಭದಲ್ಲಿ ಸಮುದಾಯದ ತಿಳುವಳಿಕೆದಾರರು ಈ ವಾದವನ್ನು ತಳ್ಳಿಹಾಕುತ್ತಾರೆ. ಊರ ಮೊಂಡರು, ಬಂಡ ಅಥವಾ ಕಾಕುಲ ಮೊಂಡರಿಗೆ ಸೇರದವರು ಸಿಕಂಡಿ ಮೊಂಡರು ಇವರು.ಸಿಕಂಡಿ ಎಂಬ ಪದವನ್ನು ತಪ್ಪಾಗಿ ಅರ್ಥೈಸಲಾಗಿದೆ. ಸಿಕಂಡಿಗಳಂತೆ ಬೇಡಿ ತಿನ್ನುವವರಲ್ಲ. ಬದಲಾಗಿ ಎರಡು ಒಳಪಂಗಡಗಳಿಗೆ ಸೇರದೆ ಅತಂತ್ರವಾಗಿದ್ದವರು ಎನ್ನುತ್ತಾರೆ. ಜೊತೆಗೆ ಕಸ್ತೂರಿ ಮೊಂಡರು ಸುಗಂಧ ಧ್ರವ್ಯಗಳನ್ನು ಮಾರಾಟಮಾಡಿ ಜೀವನ ನಡೆಸುತ್ತಿದ್ದವರಿಗೆ ಕಸ್ತೂರಿ ಮೊಂಡರು ಎಂದು ಕರೆಯಲಾಗುತ್ತಿತ್ತು. ಇವರಲ್ಲಿ ಊರು ಮೊಂಡರು ಎಂಬುವವರು ಕರ್‌ಕರ್ ಮೊಂಡರೆಂದು ಕರೆಯಲ್ಪಡುತ್ತಾರೆ ಎಂದು ತರ್ಕಿಸುತ್ತಾರೆ.

ಒಟ್ಟಾರೆಯಾಗಿ ಮೊಂಡರು ಬೇಡ ಸಮುದಾಯದ ಮಂದ್ಲರು ಬೆಡಗಿನಿಂದ ಸೃಷ್ಟಿಯಾಗಿ ಬೇಡರಿಂದಕಿತ್ತೂರು, ಸುರಪುರ, ಅರಸರ ಅಂತ್ಯದ ಕಾಲದಲ್ಲಿ ರಜಾಕಾರರ ಹಾವಳಿಯಿಂದ ಧರ್ಮದ ಶುದ್ಧತೆಯನ್ನು ಉಳಿಸಿಕೊಳ್ಳಲು, ಹಂದಿ ಸಾಕಾಣಿಕೆ ಮತ್ತು ಸೇವನೆಯನ್ನು ಜೀವನ ವಿಧಾನದಲ್ಲಿ ಬಳಸಿ ಕುಲಶುದ್ಧತೆ ಕಳೆದುಕೊಂಡು, ಬೇಡರಿಂದ ವಿಘಟನೆ ಹೊಂದಿರುವ ಸಾಧ್ಯತೆಗಳಿವೆ. ಕೋಳಿ ಸೇವನೆಯಿಂದಾಗಿ ಮ್ಯಾಸಬೇಡ ಊರಬೇಡರ ಜೊತೆಗೆ ವಿಘಟನೆ ಹೊಂದಿ ಕುಲನಿಷೇಧ ಹೊಂದಿದ್ದಾರೆ. ಮೊಂಡರಲ್ಲಿ ನಾಲ್ಕು ಒಳಪಂಗಡಗಳಿದ್ದು, ಅದರಲ್ಲಿ ಕರ್‌ಕರ್ ಮುಂಡರು ಒಂದು

ಒಳಪಂಗಡವರಾಗಿದ್ದಾರೆ. ಹಿಂದೆ ಗುಪ್ತಚರರಾಗಿ ಕಾರ್ಯನಿರ್ವಹಿಸಿ ಎಲ್ಲಿಯೂ ಬಹಿರಂಗಗೊಳ್ಳದೇ ಅವಜ್ಞೆಗೆ ಒಳಗಾಗಿದ್ದಾರೆ. ರಾಜನಿಗಾಗಿ ತೊಟ್ಟ ಮಾರುವೇಷವನ್ನು ಇಂದು ಜಾತ್ರೆ, ಹಬ್ಬ, ಉತ್ಸವಗಳಲ್ಲಿ ಬೇಡಿ ತಿನ್ನುವ ಕಾಯಕಕ್ಕೆ ಬಳಸುತ್ತಿದ್ದಾರೆ. ಕರ್ನಾಟಕದ ಕರಾವಳಿ ಮತ್ತು ಮಲೆನಾಡುಪ್ರದೇಶವನ್ನು ಹೊರತುಪಡಿಸಿ ಎಲ್ಲಾ ಜಿಲ್ಲೆಗಳಲ್ಲಿ ಹಂಚಿಕೆಯಾಗಿದ್ದಾರೆ.

ಕರ್‌ಕರ್‌ಮುಂಡರ ವಸ್ತ್ರ (ಭಿಕ್ಷಾವೇಷ) ಹಾಕಿದ ಮಕರಗ್ಯಾಲೋ ಅಘೋರಿ ಎಂದು ಅರ್ಥೈಯಿಸಿರುವ ತಪ್ಪು ತಿಳುವಳಿಕೆಗಳು ಕರ್ನಾಟಕ ರಾಜ್ಯದ ಓಬಿಸಿ ಪಟ್ಟಿಯ ೨ಎನಲ್ಲಿ ೧೨.ಎ ಅಘೋರಿ ಬಿ.ಕರ್‌ಕರ್ ಮುಂಡಾ ಎಂದು ಸೇರಿಸಲಾಗಿದೆ. ಅನಂತಕೃಷ್ಣಅಯ್ಯರ್ ಮತ್ತು ಹೆಚ್.ವಿ.ನಂಜುಂಡಯ್ಯನವರು ಸಹ ತಪ್ಪಾಗಿ ಅರ್ಥೈಸಲಾಗಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಮೊಂಡರು ಎಂಬುದು ಬೇಡ ಸಮುದಾಯದ ಮುಂದಲ ಎಂಬ ಬೆಡಗಿನಿಂದ ಕವಲೊಡೆದ ಸಮುದಾಯವಾಗಿದ್ದು, ಜನಗಣತಿಯಲ್ಲಿ ತಪ್ಪಾಗಿ ಜೋಗಿ ಸಮುದಾಯದ ಅಡಿಯಲ್ಲಿ ಗುರುತಿಸಲಾಗಿದೆ ಎಂದು ತಿಳಿಸಿದ್ದಾರೆ.

ಕೆ.ಎಸ್. ಸಿಂಗ್ ಇವರು ಕೂಡ ಅಘೋರಿ ಪಂಥದ ಅಡಿಯಲ್ಲಿ ಗುರುತಿಸಿದ್ದಾರೆ ಎಂದು ತಿಳಿಸಿದ್ದಾರೆ. ಆದರೆ ಕರ್‌ಕರ್ ಮುಂಡರ ಜೀವನ ವಿಧಾನ, ಭಾಷೆ, ವೃತ್ತಿ, ನೆಲೆ, ಸಂಸ್ಕೃತಿಗಳು ಅಘೋರಿಗಳೊಂದಿಗೆ ಸಾಮ್ಯತೆ ಹೊಂದುವುದಿಲ್ಲ. ಕರ್‌ಕರ್ ಮುಂಡರ ಎಲ್ಲಾ ಬೆಡಗುಗಳು, ಸಂಪ್ರದಾಯಗಳು ಪಶುಪಾಲಕರನ್ನು ಹೋಲುತ್ತವೆ. ಆದ್ದರಿಂದ ಇವರನ್ನು ಜೋಗಿ, ಅಘೋರಿ ಎಂದು ದಾಖಲಿಸಿರುವುದು ತಪ್ಪಾಗಿ ಕಂಡುಬರುತ್ತದೆ. ಬುಡಕಟ್ಟು ಸಮುದಾಯದ ಒಳಪಂಗಡವಾಗಿದ್ದು, ಬುಡಕಟ್ಟು ಸ್ಥಾನಮಾನ ಪಡೆಯದೆ ಅವಜ್ಞೆಗೆ ಒಳಗಾಗಿ ಸಮುದಾಯವು ಪ್ರಾದೇಶಿಕವಾಗಿ ಪರ್ಯಾಯ ಹೆಸರುಗಳಿಂದ ಛಿದ್ರವಾಗಿ ಅಲ್ಪಸಂಖ್ಯಾತವಾಗಿದೆ. ಈ ಮೂಲಕವಾಗಿ ತನ್ನ ಚಹರೆಯನ್ನು ಕಂಡುಕೊಂಡು ಸಂವಿಧಾನಬದ್ಧವಾದ ಹಕ್ಕು ಸೌಲಭ್ಯಗಳು ಪಡೆಯಬೇಕಾಗಿದೆ. ಅಂತಹ ಕೆಲಸವೂ ಜರೂರತ್ತಾಗಿ ಆಗಬೇಕಿದೆ.

## ಅಧ್ಯಾಯ ಮೂರು

## ಕರ್‌ಕರ್ ಮುಂಡರ ಸಾಮಾಜಿಕ ಬದುಕು

ಮಾನವ ಅಲೆಮಾರಿಯಾಗಿ ಆಹಾರ ಹುಡುಕುತ್ತಾ ಜೀವನ ಸಾಗಿಸುತ್ತಿದ್ದ ಹಂತದಲ್ಲಿ ಅವನ ಜೀವನಕ್ರಮಕ್ಕೆ ಯಾವುದೇ ನಿಯಮಗಳು ಇರಲಿಲ್ಲ. ಬೌದ್ಧಿಕ ಮಾನವ ಬೆಂಕಿ ಉಪಯೋಗ ಕಂಡುಕೊಂಡು ಬೇಟೆಯಾಡಿದ ಮಾಂಸವನ್ನು ಬೇಯಿಸಿ ತಿನ್ನುವುದನ್ನು ಕಲಿತ. ಬೇಟೆಯಲ್ಲಿ ದೊರಕಿದ ಸೌಮ್ಯ ಪ್ರಾಣಿಗಳನ್ನು ಪಳಗಿಸಿ ಕೃಷಿಗೆ ಬಳಸಿಕೊಂಡನು. ಒಂಟಿಯಾಗಿದ್ದ ಮಾನವ ಸಣ್ಣ ಸಣ್ಣ ಗುಂಪುಗಳನ್ನು ಕಟ್ಟಿಕೊಂಡು ಜೀವಿಸತೊಡಗಿದನು. ಈ ಗುಂಪುಗಳು ಒಬ್ಬ ನಾಯಕನ ಮುಖಂಡತ್ವದಲ್ಲಿ ಮತ್ತು ಅವನ ನಿರ್ದೇಶನದಲ್ಲಿ ಮುಂದುವರೆಯುತ್ತಾ ಬಂದವು. ಈ ನಿರ್ದೇಶನಗಳು ಸಮುದಾಯದ ವಿಧಿ–ವಿಧಾನ, ಆಚರಣೆ, ನಂಬಿಕೆ ನಿಷೇಧಗಳಾಗಿ ಒಂದು ಸಮುದಾಯದ ಚೌಕಟ್ಟಿನೊಳಗೆ ಸೇರಲ್ಪಟ್ಟವು. ಮುಂದೆ ಸಾಮಾಜಿಕವಾಗಿ ವಿಸ್ತೃತವಾದಾಗ ಮನುಷ್ಯ ಸಮಾಜದ ಈ ನಿಬಂಧನೆಗಳ ಅಧೀನದಲ್ಲಿ ಜೀವನ ಮಾಡಬೇಕಾಯಿತು. ಇದನ್ನೇ ನಾವು ಸಾಮಾಜಿಕ ವ್ಯವಸ್ಥೆ ಎಂದು ಹೇಳುಬಹುದು. ಸಮಾಜದ ಉಳುವಿಗೆ ಮತ್ತು ಮುಂದುವರಿಕೆಗೆ ರೂಪಿಸಲ್ಪಟ್ಟ ವಿಧಿ–ವಿಧಾನಗಳಗಳ ಚೌಕಟ್ಟು ಇದಾಗಿದ್ದು, ಅಲೆಮಾರಿಯಾಗಿದ್ದ ಮಾನವನ ಬದುಕಿಗೂ, ಸಾಮಾಜಿಕ ಬದುಕಿಗೂ, ವ್ಯತ್ಯಾಸವಿದೆ. ಅಲೆಮಾರಿ ಮಾನವನಿಗೆ ಸ್ವತಂತ್ರವಿದ್ದು, ಯಾವುದೇ ನಿಬಂಧನೆಗಳು ಇರಲಿಲ್ಲ. ಆದರೆ ಮನುಷ್ಯ ತಾನು ಸಾಮಾಜಿಕ ಜೀವಿಯಾಗಿ ಬಾಳಬೇಕೆಂದರೆ ಸಮಾಜದ ವಿಧಿನಿಷೇಧಗಳನ್ನು ಕ್ರಮಬದ್ಧವಾಗಿ ಪಾಲಿಸಬೇಕು. ಹೀಗೆ ಪುರಾತನದಿಂದ ಸಾಗಿಬಂದ ವಿಧಿ ವಿಧಾನಗಳು ಸಮುದಾಯಗಳಿಂದ ಸಮುದಾಯಕ್ಕೆ ಭಿನ್ನವಾಗಿರುತ್ತವೆ. ಇಂತಹ ಸಾಮಾಜಿಕ ವ್ಯವಸ್ಥೆಯಲ್ಲಿ ಸಮುದಾಯವು ತನ್ನದೆ ಆದ ಆಹಾರ ಕ್ರಮ, ಕೌಟುಂಬಿಕ ವ್ಯವಸ್ಥೆ, ಬಂಧುತ್ವ, ವೃತ್ತಿ, ನ್ಯಾಯ ಪಂಚಾಯ್ತಿ, ದೈವಗಳು, ಸಾಹಿತ್ಯ ಎಲ್ಲವನ್ನು ಒಳಗೊಂಡಿರುವುದು. ಈ ಸಾಮಾಜಿಕ ವ್ಯವಸ್ಥೆಯೊಳಗಿನ ಕ್ರಮಗಳು

ಸಮುದಾಯದ ಸನಾತನವು ಆಗಿರಬಹುದು ಮತ್ತೆ ಕೆಲವು ಇತರರಿಂದ ಅನುಕರಿಸಲ್ಪಟ್ಟ ಮತ್ತು ಹೇರಲ್ಪಟ್ಟವುಗಳು ಆಗಿರುವ ಸಾಧ್ಯತೆಗಳಿವೆ.

ಭಾರತದ ಪ್ರತಿ ಸಮುದಾಯವು ತನ್ನ ಅನನ್ಯತೆಯನ್ನು ಉಳಿಸಿಕೊಳ್ಳಲು ಕಟ್ಟುನಿಟ್ಟಾದ ನಿಯಮಗಳನ್ನು ಪಾಲಿಸುತ್ತಲೇ ಬಂದಿದೆ. ಸಮುದಾಯವೊಂದರ ಅನನ್ಯತೆ ಉಳಿದಿದೆ ಎಂದು ತಿಳಿಯಲು ಇವರ ಸಾಮಾಜಿಕ ಬದುಕಿನ ವ್ಯವಸ್ಥೆ ಮತ್ತು ಕ್ರಮಗಳು ಸಹಕಾರಿಯಾಗುತ್ತವೆ. ಇದೇ ಕಾರಣಕ್ಕೆ ಒಂದು ಸಮುದಾಯ ತನ್ನ ಅನನ್ಯತೆಯನ್ನು ಜೀವಂತವಾಗಿಟ್ಟುಕೊಳ್ಳಲು ಬದುಕಿನ ಕ್ರಮಗಳನ್ನು ಆತ್ಮದಂತೆ ಪೋಷಿಸಿಕೊಂಡು ಬಂದಿರುತ್ತದೆ. ಅದರಲ್ಲಿಯೂ ಆದಿವಾಸಿ, ಅಲೆಮಾರಿ, ದುಡಿಯುವ ವರ್ಗಗಳು ತನ್ನ ಬದುಕಿನ ಸುಪ್ತ ಕ್ರಮಗಳನ್ನು ಯಾವತ್ತಿಗೂ ಇತರರ ಬಲತ್ಕಾರದ ಸ್ವಾಂಗೀಕರಣಕ್ಕೆ ಅಸ್ಪದ ನೀಡುವುದಿಲ್ಲ. ಆದಿಮ ಚಹರೆಗಳನ್ನು ಅಜ್ಞಾತವಾಗದಂತೆ ಉಳಿಸಿಕೊಂಡು ಮುಂದುವರೆಸುತ್ತವೆ. ಜೊತೆಗೆ ಈ ಸಮುದಾಯಗಳಲ್ಲಿ ಬದಲಾವಣೆ ಸಂಭವಿಸಿಲ್ಲ ಎಂದು ಹೇಳಲಾಗದು. ಭಾರತೀಯ ಸಮುದಾಯಗಳು ಯಾವಾಗಲೂ ತನ್ನ ಸಂಸ್ಕೃತಿಕೋಶದ ಒಳಗೆ ಹೊಸದನ್ನು ಸ್ವೀಕರಿಸುವ ಮತ್ತು ಹಳೆಯದನ್ನು ನಿರಾಕರಿಸುವ ಜಾಗೃತಿಯನ್ನು ಸದಾ ಹೊಂದಿರುತ್ತವೆ. ಭಾರತದ ಸಮುದಾಯಗಳ ಮೇಲೆ ಪಾಶ್ಚಿಮಾತ್ಯರ ಪ್ರಭಾವ, ಉದಾರೀಕರಣ, ಕೈಗಾರೀಕರಣ, ನಗರೀಕರಣ, ಜಾಗತೀಕರಣದಂತಹ ವಿದ್ಯಮಾನಗಳು ಪ್ರಭಾವ ಬೀರುತ್ತಲೇ ಬಂದಿವೆ. ಜೊತೆಗೆ ಸಾಮ್ರಾಜ್ಯಗಳನ್ನು ಕಟ್ಟಿಕೊಂಡು ತಮ್ಮ ಜೀವನ ವಿಧಾನಗಳನ್ನು ಕನಿಷ್ಟರ ಮೇಲೆ ದರ್ಪಿಷ್ಟವಾಗಿ ಪ್ರಯೋಗಿಸುವ ಸಂದರ್ಭಗಳು ಸಾಮಾಜಿಕ ಜೀವನದಲ್ಲಿ ಬದಲಾವಣೆ ತಂದಿವೆ.

ಬುಡಕಟ್ಟುಗಳು ಇತರರ ಸಂಸ್ಕೃತಿಯಲ್ಲಿ ಲೀನವಾಗುವುದಿಲ್ಲ ಬದಲಿಗೆ ಕಟ್ಟುನಿಟ್ಟಿನ ವಿಧಿವಿಧಾನಗಳಿಂದ ಕೂಡಿರುತ್ತವೆ ಎಂದು ಹೇಳುವುದುಂಟು. ಶೈವೀಕರಣ, ಆರ್ಯೀಕರಣ ಹಾಗೂ ಮತಾಂತರ ಪ್ರಕ್ರಿಯೆ ಜೊತೆಗೆ ಆಧುನಿಕ ವಿಶ್ವಗ್ರಾಮ ಪರಿಕಲ್ಪನೆಗಳು ಬುಡಕಟ್ಟುಗಳಲ್ಲಿ ಬದಲಾವಣೆ ತಂದಿವೆ, ತರುತ್ತಲಿವೆ. ಇದರಿಂದ ಪ್ರತಿ ಚದುರ ಕಿ.ಲೋ.ಮೀಟರ್‌ನಲ್ಲಿ ಸಂಸ್ಕೃತಿಯ ವೈವಿಧ್ಯತೆಯನ್ನು ಕಾಣಬಹುದು. ಅಲೆಮಾರಿ ಬದುಕಿನ ಪರಿಣಾಮವಾಗಿ ಕರ್‌ಕರ್‌ಮುಂಡ ಸಮುದಾಯವುವೈವಿಧ್ಯಮಯ ಸಂಸ್ಕೃತಿಯ ಹೊಂದಿದ್ದು ಸ್ಥಿತ್ಯಂತರಕ್ಕೆ ಒಳಗಾಗಿದೆ. ಅದರನ್ವಯ ಈ ಸಮುದಾಯದಲ್ಲಿನ ಸ್ವೀಕರಿಸುವ ಮತ್ತು ನಿರಾಕರಿಸಿದ ಸಾಂಸ್ಕೃತಿಕ ಅಂಶಗಳನ್ನು ತಿಳಿಯುವುದು ಅಗತ್ಯವಾಗಿದೆ.

**ಕೌಟುಂಬಿಕ ವ್ಯವಸ್ಥೆ**

ಕುಟುಂಬವು ಒಂದು ಪುರಾತನ ಸಾಮಾಜಿಕ ಸಂಸ್ಥೆಯಾಗಿದ್ದು, ಇದು ಮಾನವನ ಸಾಮಾಜೀಕರಣಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಮನೆಯ ಮೊದಲ ಪಾಠಶಾಲೆ ತಾಯಿಯೇ ಮೊದಲ ಗುರು ಎಂದು ಶಿಕ್ಷಣತಜ್ಞರು ಹೇಳುವರು. ಇದರ ಅರ್ಥ ಸಮಾಜದ ಜೀವಿಯಾಗುವ ಮಗುವಿಗೆ ವ್ಯಕ್ತಿತ್ವ, ನಡವಳಕೆ, ನೈತಿಕ ನಿಯಮ, ಸಮಾಜದ ಹಕ್ಕು ಮತ್ತು ಕರ್ತವ್ಯಗಳನ್ನು ನಿರ್ದೇಶಿಸುವ ನೆಲೆಯಾಗಿರುತ್ತದೆ. ಭಾರತ ಸಮಾಜದ ಆಧಾರಸ್ತಂಭಗಳಲ್ಲಿ ಅವಿಭಕ್ತ ಕುಟುಂಬ ವ್ಯವಸ್ಥೆಯು ಒಂದಾಗಿದೆ. ಆದರೆ ಇಂದು ಅನೇಕ ಆಧುನಿಕ ವಿದ್ಯಮಾನಗಳು ವಿಭಕ್ತ ಕುಟುಂಬಗಳಿಗೆ ಕಾರಣವಾಗಿವೆ. ಮಾನವನನ್ನು ಸಾಮಾಜಿಕ ಜೀವಿಯಾಗುವಂತೆ ಮಾಡಲು ಕುಟುಂಬ ಕೆಲವೊಂದು ಕಾರ್ಯಗಳನ್ನುಮಾಡುತ್ತಲೇ ಬಂದಿದೆ. ಇಂತಹ ಕುಟುಂಬ ವ್ಯವಸ್ಥೆಯು ಕರ್‌ಕರ್‌ಮುಂಡ ಸಮುದಾಯದಲ್ಲಿ ಹೇಗೆ ಕಾರ್ಯಗತವಾಗಿದೆ ಎಂದು ತಿಳಿಯಬೇಕಾಗಿದೆ.

ಆದಿಮಾನವ ಅಲೆಮಾರಿಯಾಗಿ ಆಹಾರ ಸಂಗ್ರಹಣೆ ಮಾಡುತ್ತಿದ್ದನು. ಸರಳ ಸಮಾಜ ಗತಿಸಿದಂತೆ ಸಂಕೀರ್ಣವಾಯಿತು. ಈ ಸಂಕೀರ್ಣತೆಯ ಕಾಲದಲ್ಲಿ ಮಾನವನು ನಾಗಾಲೋಟದಲ್ಲಿ ವಿಕಾಸಹೊಂದುತ್ತಿರುವನು. ಆದರೆ ಈ ವೇಗವು ಊರ್ಧ್ವಮುಖ ಚಲನೆಯನ್ನು ಹೊರತುಪಡಿಸಿಲ್ಲ. ಇದಕ್ಕೆ ನಿದರ್ಶನ ಅಂದು ಅಲೆಮಾರಿ ಮಾನವ ಇಂದು ಸಮಾಜ ಜೀವಿಯಾಗಿದ್ದರೂ ಸಹ ಅಲೆಮಾರಿತನದ ಮೂಲಕ ಜೀವನ ಸಾಗಿಸುತ್ತಿರುವ ಅಲೆಮಾರಿ ಸಮುದಾಯಗಳೇ ಸಾಕ್ಷಿಯಾಗಿವೆ. ಇದು ಆಧುನಿಕ ಸಾಮಾಜದ ಅಸಮಾನತೆಯನ್ನು ತೋರಿಸುತ್ತದೆ.

ಅಲೆಮಾರಿಗಳಾಗಿರುವ ಕರ್‌ಕರ್ ಮುಂಡರಲ್ಲಿ ಪಿತೃಪ್ರಧಾನ ಕೌಟುಂಬಿಕ ವ್ಯವಸ್ಥೆಯಿದೆ.ಹಿಂದೆ ಇವರಲ್ಲಿ ಬಹುಪಾಲು ಅವಿಭಕ್ತ ಕುಟುಂಬಗಳು ಕಂಡು ಬರುತ್ತಿದ್ದವು. ಇಂದು ವಿಭಕ್ತ ಕುಟುಂಬಗಳಾಗಿವಿಘಟನೆಯಾಗುತ್ತಿರುವುದು ಅಧಿಕವಾಗಿದೆ. ಇವರಲ್ಲಿ ತಂದೆಯೇ ಕುಟುಂಬದ ಮುಖ್ಯಸ್ಥನಾಗಿರುವನು, ತಂದೆ ಇಲ್ಲದಿದ್ದಾಗ ಹಿರಿಯಮಗನಿಗೆ ಅಧಿಕಾರ ಹಸ್ತಾಂತರವಾಗುವುದು. ಬಹುಪತ್ನಿತ್ವ ಹೊಂದಿದಂತಹ ಕುಟುಂಬಗಳಲ್ಲಿ ಓರಿಯ ಮಗ ಅಥವಾ ಕುಟುಂಬ ನಿರ್ವಹಣೆಯಲ್ಲಿ ದಕ್ಷತೆ ಇರುವವನು ಕುಟುಂಬದ ಮುಖ್ಯಸ್ಥನಾಗುವನು. ಇವನು ಕುಟುಂಬದ ಇಡೀ ಜವಾಬ್ದಾರಿ ಹೊರುವುದರ ಜೊತೆಗೆ ಸಮುದಾಯದ ವಿಶೇಷ ಕಾರ್ಯಗಳಲ್ಲಿ ಗೌರವ ಮನ್ನಣೆ ಪಡೆಯುವನು.

ಭಾರತೀಯ ಸಮಾಜ ಪುರುಷ ಪ್ರಧಾನ ವ್ಯವಸ್ಥೆಯನ್ನು ಹೊಂದಿರುವಂತೆ ಕರ್‌ಕರ್ ಮುಂಡರಲ್ಲಿಯು ಪುರುಷನೇ ಅಗ್ರಗಣ್ಯಸ್ಥಾನ ಹೊಂದಿರುವನು. ಸ್ತ್ರೀಯು

ಪುರುಷನ ಅಧೀನವಾಗಿಯೇ ಇರುವವಳು. ವೈದಿಕ ಸಂಸ್ಕೃತಿಯಲ್ಲಿ ಸ್ತ್ರೀಯು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ, ಬಾಲ್ಯದಲ್ಲಿ ತಂದೆಯ ಅಧೀನದಲ್ಲಿ, ಹರೆಯದಲ್ಲಿ ಗಂಡನ ಮತ್ತು ವೃದ್ಧಾಪ್ಯದಲ್ಲಿ ಮಗನ ಅಧೀನವಾಗಿರಬೇಕೆಂದು ಎಂದು ಹೇಳುತ್ತದೆ. ಅದೇ ಸಂಸ್ಕೃತಿ ಎಲ್ಲಿ ಸ್ತ್ರೀಯರನ್ನು ಗೌರವಿಸಲಾಗುತ್ತದೋ ಅಲ್ಲಿ ದೇವತೆಗಳು ನೆಲೆಸಿರುತ್ತಾರೆ ಎಂದು ಹೇಳಿ ಸ್ತ್ರೀಯನ್ನು ಸಂತೈಯಿಸಲು ಪ್ರಯತ್ನಿಸುತ್ತದೆ. ಆದರೆ ಪ್ರತಿ ಪುರುಷನ ಯಶಸ್ಸಿನ ಹಿಂದೆ ಸ್ತ್ರೀ ಇರುತ್ತಾಳೆಂದು ಹೇಳಲಾಗುವ ಈ ವೈದಿಕ ಸಂಸ್ಕೃತಿಯು ಸ್ತ್ರೀಯ ಎಲೆಮರಿಯ ಪಾತ್ರ ಮತ್ತು ಜವಾಬ್ದಾರಿಗಳನ್ನು ತೋರಿಸುತ್ತದೆ. ಸ್ತ್ರೀವಾದಿ ಚಿಂತನೆಗಳು ಲಿಂಗ ತಾರತಮ್ಯದ ವಿರುದ್ಧ ಎಷ್ಟೇ ಹೋರಾಟಗಳನ್ನು ನಡೆಸಿದರೂ, ಸ್ತ್ರೀಯರನ್ನು ದ್ವಿತೀಯ ದರ್ಜೆಯ ಸದಸ್ಯೆ ಎಂದು ಹೇಳುವುದು ಮತ್ತು ನೋಡುವುದು ಇಲ್ಲವಾಗುವುದಿಲ್ಲ. ಇಂದಿಗೂ ಆ ವ್ಯವಸ್ಥೆ ಜೀವಂತವಾಗಿರುವುದನ್ನು ಕಾಣಬಹುದಾಗಿದೆ. ಇದೇ ರೀತಿಯಲ್ಲಿ ಸ್ತ್ರೀಯರ ಸ್ಥಾನಮಾನ ಈ ಸಮುದಾಯದಲ್ಲಿ ಕಂಡುಬರುತ್ತದೆ. ಸ್ತ್ರೀಗೆ ಕುಟುಂಬದಲ್ಲಿ ನಿರ್ಧಾರ ತೆಗೆದುಕೊಳ್ಳುವ, ತನ್ನ ಜೀವನ ಸಂಗಾತಿಯ ಆಯ್ಕೆಯ ಮಾಡಿಕೊಳ್ಳುವ ಸ್ವಾತಂತ್ರ್ಯವಿಲ್ಲ. ಒಂದು ವೇಳೆ ಕುಟುಂಬದ ನಿರ್ಧಾರಗಳನ್ನು ಗಾಳಿಗೆ ತೂರಿ ಮೋಹಿತರಾಗಿ ಅಂತರ್‌ಜಾತಿಯ ವಿವಾಹವಾದರೆ ಕುಲದಿಂದ ಬಹಿಷ್ಕರಿಸುವುದಕ್ಕೆ 'ಕುಲಂಪಂಚಾಯ್ತಿ' ಅಸ್ತಿತ್ವದಲ್ಲಿದೆ. ಒಂದು ವೇಳೆ ಗಂಡು ಈ ತರಹದ ತಪ್ಪುಗಳನ್ನು ಎಸಗಿದರೆ ಸಮುದಾಯದ ಮುಖಂಡರ ನೇತೃತ್ವದಲ್ಲಿ ಕುಲವನ್ನು ಶುದ್ಧೀಕರಿಸಿ ಅನ್ಯಜಾತಿಯ ಸ್ತ್ರೀಯನ್ನು ತಮ್ಮದೇ ಆದ ಕ್ರಿಯಾವಿಧಿಗಳ ಮೂಲಕ ಸ್ವೀಕಾರಗೊಳ್ಳಲಾಗುತ್ತದೆ. ಅಲ್ಲದೆ ಪುರುಷ ತಂದೆಯ ಒಡೆತನದ ಕುಟುಂಬದಿಂದ ವಿಘಟನೆಯಾಗಿ ಪ್ರತ್ಯೇಕ ಕುಟುಂಬದೊಂದಿಗೆ ಜೀವನ ಸಾಗಿಸುವನು.

ಆಧುನಿಕ ಸಮಾಜದಲ್ಲಿ ಹೆಚ್ಚಾಗಿ ವಿಭಕ್ತ ಕುಟುಂಬಗಳು ಕಂಡುಬರುತ್ತಿವೆ. ಅಲೆಮಾರಿಗಳಾಗಿರುವ ಕರ್‌ಕರ್ ಮುಂಡರಿಗೆ ಸ್ಥಿರ ಆಸ್ತಿಗಳಿಲ್ಲದೇ ಇಲ್ಲದಿರುವುದರಿಂದ ಮತ್ತು ಕೃಷಿ ಸಂಸ್ಕೃತಿಯನ್ನು ಮೈಗೂಡಿಸಿಕೊಳ್ಳದ ಕಾರಣದಿಂದಾಗಿ, ಕೃಷಿ ಭೂಮಿಯನ್ನು ಹೊಂದಿಲ್ಲದಿರುವುದನ್ನು ಕಾಣಬಹುದು. ಇದರಿಂದಾಗಿ ಪ್ರತಿದಿನ ದುಡಿದು ತಿನ್ನುವ ಕಾಯಕ ಅನಿವಾರ್ಯವಾಗಿದೆ. ಅಂದಿನ ದಿನ ಗಳಿಸಿದರೆ ಮಾತ್ರ ಊಟ ಸಿಗುವುದು ಇಲ್ಲದಿದ್ದರೆ ಉಪವಾಸದಿಂದ ಇರಬೇಕು. ಅದಕ್ಕಾಗಿ ಕುಟುಂಬದ ಸ್ತ್ರೀ-ಪುರುಷರಿಬ್ಬರೂ ಸಮಾನವಾಗಿ ದುಡಿಯುವರು. ಬಹುಶಃ ಇಂದು ಭಾರತೀಯ ಸಮಾಜದ ವಿಶಿಷ್ಟ ಲಕ್ಷಣ ಎಂದು ಹೇಳುತ್ತಿದ್ದ ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗಿ ಮಾರ್ಪಾಡಾಗಲು ಈ ಗಳಿಕೆಯ ಅಂಶವು ಕಾರಣವಾಗಿರಬಹುದು. ಜೊತೆಗೆ ಸರಳ ಸಮಾಜದ ಜನರ ಮನಸ್ಥಿತಿಗಳ ಬದಲಾಗಿ ಅವಿಭಕ್ತ ಕುಟುಂಬ ವ್ಯವಸ್ಥೆಯಲ್ಲಿನ

ಅಶಕ್ತರ, ಅನುತ್ಪಾದಕರ ಕುರಿತಾದ ಧೋರಣೆಗಳು ಸೃಷ್ಟಿಯಾಗಿರುವುದು ವಿಭಕ್ತ ಕುಟುಂಬಗಳು ಅಧಿಕವಾಗಲಿಕ್ಕೆ ಕಾರಣವಾಗಿರಬಹುದಾಗಿದೆ.

ಕರ್‌ಕರ್ ಮುಂಡ ಸಮುದಾಯವು ತಮ್ಮ ಗುರುಹಿರಿಯರಿಗೆ ವಿಶೇಷ ಗೌರವ ಸ್ಥಾನಮಾನ ನೀಡಿರುತ್ತಲೇ ಬಂದಿರುವುದನ್ನು ಕಾಣಬಹುದು. ಸಮಾಜವು ಉತ್ತಮ ನಡತೆಯಿಂದ ಮುಂದುವರೆಯಲು ನಿರ್ದೇಶನಗಳ ನೀಡುತ್ತಾ, ಕುಟುಂಬ ಮತ್ತು ಸಮಾಜದ ಚ್ಯುತಿಗೆ ಭಂಗ ಬರದಂತೆ ಈ ನಿರ್ದೇಶನಗಳು ಸಹಾಯಕವಾಗಿವೆ. ಆಕಸ್ಮಿಕವಾಗಿ ಅಥವಾ ಉದ್ದೇಶಪೂರ್ವಕವಾಗಿ ಸಮುದಾಯ ವಿರೋಧಿಯಾಗಿ ನಡೆದುಕೊಂಡರೆ ತಿದ್ದಿಕೊಳ್ಳಲು ಅವಕಾಶನೀಡುವರು. ತಿದ್ದಿಕೊಂಡು ಹೊಂದಾಣಿಕೆ ಮಾಡಿಕೊಳ್ಳಲು ಸಾಧ್ಯವಿಲ್ಲದಿದ್ದಾಗ ಸಮುದಾಯದಿಂದ ನಿಷೇಧ ಹೇರಲಾಗುವುದು.

ಕುಟುಂಬದಲ್ಲಿನ ತನ್ನ ಸದಸ್ಯರು ಹರೆಯಕ್ಕೆ ಬಂದಾಗ ಅಥವಾ ಬಾಲ್ಯದಲ್ಲಿ ನೀಡಿದ ಮಾತಿನಂತೆ ಗಂಡು-ಹೆಣ್ಣಿಗೆ ವಿವಾಹ ಮಾಡುವ ಜವಾಬ್ದಾರಿ ಹೊಂದಿದೆ. ಆ ಮೂಲಕ ಲೈಂಗಿಕ ತೃಪ್ತಿ ಮತ್ತು ಕುಲದ ವಾರಸುದಾರಿಕೆಯನ್ನು ಮುಂದುವರೆಸುವ ಕಾರ್ಯಗಳನ್ನು ಮಾಡುತ್ತದೆ. ಕರ್‌ಕರ್ ಮುಂಡರಲ್ಲಿ ಏಕಪತ್ನಿತ್ವ ವಿವಾಹ ಪದ್ಧತಿ ಹೆಚ್ಚಾಗಿ ಕಂಡುಬರುತ್ತಿದ್ದು, ಇದಕ್ಕೆ ಕುಟುಂಬದ ಮತ್ತು ಸಮಾಜದ ಮನ್ನಣೆ ಇದೆ. ಮೊದಲ ಹೆಂಡತಿಗೆ ಮಕ್ಕಳಾಗದಿದ್ದಲ್ಲಿ ಅಥವಾ ಗಂಡುಸಂತಾನವಿಲ್ಲದಿದ್ದಲ್ಲಿ ಮತ್ತೊಂದು ವಿವಾಹವಾಗಲು ಅವಕಾಶವಿದೆ. ಮತ್ತೆ ಕೆಲವು ಸಂದರ್ಭದಲ್ಲಿ ಕನ್ಯೆಯೊಬ್ಬಳು ಮದುವೆಯಾದ ಪುರುಷನನ್ನು ಇಷ್ಟಪಟ್ಟು ಅಕ್ರಮವಾಗಿ ಮನೆಯನ್ನು ಪ್ರವೇಶ ಮಾಡಿದರೆ, ಆಗ ಕುಲದ ಮುಖ್ಯಸ್ಥರು ಸೇರಿ ಕುಟುಂಬದ ಮುಖ್ಯಸ್ಥರ ಅನುಮತಿಯ ಮೇರೆಗೆ ಮದುವೆ ಮಾಡಿಸುವರು. ಈ ರೀತಿಯ ಅನುಮತಿಯ ಅವಕಾಶಗಳಿದ್ದರೂ ಈ ರೀತಿಯ ವಿವಾಹಗಳು ತೀರಾ ವಿರಳವಾಗಿವೆ.

ಕರ್‌ಕರ್ ಮುಂಡರಲ್ಲಿ ಸಾಮಾನ್ಯವಾಗಿ ಗಂಡುಮಕ್ಕಳು ಮದುವೆಯಾಗುವವರೆಗೂ ತಂದೆಯ ಆಶ್ರಯದಲ್ಲಿದ್ದು, ಮದುವೆಯ ನಂತರ ತನ್ನ ಬಾಳ ಸಂಗಾತಿಯೊಂದಿಗೆ ಪ್ರತ್ಯೇಕವಾಗಿ ಜೀವಿಸುವರು. ಎರಡು ಕುಟುಂಬಗಳ ಸದಸ್ಯರಿಂದ ಮೂರನೇ ಕುಟುಂಬ ಅಸ್ತಿತ್ವಕ್ಕೆ ಬರುತ್ತದೆ. ಇದೇ ತರಹ ಗಂಡು ಮಕ್ಕಳು ಪ್ರತ್ಯೇಕವಾದಾಗ ತಾಯಿ-ತಂದೆಯ ಮೂಲ ಕುಟುಂಬವು ಮಾಯವಾಗಿ ಹಿರಿಯ ಮಗನ ಕುಟುಂಬವು ಆ ಕುಟುಂಬದ ಜವಾಬ್ದಾರಿ ಕರ್ತವ್ಯಗಳನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತದೆ. ಆ ಮೂಲಕ ಹಿರಿಯ ಮಗ ಹಬ್ಬ, ಜಾತ್ರೆಗಳಲ್ಲಿಮತ್ತು ಅಕ್ಕತಂಗಿಯರ ಕುರಿತಾದಕಾರ್ಯಗಳನ್ನು ನಿಭಾಯಿಸುವನು. ವಿವಾಹದ ನಂತರ ಪ್ರತ್ಯೇಕವಾಗಲು ಮತ್ತೊಂದು ಕಾರಣ ಇವರ ಅಲೆಮಾರಿತನ

ಕಾರಣವಾಗಿರಬಹುದು. ದೊಡ್ಡಗಾತ್ರದ ಅವಿಭಕ್ತ ಕುಟುಂಬದ ನಿರ್ವಹಣೆ ಕಷ್ಟದಾಯಕವಾಗುತ್ತಿದ್ದ,ಚಿಕ್ಕ ಕುಟುಂಬಗಳ ನಿರ್ವಹಣೆಗೆ ಮತ್ತು ಸ್ಥಳಾಂತರಿಸಲು ಅಲೆಮಾರಿ ಬದುಕಿಗೆ ಅನುಕೂಲವಾಗಿರುತ್ತಿದ್ದವು. ಇಂದಿಗೂ ವಿಭಕ್ತ ಕುಟುಂಬಗಳು ಅಸ್ತಿತ್ವಕ್ಕೆ ಬರುತ್ತಿರುವುದು ಈ ಸ್ವಾತಂತ್ರ್ಯತೆಯ ಮತ್ತು ಜವಾಬ್ದಾರಿಯ ಹಿನ್ನೆಲೆಯಲ್ಲಿಯೇ ಎನ್ನಬಹುದು.

ಕರ್‌ಕರ್‌ಮುಂಡರ ಕೌಟುಂಬಿಕ ವ್ಯವಸ್ಥೆಯಲ್ಲಿ ವಿವಾಹ ಸಂಧರ್ಭದಲ್ಲಿ ಕನ್ಯಾ ಶುಲ್ಕ ಮತ್ತು ಮರುವಿವಾಹದ ಸಂದರ್ಭದ ತಪ್ಪುದಂಡಗಳನ್ನು ಕುಟುಂಬವೇ ಭರಿಸುವುದು. ಕುಟುಂಬದಲ್ಲಿ ಗಂಡ ಹೆಂಡತಿ ಜಗಳ ಕಂಡುಬಂದರೆ ಎರಡು ಕುಟುಂಬದವರು ಮತ್ತು ಕುಲದ ಮುಖ್ಯಸ್ಥರು ಅವರಿಬ್ಬರಿಗೂ ತಿಳಿಹೇಳಿ ಕೂಡಿಸುವರು. ಒಪ್ಪದಿದ್ದಾಗ ಸಮಾಜ ನೀಡಿದ ಸಾಮಾಜಿಕ ಮನ್ನಣೆಗಳನ್ನು ಹಿಂತೆಗೆದುಕೊಳ್ಳುವರು.

ಕರ್‌ಕರ್ ಮುಂಡರ ಕುಟುಂಬ ವ್ಯವಸ್ಥೆಯಲ್ಲಿ ಕುಟುಂಬದ ಸದಸ್ಯನನ್ನು ಆಹ್ವಾನಿಸುವುದರಿಂದ ಹಿಡಿದು ಅಂತಿಮ ಶವಸಂಸ್ಕಾರದವರೆಗೂ ಕುಟುಂಬ ತನ್ನ ಜವಾಬ್ದಾರಿಯನ್ನುಪ್ರಾಮಾಣಿಕವಾಗಿ ಕಾರ್ಯನಿರ್ವಹಿಸುತ್ತಲೇ ಬಂದಿದೆ. ಕುಟುಂಬವು ಸಮಾಜದ ಪ್ರಾಥಮಿಕ ಸಂಸ್ಥೆಯಾಗಿದ್ದು, ಸಮಾಜದ ಚಲನೆ ಮತ್ತು ಅಭಿವೃದ್ಧಿಗೆ ತಳಹದಿಯಾಗಿರುವುದರಿಂದ ಕುಟುಂಬದ ಕಾರ್ಯಗಳನ್ನು ಅರಿತುಕೊಳ್ಳುವುದು ಪ್ರಮುಖವೆನಿಸುತ್ತದೆ.

**ಬಂಧುತ್ವ :**

ಪಾಶ್ಚಿಮಾತ್ಯ ಮತ್ತು ಭಾರತೀಯ ಸಮಾಜಕ್ಕೂ ಇರುವ ಭಿನ್ನತೆಗಳಲ್ಲಿ ಬಂಧುತ್ವವು ಒಂದಾಗಿದೆ. ಇದು ಭಾರತೀಯ ಸಮಾಜವನ್ನು ವೈವಿಧ್ಯತೆಯಿಂದ ಕೂಡಿರುವಂತೆ ಮಾಡಿದೆ. 'ಮಹಮ್ಮದೀಯರು ಹಾಗೂ ಹಿಂದುಗಳ ನಡುವೆ, ಅಷ್ಟೇ ಅಲ್ಲ ಕುಲಕುಲಗಳ ನಡುವೆ ಜಾತಿ ಜಾತಿಗಳ ನಡುವೆ ವಿಭಜಿತವಾದ ದೇಶ ಎಲ್ಲ ಸದಸ್ಯ ಘಟಕಗಳ ನಡುವೆಯೂ ಸಾಮಾನ್ಯವಾಗಿ ಕಂಡುಬರುವ ಪರಸ್ಪರ ತಿರಸ್ಕಾರ ಭಾವನೆ ಮತ್ತು ಸ್ವಭಾವ ಜನ್ಯವಾದ ಪ್ರತ್ಯೇಕತೆಗಳ ಒಟ್ಟು ಪರಿಣಾಮವಾಗಿ ಮೂಡಿ ಬರುವ ಅನಿರ್ಧಿಷ್ಟ ಸಮತೋಲನದ ಚೌಕಟ್ಟಿನ ಆಧಾರದ ಮೇಲೆ ನಿಂತಿರುವ ಸಮಾಜ ಎಂದು ಭಾರತೀಯ ಸಮಾಜದ ಕುರಿತಂತೆ ಕಾರ್ಲ್‌ಮಾರ್ಕ್ಸ್ ಅಭಿಪ್ರಾಯಿಸಿದ್ದಾರೆ. ( ಶಂಕರ್ ನಾರಾಯಣ ರಾವ್ ಎನ್ ಪಿ:೨೦೧೩:೯೮)

ಭಾರತೀಯ ಸಮಾಜ ಕುಲಕುಲಗಳಿಂದ ವಿಭಜನೆಯನ್ನು ಹೊಂದಿರುವುದರಿಂದ ಅವುಗಳಲ್ಲಿ ವಿಶಿಷ್ಟ ವಿಧಿವಿಧಾನ ಮತ್ತು ನಿಷೇಧಗಳನ್ನು ಕಾಣಬಹುದು. ಪ್ರತಿ

ಸಮುದಾಯವು ತನ್ನ ಸದಸ್ಯರ ನಡುವಿನ ಸಂಬಂಧಗಳನ್ನು ಸೃಷ್ಟಿಸಿಕೊಳ್ಳುವಾಗ ಕೆಲವೊಂದು ಚಿಹ್ನೆ ಅಥವಾ ಗುರುತುಗಳನ್ನು ನೀಡುತ್ತದೆ. ಆ ರೀತಿಯ ಚಿಹ್ನೆಗಳಲ್ಲಿ ಕುಲ/ ಬಳಿ/ ಬೆಡಗುಗಳು ಪ್ರಮುಖವಾಗಿದ್ದು, ಸಂಬಂಧ ಬೆಸೆಯಲು ಮತ್ತು ಸಮುದಾಯದ ವಿಕಾಸಕ್ಕೆ ಕಾರಣವಾಗುತ್ತವೆ. ಸಮುದಾಯದಲ್ಲಿ ಕೊಡು ಕೊಳ್ಳುವಿಕೆಗೆ, ಜನನ, ಮರಣದಂತಹ ಕ್ರಿಯಾ ವಿಧಿಗಳಲ್ಲಿ ನಡೆಯುವ ಜವಾಬ್ದಾರಿಯನ್ನು ನೀಡಲು ನೆರವಾಗುತ್ತವೆ. ಬಂಧತ್ವು ಎಂದರೆ ಸಮುದಾಯದ ಸದಸ್ಯರ ನಡುವಿನ ಬೆಸುಗೆ ಬೆಸೆಯುವ ಒಟ್ಟು ಅಂಶಗಳ ಮೊತ್ತವೆಂದರೂ ತಪ್ಪಾಗಲಿಕ್ಕಿಲ್ಲ. ಸಮುದಾಯದಲ್ಲಿ ಬಂಧುತ್ವ ಬೆಳೆಯಲು ಪೂರ್ವಜರಿಂದ ಬಂದ ಸ್ತರವಿನ್ಯಾಸ ಮಾದರಿಯ ವರ್ಗೀಕರಣ ಕುಲ ಬಳಿ, ಬೆಡಗು, ಗೋತ್ರಗಳ ರೂಪದಲ್ಲಿ ಸೃಷ್ಟಿಯಾಗುತ್ತವೆ. ಇಂತಹ ಕುಲ/ಬಳಿ/ಬೆಡಗು/ಗೋತ್ರಗಳನ್ನು ಒಳಗೊಂಡ ಸಮುದಾಯದ ಬಂಧುತ್ವ ಕುರಿತಂತೆ ಇರಾವತಿ ಕರ್ವೆ ಎಂಬ ಸಮಾಜಶಾಸ್ತ್ರಜ್ಞೆ ಸೂಕ್ಷ್ಮವಾಗಿ ಅಧ್ಯಯನ ಮಾಡಿರುವರು.

**ಕುಲಗಳು** 

ಕರ್‌ಕರ್‌ಮುಂಡರು ಕುಲ, ಬೆಡಗು, ಬಳಿಗಳನ್ನು ಅವರ ಮಾತೃ ಭಾಷೆ ತೆಲುಗು ಆಗಿರುವುದರಿಂದ "ಕುಲಮು" ಎಂದು ಕರೆಯುವರು. ಪ್ರತಿ ಸಮುದಾಯದ ಕುಟುಂಬಗಳಲ್ಲಿ ಬೆಡಗುಗಳು ಸಂಕೀರ್ಣವಾಗಿವೆ. ಸಮುದಾಯದ ಚಾರಿತ್ರಿಕ ಹೆಜ್ಜೆಗುರುತಗಳೇ ಈ ಬೆಡಗುಗಳು. ಪ್ರಾಚೀನ ಕಾಲದಿಂದಲೂ ಮಾನವ ಅನೇಕ ವೃತ್ತಿ, ಆಚಾರ– ವಿಚಾರ, ನಂಬಿಕೆ, ನಿಷೇಧ ಮುಂತಾದ ಕ್ರಿಯಾವಿಧಿಗಳನ್ನು ಅನುಸರಿಸುತ್ತಾ ಬಂದಿರುವನು. ಪ್ರತಿ ಕುಟುಂಬದ ಚರಿತ್ರೆಯನ್ನು ಬೆಡಗುಗಳ ಮೂಲಕ ತಿಳಿಯಬಹುದಾಗಿದೆ. ಬುಡಕಟ್ಟು ಸಮುದಾಯಗಳು ರಕ್ತ ಸಂಬಂಧವನ್ನು ಬೆಳೆಸಬೇಕೆಂದರೆ ಬೆಡಗುಗಳು ಅನಿವಾರ್ಯವಾಗುತ್ತವೆ. ಬೆಡಗುಗಳು ಮನೆತನದ ವೃತ್ತಿ, ದೇವರು, ಸಂಸ್ಕೃತಿ, ಮೂಲಪುರುಷನ ಇತಿಹಾಸ, ಆಚಾರ–ವಿಚಾರ, ವಿಧಿ ನಿಷೇಧಗಳನ್ನು ಸೂಚಿಸುತ್ತವೆ. ಕರ್‌ಕರ್‌ಮುಂಡರ ಬೆಡಗುಗಳನ್ನು ಅವುಗಳ ನಡುವಿನ ಬಂಧುತ್ವವನ್ನು ಈ ಕೆಳಗಿನಂತೆ ಕಾಣಬಹುದಾಗಿದೆ. ಕರ್‌ಕರ್‌ಮುಂಡರ ಬೆಡಗುಗಳ ಹೆಸರೆಲ್ಲ ತೆಲುಗು ಮೂಲದಲ್ಲಿವೆ. ಬಹುತೇಕ ಪಶುಪಾಲಕರ ಬೆಡಗು ತೆಲುಗಿನಲ್ಲಿಯೇ ಉಚ್ಚರಿಸಲ್ಪಡುತ್ತವೆ ಎಂದು ಹೇಳಬಹುದು. ಕರ್‌ಕರ್‌ಮುಂಡರ ಬಂಧುತ್ವವು ಈ ಬೆಡಗುಗಗಳಲ್ಲಿ ಈ ಕೆಳಗಿನಂತೆ ಕಂಡು ಬರುತ್ತದೆ.

**ಎನುಮಲೋಳ್**: ಈ ಕುಲದವರ ಪೂರ್ವಿಕರು ಎಮ್ಮೆಗಳನ್ನು ಸಾಕಿಕೊಂಡು ಜೀವನ ನಿರ್ವಹಿಸುತ್ತಿದ್ದರಿಂದ ಈ ಹೆಸರು ಬಂದಿದೆ. ಎನುಮಲೋಳ್ ಅಗ್ರಗಣ್ಯ

ಅಥವಾ ಶ್ರೇಷ್ಠ ಕುಲದವರೆಂದು ಹೇಳಲಾಗುತ್ತದೆ. ಉತ್ತರ ಕರ್ನಾಟಕದಲ್ಲಿ ವಾಲಿಕಾರರಾಗಿ ಸಮುದಾಯದ ಮುಖ್ಯಸ್ಥರಾಗಿದ್ದರು. ದಕ್ಷಿಣ ಕರ್ನಾಟಕ ಭಾಗದಲ್ಲಿ ದೊರೆಗಳು ಎಂದು ವಿಶೇಷ ಸ್ಥಾನಮಾನಗಳನ್ನು ಇಂದಿಗೂ ಪಡೆಯುವುದನ್ನು ಕಾಣಬಹುದು. ಇವರು ಯಮನಗೊಂಡೋಲ್ (ಕತ್ತಿಂಟಿಲೋಳ್) ಯರಕಂಟಿಲೋಳ್, ಗುಂಜಿಲೋಳ್, ಪಿಕೀಲೋಳ್ ಪೊಗರ್ತೋಳ್ ಬೆಡಗಿನವರೊಂದಿಗೆ ವೈವಾಹಿಕ ಸಂಬಂಧ ಬೆಳೆಸುವರು. ಶರಕಲೋಳ್, ತೆಲ್ಲಮ್ಯಾಕ್ಲಲೋಳ್, ಶೆಟ್ಟಿಯೋಳ್ ಅಣ್ಣ ತಮ್ಮಂದಿರಾಗುತ್ತಾರೆ. ಎನುಮಲೋಳ್ ಬೆಡಗಿನವರು ಮುತ್ಯಾಲಮಾರಿ ದೇವರನ್ನು ಕುಲದೇವತೆಯಾಗಿ ಆರಾಧಿಸುವರು.

**ತೆಲ್ಲಮ್ಯಾಕ್ಲೋಳ್** : ಬಿಳಿ ಆಡುಗಳನ್ನು ಅವಲಂಬಸಿ ಅಲೆಮಾರಿ ಬದುಕನ್ನು ಅನುಸರಿಸಿಕೊಂಡು ಬಂದ ಈ ಬೆಡಗಿನವರಿಗೆ ಯನಗೊಂಡ್ಲೋಳ್, ಪೆದ್ದಗುಂಜಿಲೋಳ್ ಬೀಗರಾದರೆ ಶೆಟ್ಟಿಯೋಳ್, ಎನುಮಲೋಳ್, ಶರಕಲೋಳ್, ಚಿನ್ನಗುಂಜಿಯೋಳ್ ಅಣ್ಣತಮ್ಮಂದಿರಾಗುವರು.

**ಯನಗೊಂಡ್ಲೋಳ್** : ಈ ಬೆಡಗಿನವರನ್ನು ಕಟ್ಟಿಹಿಂಟಿಲೋಳ್ ಎಂಬ ಮತ್ತೊಂದು ಹೆಸರಿನಿಂದಲೂ ಸಹ ಕರೆಯುವರು.ಇವರು ದೊರೆಗಳು ಎಂದು ಕರೆಸಿಕೊಳ್ಳುವ ಎನುಮಲೋರ ಅಧೀನದಲ್ಲಿ ಗೌಡಿಕೆ ವೃತ್ತಿ ಮಾಡುತ್ತಿದ್ದರು. ಕಟ್ಟೆ ಮೇಲೆ ಕುಳಿತು ವ್ಯಾಜ್ಯಗಳನ್ನು ಪರಿಹರಿಸುವುದರಿಂದ ಈ ಹೆಸರು ಬಂದಿದೆ ಎಂದು ಹೇಳುವರು. ಇವರಿಗೆ ಶರಕಲೋಳ್, ಎನುಮಲೋಳ್, ತೆಲ್ಲಮ್ಯಾಕಲೋಳ್, ಶೆಟ್ಟಿಯೋಳ್, ಚಿನ್ನಗುಂಜಿಲೋಳ್ ನೆಂಟರಾಗುವರು. ಪೆದ್ದಗುಂಜಿಲೋಳ್ ಬೆಡಗಿನವರು ಮಾತ್ರವೇ ಅಣ್ಣ ತಮ್ಮಂದಿರಾಗುವರು.

**ಶೆಟ್ಟಿಯೋಳ್** : ಈ ಕುಲದವರಿಗೆ ಶೆಟ್ಟಿಯೋಳ್ ಎಂಬ ಹೆಸರು ಹೇಗೆ ಬಂದಿದೆ ಎಂದು ತಿಳಿದಿಲ್ಲ. ಆದರೆ ಶೆಟ್ಟಿಗೆ ಎಂಬುದು ಮೀನಿನ ಹೆಸರಾಗಿದ್ದು, ಮೀನುಗಾರಿಕೆ ಮಾಡುತ್ತಿದ್ದರಿಂದ ಈ ಹೆಸರು ಬಂದಿರುವ ಸಾಧ್ಯತೆಗಳಿವೆ. ಈ ಬೆಡಗಿನವರಿಗೆ ಯನಗೊಂಡ್ಲೋಳ್, ಪೆದ್ದ ಗುಂಜಿಲೋಳ್ ಬೀಗರಾಗುವರು. ತೆಲ್ಲಮ್ಯಾಕ್ಲೋಲೋಳ್, ಶರಕಲೋಳ್, ಚಿನ್ನಗುಂಜಿಲೋಳ್, ಎನುಮಲೋಳ್ ಅಣ್ಣ ತಮ್ಮಂದಿರಾಗುವರು.

**ಸಲ್ಲೋಳ್** : ಸಲ್ಲೋಳ್ ಹೆಸರಿನ ಹಿಂದಿನ ಇತಿಹಾಸ ತಿಳಿದುಬಂದಿಲ್ಲ. ಇದು ತೆಲುಗು ಪದ ಆಗಿದ್ದು, ಸಲ್ಲ ಎಂದರೆ ಮಜ್ಜಿಗೆ ಬಹುಶಃ ಪಶುಪಾಲಕರಾಗಿದ್ದ ಇವರು ಮಜ್ಜಿಗೆ ಮಾಡಿ ಜನತೆಗೆ ನೀಡುತ್ತಿದ್ದುದ್ದು ನಿರಂತರವಾದಾಗ ಈ ಹೆಸರು ಬಂದಿರಬಹುದು. ಇವರಿಗೆ ಜೊಜ್ಜವಾಳ್ಳ್ ಪ್ರಸಾದೋಳ್, ಬುಸ್ಸೇ, ಶೆಟ್ಟಿಯೋಳ್, ತೆಲ್ಲಮ್ಯಾಕಲೋಳ್,

ಅಣ್ಣತಮ್ಮಂದಿರಾಗುವರು ಇವರ ಮಧ್ಯೆ ವೈವಾಹಿಕ ಸಂಬಂಧಗಳು ನಿಷಿದ್ಧವಾಗಿವೆ. ಪೋಗತೋರ್ಳ್ ಅಂಗಲೂರಿ, ಗುಜ್ಜಲ, ಚಿನ್ನವಾಳ್, ಬೆಡಗಿನವರು ಬೀಗರಾಗುತ್ತಾರೆ.

**ಬೊಜ್ಜುವಾಳ್ :** ಇವರಿಗೆ ಪಾನಿಗೆಟರ್, ಸಲ್ಲೋಳ್, ಬುಸ್ಸೇ ಶೆಟ್ಟಿಯೋಳ್, ತೆಲ್ಲಮ್ಯಾಕಲೋಳ್, ಪ್ರಸಾದೋಳ್ ಅಣ್ಣತಮ್ಮಂದಿರಾಗುವರು "ಸಲ್ಲೋಳ್‌ಗೆ ನೆಂಟರಾಗುವರು ಇವರಿಗೆ ನೆಂಟರಾಗುವರು. ಕರ್‌ಕರ್ ಮುಂಡರಲ್ಲಿ ಈ ರೀತಿಯಾಗಿ ಕುಲದ ಹೆಸರುಗಳು ಕಂಡುಬರುತ್ತವೆ. ಇವು ಬಹುತೇಕ ಬುಡಕಟ್ಟಿನ ಕುಲ ಹೆಸರುಗಳಾಗಿ ತೋರಬರುತ್ತವೆ. ಬುಡಕಟ್ಟುಗಳ ಬಹುಪಾಲು ಕುಲಗಳು ಪ್ರಾಣಿಗಳ ಹೆಸರಿನಲ್ಲಿ ಬರುತ್ತವೆ. "ವೃಷಾರಾಧನೆ, ಪ್ರಾಣಿಗಳ ಆರಾಧನೆಗಳು ದಕ್ಷಿಣ ಭಾರತದ ದ್ರಾವಿಡ ಸಂಸ್ಕೃತಿಯ ವಿಶಿಷ್ಠ ಲಕ್ಷಣಗಳು. ನಿಸರ್ಗದಲ್ಲಿ ಅಪಮಿರಿತವಾದ ವಸ್ತುಗಳಲ್ಲಿ ಯಾವುದೋ ಒಂದು ಕಲ್ಲುಬಂಡೆ, ದೊಡ್ಡ ಮರ, ಅಥವಾ ಪ್ರಾಣಿ ಆದಿಮಾನವ ಗುಂಪಿಗೆ ರಕ್ಷಣೆಯನ್ನು ಒದಗಿಸಿರಬಹುದು. ಅಥವಾ ಭಯಕ್ಕೆ ಕಾರಣವಾಗಿರಬಹುದು. ಇಂಥ ಒಂದೊಂದು ವಸ್ತುವೂ ಆಯಾ ಬುಡಕಟ್ಟು ಗುಂಪಿಗೆ ಯಾವುದೋ ಶಕ್ತಿಯ ಸಂಕೇತವಾಗಿ ಕಂಡಿರಬಹುದು. ಈ ಸಂದರ್ಭದಲ್ಲಿಯೇ ಪ್ರಾಣಿ, ಮರ, ಗುಡ್ಡ, ಬೆಟ್ಟ, ಬಂಡೆ, ಗುಂಪಿನ ಗುರುತಾಗಿ ಕುಲ ಸಂಕೇತವಾಗಿ ಸ್ವೀಕರಿಸಲ್ಪಟ್ಟು ಅದು ಪೂಜಾರ್ಹ ವಸ್ತುವೂ ಆಗಿಬಿಟ್ಟಿತು. ಒಂದೊಂದು ಬುಡಕಟ್ಟಿನ ಒಂದೊಂದು ಕುಲಕ್ಕೆ ಅವೇ ಹೆಸರು ಉಳಿದುಕೊಂಡು ಬಂದಂತೆ ಕಾಣುತ್ತದೆ."(ಕೃಷ್ಣಮೂರ್ತಿಹನೂರು:೨೦೦೯:೬೩)

ಸಮುದಾಯದ ಬೆಡಗುಗಳು ಸಮುದಾಯದ ಒಳಗೆ ಸುರುಳಿಯಾಕಾರದಲ್ಲಿ ಸುತ್ತಿಕೊಂಡು ಸಾಮಾಜಿಕ ಸಂಬಂಧಗಳ ಬಲೆಯಾಗಿರುತ್ತವೆ. ಈ ಬೆಡುಗುಗಳಿಂದ ಅಣ್ಣ ತಮ್ಮ ಅತ್ತೆ, ಮಾವ, ಅಳಿಯ, ಸೊಸೆ, ಭಾವ, ಭಾಮೈದ, ಅಜ್ಜ, ಅಜ್ಜಿ, ತಾತ ಇತ್ಯಾದಿ ಪಾತ್ರಗಳು ಸೃಷ್ಟಿಯಾಗಿ ಕರ್ತವ್ಯ ಮತ್ತು ಜವಾಬ್ದಾರಿಗಳ ನಿದರ್ಶನ ನೀಡುತ್ತವೆ ಎನ್ನಬಹುದು. ಪ್ರತಿ ಬುಡಕಟ್ಟು ಸಮುದಾಯಗಳಲ್ಲಿರುವಂತೆ ಕರ್‌ಕರ್ ಮುಂಡರಲ್ಲಿಯು ಕುಲಗಳು ತಂದೆಯ ಕಡೆಯಿಂದ ಗುರುತಿಸಲ್ಪಡುವವು. ಮದುವೆ, ನಾಮಕರಣ, ಋತುಮತಿ ಸೇರಿದಂತೆ ಇತ್ಯಾದಿ ಆಚಾರಗಳಲ್ಲಿ ಹೆಣ್ಣಿನ ಸೊದರಮಾವ ಸೊದರತ್ತೆಗೆ ವಿಶೇಷ ಮನ್ನಣೆ ನೀಡಲಾಗುವುದು. ಹೆಣ್ಣು ಕೊಡುವ ಮತ್ತು ತರುವ ಸಂದರ್ಭ ಹಾಗೂ ಜವುಳಶಾಸ್ತ್ರ, ಹರಕೆ ಸಲ್ಲಿಸುವಂತಹ ಆಚಾರಗಳಲ್ಲಿ ಇವರ ಉಪಸ್ಥಿತಿ ಕಡ್ಡಾಯವಾಗಿರುವುದು. 'ಹೆಣ್ಣುಕೊಟ್ಟ ಮಾವ ಕಣ್ಣು ಕೊಟ್ಟದೇವರು' ಒಂದೇ ಎಂಬ ಮಾತಿನ ಹಿನ್ನೆಲೆಯುಲ್ಲಿ ಹೆಣ್ಣು ನೀಡಿ ನಮ್ಮ ಕುಲದ ಮುಂದುವರಿಕೆ ಕಾರಣರಾಗಿರುವುದರಿಂದ ಅವರನ್ನು ದೇವರೆಂಬ ನಂಬಿಕೆಯಿಂದ ಗೌರವನೀಡುವರು.

ತಂದೆಯ ಸಹೋದರಿಯರು ಸೊದರತ್ತೆಯರಾದರೆ ಅವರ ಗಂಡಂದಿರು ಮತ್ತು ತಾಯಿಯ ಅಣ್ಣತಮ್ಮಂದಿರು ಸೋದರ ಮಾವರಾಗುವರು. ಮಾವನ ಮಕ್ಕಳು ವಯಸ್ಸಿನಲ್ಲಿ ಹಿರಿಯವರಾದರೆ ಭಾವ-ಅತ್ತಿಗೆಯರು ಮತ್ತು ಚಿಕ್ಕವರಾಗಿದ್ದರೆ ವೈದುನ-ನಾದಿನಿಯರು ಆಗುವರು. ಬಂಧುತ್ವ ಕರ್‌ಕರ್‌ಮುಂಡರಲ್ಲಿ ಅಲ್ಲದೇ ಇತರೆ ಸಮುದಾಯಗಳಲ್ಲಿಯೂ ಇದೇ ರೂಪದ ಬಂಧುತ್ವ ಕಾಣಬಹುದಾಗಿದೆ.

ಕರ್‌ಕರ್ ಮುಂಡರಲ್ಲಿ ಕೆಲವೊಂದು ಕುಲಗಳು ವಿಘಟನೆಹೊಂದಿ ಪರಸ್ಪರ ವಿರುದ್ಧ ದಿಕ್ಕಿನ ಬೆಡಗಿನವರೊಂದಿಗೆ ವೈವಾಹಿಕ ಸಂಬಂಧಗಳನ್ನು ಹೊಂದಿರುವುದನ್ನು ಕಾಣಬಹುದು. ಗುಂಜಿಲೋಳ್ ಬೆಡಗು ಪೆದ್ದಗುಂಜಿಲೋಳ್ ಮತ್ತು ಚಿನ್ನಗುಂಜಿಲೋಳ್ ಎಂದೂ ಶೆಟ್ಟಿಯೋಳ್ ಬೆಡಗು ಚಿನ್ನಶೆಟ್ಟಿಯೋಳ್ ಮತ್ತು ಪೆದ್ದಶೆಟ್ಟಿಯೋಳ್ ಎಂದು ವಿಘಟನೆಯಾಗಿರುವುದನ್ನು ಗುರಿತಿಸಬಹು.ಈ ರೀತಿಯಲ್ಲಿ ವಿಘಟನೆಯಾಗಲು ಮತ್ತು ಹೊಸ ಬೆಡಗುಗಳ ಉಗಮವಾಗಲು ಕಾರಣಗಳ ಕೊರತೆ ಕಂಡುಬರುತ್ತದೆ. ಇವರಲ್ಲಿನ ಮೂಲ ಬೆಡಗುಗಳ ಜೊತೆಗೆ ಕೆಲವೊಂದು ಹೊಸ ಬೆಡಗುಗಳು ಸೃಷ್ಟಿಯಾಗಿರುವುದನ್ನು ಕಾಣಬಹುದು. ಪ್ರಸಾದೋಳ್, ಮಿಡಗುಂಡೋಳ್, ಸದಿವಲೋಳ್, ಪೋಗರ್ತೋಳ್, ಪಿನ್ನಾರು ಗಾಜಿಲೋಳ್ ಬೆಡಗುಗಳು ಯಾವ ಹಿನ್ನೆಲೆಯಲ್ಲಿ ಬಂದಿವೆ ಎಂಬುದು ತಿಳಿದು ಬಂದಿಲ್ಲ. ಬದಲಾಗಿ ನಾವು ಅಣ್ಣತಮ್ಮಂದಿರು ಅಥವಾ ನೆಂಟರು ಎಂದು ವೈವಾಹಿಕ ಸಂಬಂಧ ಬೆಳೆಸಿರುವುದನ್ನು ಕಾಣಬಹುದು. ಇದರಿಂದಾಗಿ ಕೆಲವೊಂದು ಸಂದರ್ಭದಲ್ಲಿ ಅಣ್ಣ ತಮ್ಮಂದಿರಾಗುವರು ಮದುವೆ ಮಾಡಿಕೊಂಡು ಸಮುದಾಯದ ಬಂಧುತ್ವವನ್ನು ಸಡಿಲಗೊಳಿಸುವುದರ ಜೊತೆಗೆ ಸಮುದಾಯದ ಶುದ್ಧತೆ ಹಾಳಾಗುತ್ತಿದೆ.

ಆಧುನೀಕರಣ ಸಂದರ್ಭದಲ್ಲಿ ಕರ್‌ಕರ್‌ಮುಂಡರ ಬಂಧುತ್ವವು ಸಡಿಲತೆಯಿಂದ ಕೂಡಿದ್ದರೂ ಹಿರಿಯ ತಲೆಮಾರಿನ ಜನರ ತಿಳುವಳಿಕೆ ಸಮುದಾಯದ ಅಸ್ಮಿತೆಯನ್ನು ಉಳಿಸುತ್ತಿದೆ.ಮತ್ತೊಂದು ಪ್ರಮುಖ ಅಂಶವೆಂದರೆ ಕುಲಗಳು ಎಂದರೇನು? ನಮ್ಮದು ಯಾವ ಕುಲ ಎಂಬ ಅರಿವಿಲ್ಲದ ಮಾಹಿತಿದಾರರನ್ನು ಈ ಸಮುದಾಯದಲ್ಲಿ ಕಾಣಬಹುದು.

**ವಾಸಿಸುವ ನೆಲೆ**

ಕರ್‌ಕರ್‌ಮುಂಡರು ಅಲೆಮಾರಿಗಳಾಗಿ ಜೀವನ ನಿರ್ವಹಿಸಿದವರು. ಇವರು ಸ್ಥಿರ ನೆಲೆಯನ್ನು ಕಂಡುಕೊಂಡವರಲ್ಲ. ಇಂತಹ ಬದುಕಿನಲ್ಲಿ ಊರಿನ ಹೊರಭಾಗದಲ್ಲಿನ ಪಾಳುಮಂಟಪ ದೇವಸ್ಥಾನ ಮತ್ತು ಬಯಲುಗಳಲ್ಲಿ ಗುಡಾರ ಅಥವಾ ಗುಡಿಸಲುಗಳನ್ನು ಹಾಕಿಕೊಂಡು ಬದುಕುತ್ತಿದ್ದವರು. ಈ ಗುಡಿಸಲು ಅಥವಾ ಗುಡಾರಗಳು ತಾತ್ಕಾಲಿಕ

ನೆಲೆಯನ್ನು ಒದಗಿಸುತ್ತಿದ್ದವು. ಮತ್ತೊಂದು ಊರಿಗೆ ಹೋದಾಗ ಇದೇ ಮಾದರಿಯ ಸ್ಥಳಗಳಲ್ಲಿ ಮತ್ತೆ ಗುಡಾರ ಗುಡಿಸಲು ಹಾಕಿಕೊಂಡು ಬದುಕುತ್ತಿದ್ದರು. ಈರೀತಿಯಾಗಿ ಹಳ್ಳಿಯ ಹೊರಭಾಗದಲ್ಲಿ ಇರಲು ತಮ್ಮ ಜೊತೆಯಲ್ಲಿಯೇ ಇದ್ದ ಹಂದಿ, ಮೇಕೆ, ಕೋಳಿ ಇತ್ಯಾದಿ ಪ್ರಾಣಿಗಳ ಕುರಿತಾದ ನಂಬಿಕೆ ಮತ್ತು ನಿಷೇಧಗಳು ಕಾರಣವಾಗಿರಬಹುದು. ಅಸಹ್ಯಕರವಾಗಿ ಭಿಕ್ಷೆ ಬೇಡಿ ತಿನ್ನುತ್ತಿದ್ದರಿಂದ ಇವರನ್ನು ಊರಿನವರು ಒಳಗೆ ಸೇರಿಸದೇ ಇರಬಹುದಾದ ಸಂದರ್ಭಗಳುಂಟು. ಜೊತೆಗೆ ಊರಲ್ಲಿ ಭಿಕ್ಷೆ ಬೇಡುವುದನ್ನು ಬಿಟ್ಟು, ಬೇರೆ ಯಾವುದೇ ಸಂದರ್ಭಗಳಲ್ಲಿಯೂ ಅವರೊಂದಿಗೆ ಬೆರೆಯಬಾರದು ಎಂಬ ಕೀಳರಿಮೆಯೂ ಕಾರಣವಾಗಿರಬಹುದಾಗಿದೆ.

ಕರ್‌ಕರ್‌ಮುಂಡ ಸಮುದಾಯದವರು ಇತ್ತೀಚಿನ ದಿನಗಳಲ್ಲಿ ನೆಲೆನಿಂತ ಬದುಕನ್ನು ರೂಢಿಸಿಕೊಂಡಿದ್ದು, ಇವರ ಅಲೆಮಾರಿ ಬದುಕು ಇಂದು ನಗರಗಳ ಅಂಚಿಗೆ ತಂದು ನಿಲ್ಲಿಸಿದೆ. ಬಹುತೇಕ ಕರ್‌ಕರ್‌ಮುಂಡ ಸಮುದಾಯದವರು ನಗರದ ಕೊಳಚೆ ಪ್ರದೇಶಗಳಲ್ಲಿ ನೆಲೆಸಿರುವರು. ಈ ನೆಲೆಗಳು ಅಧಿಕೃತವಾಗಿಯೂ ಮತ್ತು ಅನಾಧಿಕೃತವಾಗಿಯೂ ಇವೆ. ಕರ್ನಾಟಕದ ಮುಧೋಳ, ಹಾವೇರಿ, ದಾವಣಗೆರೆ, ಮಧುಗಿರಿ, ಕಂಪ್ಲಿ, ಬಳ್ಳಾರಿ, ಚಳ್ಳಕೆರೆ ಇತ್ಯಾದಿ ಪ್ರದೇಶಗಳಲ್ಲಿ ಕೊಳಚೆ ಪ್ರದೇಶದಲ್ಲಿ ನೆಲೆಸಿರುವರು. ಮಧುಗಿರಿ, ಮುಧೋಳ, ನಾಯಕನಹಟ್ಟಿಗಳಲ್ಲಿ ಇಂದಿಗೂ ಗುಡಾರಗಳಲ್ಲಿಯೇ ಜೀವಿಸುವರು. ಕೊಪ್ಪಳ, ಇಳಕಲ್, ಬಾಬಾನಗರ ಹಳ್ಯಾಲ ಕಿತ್ತೂರು, ಹಾವೇರಿ, ದಾವಣಗೆರೆಗಳಲ್ಲಿ ಮಾತ್ರ ಆರ್‌ಸಿಸಿ, ಆಶ್ರಯ, ಹೆಂಚಿನ ಮನೆಗಳಲ್ಲಿ ವಾಸಿಸುತ್ತಿದ್ದಾರೆ. ಕರ್‌ಕರ್‌ಮುಂಡರು ಅಲೆಮಾರಿತನದಿಂದ ನಗರದ ಅಂಚಿಗೆ ಬಂದು ನೆಲೆಸಲು ಇವರ ಹಂದಿ ಸಾಕಾಣಿಕೆ ವೃತ್ತಿಯು ಕಾರಣವಾಗಿರಬಹುದು. ಹಳ್ಳಿಗಳಲ್ಲಿ ವರ್ತನೆ ನೀಡುವ ಮನಸುಗಳು ಕ್ರಮೇಣ ಕಡಿಮೆಯಾಗಿರುವುದು ಮತ್ತು ಪಾರಂಪಾರಿಕ ವೃತ್ತಿಗಳಿಂದ ಜೀವನ ನಿರ್ವಹಿಸುವುದು ಕಷ್ಟದಾಯಕವಾಗಿದ್ದರಿಂದ ಪರ್ಯಾಯ ವೃತ್ತಿಗಳನ್ನು ಅರಸಿಕೊಂಡು ನಗರಗಳತ್ತ ವಲಸೆ ಬಂದಿರಬಹುದಾಗಿದೆ. ಒಟ್ಟಾರೆ ಇವರು ನಗರದ ಕೊಳಚೆ ಪ್ರದೇಶಗಳಲ್ಲಿ ವಾಸಿಸುತ್ತಿದ್ದು, ಕೆಲವೊಂದು ಕಡೆ ಸರ್ಕಾರದ ಹಕ್ಕುಪತ್ರಗಳೊಂದಿಗೆ ಮತ್ತೆ ಕೆಲವು ಸ್ಥಳಗಳಲ್ಲಿ ಅನಾಧಿಕೃತವಾಗಿ ಗುಡಾರ, ಗುಡಿಸಲು, ನೆಲೆ ಕಂಡುಕೊಂಡಿದ್ದಾರೆಂದು ಹೇಳಬಹುದಾಗಿದೆ.

**ಮೊಂಡದೀಕ್ಷೆ**

ಕರ್‌ಕರ್ ಮುಂಡರಲ್ಲಿ ಮೊಂಡ ದೀಕ್ಷೆ ಎನ್ನುವ ವಿಶೇಷ ಸಂಸ್ಕಾರ ವಿಧಿಯನ್ನು ಕಾಣಬಹುದಾಗಿದೆ. ಹೆಗಲಿಗೆ ಜೋಳಿಗೆ ಹಾಕಿಕೊಂಡು ಬಲಗೈಯಲ್ಲಿ ಒಂದು ಮೊಂಡುಗತ್ತಿ

ಮತ್ತು ಕೈಗೆ ಹಾಕಿಕೊಂಡ ಮೂರು ಕಬ್ಬಿಣದ ಬಳೆಗಳನ್ನು ಅಲುಗಾಡಿಸುತ್ತಾಭಿಕ್ಷೆ ಬೇಡುವರು.ಈ ಭಿಕ್ಷಾವೇಷಕ್ಕೆ 'ವಸ್ಲ' ಎಂದು ಕರೆಯುವರು, ಈ ವೇಷವನ್ನು ಹಾಕಿಕೊಂಡವನಿಗೆ **ಮಕರಿಗ್ಯಾಲೋ ಅಥವಾ ಮಕರಿಗಾಡು** ಎಂದು ಕರೆಯಲಾಗುತ್ತಿತ್ತು. **ವಸ್ಲ**ವೇಷವನ್ನು ಹಾಕಿಕೊಂಡು ಭಿಕ್ಷೆ ಬೇಡುವುದಕ್ಕೆ ಮುಂಚಿತವಾಗಿ ಅವನಿಗೆ ವಾರಸುದಾರಿಕೆಯ ಪರವಾನಗಿ ಬೇಕಿತ್ತು. ಅದು ಅವನ ತಂದೆಯಿಂದ ಬರಬೇಕಾದ ಪಿತ್ರಾರ್ಜಿತ ಹಕ್ಕಾಗಿರುವುದು. ಈ ಹಕ್ಕನ್ನು ಪಡೆಯಬೇಕಾದರೆ ಉಪನಯನ ವಿಧಿಯಾಗಿಮೊಂಡ ದೀಕ್ಷೆಯನ್ನು ನೀಡಲಾಗುವುದು. ಇದು ಕೇವಲ ಸಂಸ್ಕಾರ ವಿಧಿಯಾಗಿರದೇ ಭಿಕ್ಷೆ ಬೇಡುವ ತರಬೇತಿಯಾಗಿರುವುದು.

ಕುಟುಂಬದ ಸದಸ್ಯ ಪ್ರಾಪ್ತ ವಯಸ್ಕನಾದಾಗ ಕುಲಸ್ಥರು ಅಥವಾ ಹಿರಿಯರ ಸಮ್ಮುಖದಲ್ಲಿ ಈ ಮೊಂಡು ದೀಕ್ಷೆಯನ್ನು ನೀಡಲಾಗುತ್ತಿತ್ತು. ಭಿಕ್ಷೆ ಬೇಡುವಾಗ ಭಿಕ್ಷಾ ಸರಹದ್ದನ್ನು ಮೀರಬಾರದು ಮತ್ತು ಅಣ್ಣತಮ್ಮಂದಿರಾಗುವರ ಮನೆಗೆ ಹೋಗಿ ಭಿಕ್ಷೆ ಬೇಡಬಾರದು. ಜೊತೆಗೆ ಭಿಕ್ಷೆ ಬೇಡುವಾಗ ಸಂಭವಿಸಬಹುದಾದ ಅನಾಹುತಗಳಿಗೆ ಕಂಡುಕೊಳ್ಳಬೇಕಾದ ಪರಿಹಾರ ಮಾರ್ಗಗಳ ಕುರಿತಾದ ತಿಳುವಳಿಕೆಯನ್ನು ನೀಡಲಾಗುತ್ತಿತ್ತು. ಮಖರ್‌ಗ್ಯಾಲೋ ಭಿಕ್ಷೆ ಬೇಡುವಾಗ ಕೈ ಕೊಯ್ದುಕೊಳ್ಳುವ ಮತ್ತು ಅಸಹ್ಯಕರವಾಗಿ ವಾಂತಿ ಮಾಡಿಕೊಳ್ಳುವ ಈ ಕಲೆಯನ್ನು ಎರಡರಿಂದ ಮೂರು ತಿಂಗಳ ತರಬೇತಿಯಲ್ಲಿ ಕಲಿಯುವನು. ವಾಂತಿ ಮಾಡಿಕೊಳ್ಳುವ ಕಲೆಯನ್ನು **ಕಸ್‌ಗರಂ** ಎಂದು ಕರೆಯುವರು.ಇಂತಹ ಕಲೆಯನ್ನು ಮೈಗೂಡಿಸಿಕೊಂಡವನಿಗೆ ಮೊಂಡದೀಕ್ಷೆ ನೀಡಲಾಗುತ್ತಿತ್ತು. ಈ ದೀಕ್ಷೆ ಪಡೆದ ಮೇಲೆ ಕೈಯಲ್ಲಿ ಮೊಂಡಗತ್ತಿ, ಹೆಗಲಿಗೆ ಜೋಳಿಗೆ ಹಾಕಿಕೊಂಡು ಹಣೆಗೆ ರಾಮನಾಮ ಹಾಕಿ ದೀಕ್ಷೆಯನ್ನು ನೀಡಲಾಗುತ್ತಿತ್ತು. ಆ ದಿನ ನೆರೆದ ಎಲ್ಲರಿಗೂ ಅನ್ನ ಸಂತರ್ಪಣೆ ಮಾಡಲಾಗುತ್ತಿತ್ತು, ಅಂದಿನಿಂದ ಅವನು ಮಕರ್ ಗ್ಯಾಲೋನಾಗಿ ಭಿಕ್ಷೆ ಬೇಡಬಹುದಾಗಿತ್ತು. ಆದರೆ ಇಂದು ಈ ದೀಕ್ಷೆ ಕಣ್ಮರೆಯಾಗಿದ್ದು, ಈ ದೀಕ್ಷೆಯನ್ನು ಪಡೆಯದೆ ಪಾರಂಪರಿಕ ಮೊಂಡ ವೃತ್ತಿಯನ್ನು ಅನುಸರಿಸುತ್ತಿರುವರು. ಪೂರ್ವಿಕರಿಂದ ಬಂದ ನಿಯಮದಂತೆ ಇಂದು ವರ್ಷಕ್ಕೆ ಒಮ್ಮೆಯಾದರೂ ಈ ವೇಷ ಹಾಕಿ ಭಿಕ್ಷೆ ಬೇಡುತ್ತಿರುವರು. ಮ್ಯಾಸಬೇಡರ ಗುಂಡೆತಲಾರು ಬೆಡಗಿನವರು ಮೊಂಡರು ನಮಗೆ ಅಣ್ಣ ತಮ್ಮರಾಗಬೇಕೆಂದು, ಎತ್ತು, ಎಮ್ಮೆ, ದನಗಳಿಗೆ ಮೊಂಡ ಎಂಬ ಹೆಸರುಗಳನ್ನಿಟ್ಟು ಇಂದು ವರ್ಷಕ್ಕೊಮ್ಮೆ ಈ ವೇಷ ಹಾಕಿ ಭಿಕ್ಷೆ ಬೇಡುವುದನ್ನು ಕಾಣಬಹುದಾಗಿದೆ. ಈ ಆಚರಣೆಯು ಸಹ ಕರ್‌ಕರ್ ಮುಂಡರಿಗೂ ಮತ್ತು ಮ್ಯಾಸಬೇಡರಿಗೂ ಇರುವ ಸಂಬಂಧವನ್ನು ತಿಳಿಸುತ್ತದೆ.

## ಜೀವನಾಧಾರವಾಗಿದ್ದ ಭಿಕ್ಷಾವೃತ್ತಿ

ಭಾರತೀಯ ಸಂಸ್ಕೃತಿಯಲ್ಲಿ ದಾನ-ಧರ್ಮ ಎಂಬ ಜೋಡು ನುಡಿಗಳು ಪುರಾತನ ಕಾಲದಿಂದಲೂ ಮಹತ್ವದ ಸ್ಥಾನ ಪಡೆದುಕೊಂಡು ಬಂದಿವೆ. ಸಮಾಜದ ಅನಾಥರಿಗೆ, ಅಶಕ್ತರಿಗೆ, ದೀನ ದಲಿತರಿಗೆ ಸಹಾಯ ಮಾಡುವುದಕ್ಕೆ ದಾನವೆಂದು ಹೇಳುವುದು. ಅನ್ನ, ಹಣ, ಬಟ್ಟೆ, ಬರೆ ಇತ್ಯಾದಿ ವಸ್ತುಗಳು ಈ ದಾನದಲ್ಲಿ ಕಂಡುಬರುತ್ತವೆ. ಪ್ರತ್ಯಕ್ಷವಾಗಿ ದಾನ ಅಥವಾ ಸಹಾಯ ಮಾಡದೆ ಪರೋಕ್ಷವಾಗಿ ಸಹಾಯ ಮಾಡುವುದಕ್ಕೆ ಧರ್ಮವೆಂದು ಹೇಳುವರು. ವರ್ಣಾಶ್ರಮ ಪದ್ಧತಿಯಲ್ಲಿ ಜನರು ಜೀವನೋಪಾಯಕ್ಕಾಗಿ ತಮ್ಮ ಕುಲದ ವೃತ್ತಿಗಳನ್ನು ಅನುಸರಿಸಿಕೊಂಡು ಬರುತ್ತಿದ್ದುದರಿಂದ ಭಿಕ್ಷಾವೃತ್ತಿ (ಆಯಾ ಅಥವಾ ವರ್ತನೆ ಪಡೆಯುವುದು) ಸಮಸ್ಯೆಯಾಗಿರಲಿಲ್ಲ. ಆದರೆ ಜಾತಿ ವ್ಯವಸ್ಥೆಯ ಅನುಸರಣೆಯಿಂದ ಶಿಷ್ಟರೆಂದು ಹೇಳಿಕೊಳ್ಳುವ ವೈದಿಕರು, ದಾನವನ್ನು ಗೌರವಯುತವಾಗಿ ಸ್ವೀಕರಿಸುತ್ತಾ ಬಂದರೆ, ಅದೇ ದಾನವನ್ನು ತಳಸಮುದಾಯದವರು ಸ್ವೀಕರಿಸಿದರೆ ಅದು ಭಿಕ್ಷೆ ಎಂದು ಕರೆಯಲಾಯಿತು. ಇದರಿಂದಾಗಿ ದಾನದಲ್ಲಿ ಸ್ತರ ವ್ಯವಸ್ಥೆ ಉಂಟಾಗಿ, ತಳವರ್ಗದವರಿಗೆ ದಾನ ಭಿಕ್ಷೆಯಾಗಿ ಬಂದಿರುವಂತಿದೆ.. ನಂತರದ ಮಧ್ಯಕಾಲೀನ ಮತ್ತು ಯುರೋಪಿಯನ್ನರ ಶೋಷಣೆಗಳಿಂದಾಗಿ ಈ ಭಿಕ್ಷೆಯು ತೀವ್ರಸ್ವರೂಪ ಪಡೆಯಿತು. ಜೊತೆಗೆ ಜೀವನ ನಿರ್ವಹಣೆಯ ವೃತ್ತಿಯಾಗಿಯೂ ರೂಪಿತವಾಯಿತು. ದಾನವು ಭಿಕ್ಷೆಯಾದಾಗ ಅದರ ಕಳಂಕವನ್ನು ಹೆಚ್ಚಾಗಿ ಅನುಭವಿಸಿದವರು ಅಲೆಮಾರಿ ಸಮುದಾಯಗಳು ಎಂದರೂ ತಪ್ಪಾಗಲಿಕ್ಕಿಲ್ಲ. ರಾಜ್ಯಾಡಳಿತದ ಅವತಿನಯಿಂದಾದ ಆರ್ಥಿಕ ತೊಂದರೆಯು ರಾಜನ ಕಾಯಕವನ್ನು ಮಾಡಲಾಗದೆ ಕೇವಲ ವೇಷವನ್ನು ಬಳಸಿಕೊಂಡು ಭಿಕ್ಷೆಬೇಡುವುದು ಅನಿವಾರ್ಯವಾಯಿತು. ಇಂತಹ ಭಿಕ್ಷಾ ವೃತ್ತಿಯಲ್ಲಿ ಕರ್‌ಕರ್‌ಮುಂಡ ಸಮುದಾಯ ತಮ್ಮ ಪೂರ್ವಜರ ಕಸುಬು ಎಂದು ಇಂದಿಗೂ ಅನುಸರಿಸಿಕೊಂಡು ಬರುತ್ತಲಿದೆ.

ಭಾರತದಲ್ಲಿ ಒಂದು ಅಂದಾಜಿನ ಪ್ರಕಾರ ೫೦ ಲಕ್ಷ ಭಿಕ್ಷುಕರಿದ್ದಾರೆ ಎಂದು ಅಂದಾಜಿಸಲಾಗಿದೆ. ಇಂಗ್ಲೆಂಡಿನ ಕಾನೂನಿನ ಪ್ರಕಾರ "ಯಾವ ಮನುಷ್ಯನಿಗೆ ಹೇಳಿಕೊಳ್ಳುವಂತಹ ಜೀವನಾಧಾರ ಇರುವುದಿಲ್ಲವೋ ಅಥವಾ ಯಾರು ತನ್ನ ವಿಷಯವಾಗಿ ನಂಬಲಾರ್ಹವಾದ, ನಿಖರವಾದ ವಿಷಯವನ್ನು ತಿಳಿಸುವುದಿಲ್ಲವೋ ಅವನು ನಿರ್ಗತಿಕ, ಜೀವನಾಧಾರ ಇಲ್ಲದವನು ಅಲೆಮಾರಿ ಅಥವಾ ಭಿಕ್ಷುಕ (ಜನಾರ್ಧನ:೨೦೧೨:೫) ಎಂದು ನೀತಿ ರೂಪಿಸಿದೆ. ಇಂತಹ ಕಾನೂನುಗಳಂತೆಯೇ "ಕರ್ನಾಟಕ ಭಿಕ್ಷಾಟನಾ ಕಾಯಿದೆ ೧೯೭೫ರ ಪ್ರಕಾರ ಸಾರ್ವಜನಿಕ ಸ್ಥಳಗಳಲ್ಲಿ

ಬೇಡುತ್ತಾ ಜೀವಿಸುವವನು ಭಿಕ್ಷುಕ, ಭಿಕ್ಷುಕನಿಗೆ ಉಚಿತವಾದ ಅಥವಾ ಪುಕ್ಕಟೆಯಾಗಿ ಕೊಟ್ಟುದೆಲ್ಲವೂ ಭಿಕ್ಷೆ ಅದು ಹಣವಾಗಿರಬಹುದು, ಆಹಾರವಾಗಿರಬಹುದು ಅಥವಾ ಬೆಲೆಯುಳ್ಳ ಯಾವುದೇ ಪದಾರ್ಥವೇ ಆಗಿರಬಹುದು. ಭಿಕ್ಷೆಯನ್ನು ಎತ್ತುವುದು ಎಂದರೆ ಬಾಗಿಲಿನಿಂದ ಬಾಗಿಲಿಗೆ ಹೋಗಿ ಯಾಚಿಸುವುದು, ಭಿಕ್ಷೆ ನೀಡಿ ಎಂದು ಬೇಡುವುದು ತನ್ನ ದೇಹದಲ್ಲಿರುವ ಗಾಯಗಳನ್ನು ಹುಣ್ಣಗಳನ್ನು ಕಾಯಿಲೆಗಳನ್ನು ಮತ್ತು ಅಂಗವಿಕಾರಗಳನ್ನು ತೋರಿಸಿ ಜನರ ಕನಿಕರವನ್ನು ಉದ್ರೇಕಿಸುವುದು. ಇವೆಲ್ಲವೂ ಭಿಕ್ಷೆಬೇಡುವ ವಿಧಾನ" (ಅದೇ: ೫–೬) ಎಂಬ ಮಾನದಂಡ ಹೊಂದಿದೆ.

ಭಿಕ್ಷೆ ಬೇಡುವ ವಿಧಾನಗಳನ್ನು ಮತ್ತು ಗುಣಲಕ್ಷಣಗಳನ್ನು ಆಧರಿಸಿ ಬಾಲಭಿಕ್ಷುಕರು, ಅಂಗವಿಕಲರು, ಮನೋವಿಕಲರು, ರೋಗಿಗಳು, ಸಧೃಢ ಭಿಕ್ಷುಕರು, ಧಾರ್ಮಿಕ ಭಿಕ್ಷುಕರು, ಕಪಟಿಗಳು, ಆದಿವಾಸಿ ಭಿಕ್ಷುಕರು, ಉದ್ಯೋಗಸ್ಥ ಭಿಕ್ಷುಕರು, ಅನುವಂಶೀಯ ಭಿಕ್ಷುಕರು ಎಂದು ವಿಂಗಡಿಸಬಹುದಾಗಿದೆ.

ಅನುವಂಶೀಯ ಭಿಕ್ಷುಕರು ವಂಶಪಾರಂಪರ್ಯವಾಗಿ ಭಿಕ್ಷೆಯನ್ನು ಬೇಡುವವರಾಗಿದ್ದು, ತಂದೆ ತಾಯಿಗಳಿಂದ ಮಕ್ಕಳಿಗೆ ಹಸ್ತಾಂತರಗೊಳ್ಳುವುದು. ಕರ್‌ಕರ್‌ಮುಂಡರ ಪೂರ್ವಿಕರು ಮೊಂಡ ವೇಷಧಾರಿಯಾಗಿ ಮನೆಮನೆಗೆ ತೆರಳಿ ಬೇಡಿ ತಿನ್ನುತ್ತಿದ್ದರಿಂದ ಆ ವೃತ್ತಿಯನ್ನು ಇಂದಿಗೂ ಕರ್‌ಕರ್ ಮುಂಡರು ಪಾಲಿಸುತ್ತಿರುವರು. ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿಯಲ್ಪಟ್ಟ ಕರ್‌ಕರ್‌ಮುಂಡರಿಗೆ ಭಿಕ್ಷಾವೃತ್ತಿ ಅನಿವಾರ್ಯವಾಗಿತ್ತು. ಇವರಲ್ಲಿ ಭಿಕ್ಷೆಯನ್ನು ಪಡೆಯಲು ಅಥವಾ ಬೇಡಲು ಮೊಂಡದೀಕ್ಷೆ ಎಂಬ ಆಚರಣೆಯನ್ನು ರೂಢಿಸಿಕೊಂಡಿದ್ದರು. ಭಿಕ್ಷೆಯೇ ಜೀವನ ನಿರ್ವಹಣೆಯ ಪ್ರಮುಖ ಮೂಲವಾಗಿದ್ದಾಗ ಸಮುದಾಯದ ಕುಲಸ್ಥರ ಸಮ್ಮುಖದಲ್ಲಿ ಭಿಕ್ಷೆಬೇಡುವ ಹಳ್ಳಿಗಳ ಸರಹದ್ದನ್ನು ಆಸ್ತಿಯಂತೆ ಹಂಚಿಕೆ ಮಾಡಲಾಗುತ್ತಿತ್ತು. ಇದಕ್ಕೆ ಅಡಿವೆವ್ವ ಎಂಬುವವರು ನೀಡಿರುವ ಮಾಹಿತಿ ಸಾಕ್ಷಿಯಾಗಿದೆ.

ವಿಜಯಪುರ ಜಿಲ್ಲೆ ಮುದ್ದೇಬಿಹಾಳ ತಾಲೂಕಿನ ಹೊನ್ನೂರು ಗ್ರಾಮದ ಹನುಮಂತಪ್ಪ ಕರ್‌ಕರ್‌ಮುಂಡಿಯ (ಅಡಿವೆವ್ವ ಅವರ ಪತಿ) ಪಾಲಿಗೆ ರಾಜನಗಟ್ಟಿ, ಏಳುಕೋಟಿ, ಸುಣ್ಣಗುಪ್ಪಿ, ಕ್ಯಾಸುಮಟ್ಟಿ, ಗ್ರಾಮಗಳಲ್ಲಿ ಹನುಮಂತಪ್ಪನ ಪರವಾಗಿ ಹೆಂಡತಿ ಭಿಕ್ಷೆ ಬೇಡುತ್ತಿರುವರು. ಅಡಿವೆವ್ವನ ನಿಗಾಣಿಗೆ (ಹನುಮಂತಪ್ಪನ ಸಹೋದರನ ಹೆಂಡತಿ) ಮಿಡಕನಟ್ಟಿ, ಮಾಸುಮಡ್ಡಿ, ಗಂಜಿನಾಳ, ಹಳ್ಳಿಗಳು ಆಸ್ತಿಯಾಗಿ ಹಂಚಿಕೆಯಾಗಿವೆ. ಈ ಹಳ್ಳಿಗಳಲ್ಲಿ ಮಾತ್ರ ಇವರು ಭಿಕ್ಷೆ ಬೇಡಬೇಕು. ಇದು ಭಿಕ್ಷೆಯ ವ್ಯಾಪ್ತಿಯಾಗಿದ್ದು

ಈ ಸರಹದ್ದನ್ನು ಮೀರುವಂತಿಲ್ಲ. ಒಂದು ವೇಳೆ ಮೀರಿ ಭಿಕ್ಷೆ ಬೇಡಿದರೆ ಕುಲಂಪಂಚಾಯ್ತಿಯ ಮೂಲಕ ತಪ್ಪು ದಂಡ ಕಟ್ಟಿಸಲಾಗುವುದು. ಈ ಭಿಕ್ಷಾವೃತ್ತಿಯಲ್ಲಿ ಇಂದಿಗೂ ಮಹಿಳೆಯರೆ ಹೆಚ್ಚು ತೊಡಗಿಕೊಂಡಿರುವುದು ವಿಶೇಷವಾಗಿದೆ. ಕರ್‌ಕರ್‌ಮುಂಡರ ಭಿಕ್ಷಾವೃತ್ತಿಯು ಹಲವು ವಿಶೇಷಗಳಿಂದ ಕೂಡಿದ್ದು, ಸುಗ್ಗಿ, ಜಾತ್ರೆ, ಹಬ್ಬ, ಉತ್ಸವ, ಸಂತೆ ಇತ್ಯಾದಿ ಜನಭರಿತ ದಿನಗಳಂದು ಭಿಕ್ಷೆಯನ್ನು ಬೇಡುವರು. ಹಿಂದಿನ ಭಿಕ್ಷಾಸರಹದ್ದಿನ ಕರಾರು ಪತ್ರಗಳು ನಾಶವಾಗಿರುವುದು ಚರಿತ್ರೆಯ ಮಿತಿಯಾಗಿದೆ.

**ಭಿಕ್ಷಾವೇಷ ಮತ್ತು ಬೇಡುವ ಕ್ರಮ :**

ಕರ್‌ಕರ್‌ಮುಂಡರು ಭಿಕ್ಷೆ ಬೇಡುವಾಗ ಹಲವು ವಿಶೇಷ ಕ್ರಮಗಳನ್ನು ಅನುಸರಿಸುವರು. ಪರಂಪರೆಯಿಂದ ಬಂದ ವೇಷವನ್ನು ಹಾಕಿಯೇ ಭಿಕ್ಷೆಬೇಡಬೇಕು. ಇದು ಸಮುದಾಯದ ಬಳುವಳಿಯಾಗಿರುವುದು. ಭಿಕ್ಷೆಬೇಡುವಾಗ ಹಾಕುವ ವೇಷವನ್ನು ವಸ್ಲ ಎನ್ನುವರು. ವಸ್ಲ ಹಾಕಿದವನಿಗೆ ಮಕರಿಗಾಡು ಅಥವಾ ಮಕರ್‌ಗ್ಯಾಲೋ ಎಂದು ಹೇಳುವರು. ಮೊಂಡ ದೀಕ್ಷೆ ನೀಡುವ ಮುಂಚಿತವಾಗಿ ಗಸ್‌ಕರಂ ಎಂಬ ತಂತ್ರವನ್ನು ಕಲಿಸುವರು. ಗಸ್‌ಕರಂ ಎಂದರೆ ಮುಂಜಾನೆ ಹಾಳು ಹೊಟ್ಟೆಗೆ ಬಿಸಿನೀರು ಅಥವಾ ಗಂಜಿಯನ್ನು ಸೇವಿಸಿ ಮನೆಗಳ ಮುಂದೆ ಭಿಕ್ಷೆಗೆ ಹೋದಾಗ ವಾಂತಿಮಾಡಿಕೊಳ್ಳುವ ಕಲೆಯಾಗಿದೆ. ಇದನ್ನು ಎರಡರಿಂದ ಮೂರು ತಿಂಗಳಲ್ಲಿ ಕಲಿಸುವರು. ಈ ವಿದ್ಯೆ ಕಲಿತ ಮೇಲೆ ಕೈ, ತಲೆ ಕೊಯ್ದುಕೊಂಡಾಗ ರಕ್ತಸ್ರಾವ ಆದಾಗ ಪ್ರಜ್ಞೆ ತಪ್ಪದಂತೆ ಕ್ರಮವಹಿಸುವ ಕಲೆಯನ್ನು ಕಲಿಯುವರು.

ಕರ್‌ಕರ್ ಮುಂಡರು ಭಿಕ್ಷೆಗೆ ಹೋಗುವಾಗ ಹಣೆಯಲ್ಲಿ ಏಕನಾಮವನ್ನು ಹಚ್ಚಿಕೊಳ್ಳುವರು. ಇದು ರಾಮನಾಮ ಎಂಬ ನಂಬಿಕೆ ಇಟ್ಟುಕೊಂಡಿರುವರು. ಹೆಗಲಿಗೆ ಐದು ಪದರುಗಳಿಂದ ಕೂಡಿದ ಧಾನ್ಯಗಳ ವಿಂಗಡಣೆಗೆಅನುಕೂಲಕರವಾಗಿರುವಂತಹ ಜೋಳುಗೆಯನ್ನು ಹಾಕಿಕೊಳ್ಳುವರು. ಉಣ್ಣೆಯಿಂದ ತಯಾರಿಸಿದ ಬೆಸರೂಪದ ಎಳೆಯಿಂದ ಕೂಡಿದ ವಸ್ಲವನ್ನು ಎದೆಗೆಹಾಕಿಕೊಳ್ಳುವರು. ಇದರಲ್ಲಿ ಅಂದು ರಾಜನ ಮುದ್ರೆಯ ನಾಣ್ಯಗಳನ್ನು ಹಾಕಲಾಗಿರುತ್ತಿತ್ತು. ಈ ಮುದ್ರೆ ಇವರ ಚರಿತ್ರೆಯನ್ನು ತಿಳಿಯಲು ದೊರೆಯದೇ ಇರುವುದು ವಿಪರ್ಯಾಸದ ಸಂಗತಿಯಾಗಿದೆ. ಬಲಗೈಯಲ್ಲಿ ಒಂದು ಮೊಂಡುಗತ್ತಿ ಮೂರು ಕಬ್ಬಿಣದ ಬಳೆಗಳನ್ನು ಹಾಕಿಕೊಂಡು ಅವುಗಳನ್ನು ಹಾಡಿಗೆ ಅನುಗುಣವಾಗಿ ಅಲುಗಾಡಿಸುತ್ತಾ ಭಿಕ್ಷೆ ಬೇಡುವುದು ಒಂದು ವಿಶೇಷ ಕಲೆಯಾಗಿದೆ. ಮುಖವನ್ನು ಹಲವು ಬಗೆಯ ಬಣ್ಣಗಳಿಂದ ಗುರುತು ಸಿಗದಂತೆ ಅಲಂಕರಿಸಿಕೊಂಡು ಭಿಕ್ಷೆ ಬೇಡುವರು.

ಕರ್‌ಕರ್ ಮುಂಡರು ವಸ್ತ್ರವನ್ನು ಹಾಕಿಕೊಂಡು ತಮ್ಮ ಸರಹದ್ದಿನ ಹಳ್ಳಿಗಳಲ್ಲಿ ಭಿಕ್ಷೆ ಬೇಡುವಾಗ ಮುಂಜಾನೆಯೇ ಎದ್ದು ದೈನಂದಿನ ಕ್ರಿಯಾಚಟುವಟಿಕೆಗಳನ್ನು ಮುಗಿಸಿ ಮುಖಕ್ಕೆ ಬಣ್ಣ ಹಚ್ಚಿಕೊಂಡು ಹಾಳುಹೊಟ್ಟೆಗೆ ಒಂದು ಲೋಟ ಬಿಸಿ ನೀರು ಅಥವಾ ಗಂಜಿಯನ್ನು ಸೇವಿಸಿ ಹೊರಡುವರು. ಮನೆ–ಮನೆಗೆ ಹೋಗಿ ಭಿಕ್ಷೆ ಬೇಡುವರು. ಭಿಕ್ಷೆ ನೀಡದಿದ್ದಾಗ ಸಸ್ಯಹಾರಿಗಳ ಮನೆಯಾದರೆ ಕೈಯನ್ನು ಕೊಯ್ದುಕೊಂಡು ಆರಕ್ತವನ್ನು ಮಣ್ಣಿನಲ್ಲಿ ಕಲಸಿ ಅವರ ಮೇಲೆ ಎರಚುವರು. ರಕ್ತಕ್ಕೆ ಹೆದರಿದ ಆ ಮನೆಯವರು ತಕ್ಷಣಕ್ಕೆ ಭಿಕ್ಷೆ ನೀಡುವರು. ಇನ್ನೂ ಮಾಂಸಾಹಾರಿ ಮನೆತನದವರಾದರೆ ತಾವು ಕಲಿತ ಕಸ್‌ಗರಂ ವಿದ್ಯೆಯಿಂದ ಮನೆಯ ಮುಂದೆ ಅಸಹ್ಯಕರವಾಗಿ ವಾಂತಿ ಮಾಡಿದಾಗ ಇದನ್ನು ಸಹಿಸದ ಜನರು ಬೇಗ ಭಿಕ್ಷೆ ನೀಡುವರು. ತಮಿಳುನಾಡಿನ ಕೆಲ ಭಾಗದಲ್ಲಿ ಈ ಸಮುದಾಯದವರು ಇಟ್ಟಿಗೆ ಅಥವಾ ಕಲ್ಲಿನಿಂದ ಎದೆಗೆ ಮತ್ತು ತಲೆಗೆ ಹೊಡೆದುಕೊಂಡು ರಕ್ತವನ್ನು ಭರಿಸಿಕೊಳ್ಳುವರು. ಇದರಿಂದ ಜನರನ್ನು ಭಯಭೀತರನ್ನಾಗಿ ಮಾಡಿ ಭಿಕ್ಷೆ ಪಡೆಯುವರು. ಇವರು ವಸ್ತ್ರವನ್ನು ಹಾಕಿ ಸಂತೆ, ಜಾತ್ರೆ, ಉತ್ಸವ, ಹಬ್ಬ ಇತ್ಯಾದಿ ಜನಸೇರುವ ಸಂದರ್ಭಗಳಲ್ಲಿ ಭಿಕ್ಷೆ ಬೇಡುವುದು ಸಹಜವಾದ ಇಂತಹ ಸಂದರ್ಭಗಳಲ್ಲಿ ಕತ್ತಿಯಿಂದ ತಲೆ ಕೊಯ್ದುಕೊಂಡು ನೆತ್ತಿಯ ನೆತ್ತರು ನೆಲದ ಮೇಲೆ ವೃತ್ತಾಕಾರವಾಗಿ ಗಟ್ಟಿಯಾಗುವವರೆಗೂ ರಕ್ತಸ್ರಾವ ಮಾಡುತ್ತಿದ್ದರು. ರಕ್ತಸ್ರಾವ ಹೆಚ್ಚಾಗಿ ಪ್ರಜ್ಞೆ ತಪ್ಪಿ ನೆಲಕ್ಕೆ ಬೀಳುತ್ತಿದ್ದ ನಿದರ್ಶನಗಳಿದ್ದವು. ಅಂತಹ ಸಮಯದಲ್ಲಿ ನೆರೆದ ಜನರು ತಲೆಗೆ ನೀರು ಹಾಕಿ ಅವಳನ್ನು ಎಚ್ಚರಿಸಿದಾಗ, ತಲೆಯ ಗಾಯವು ನೀರಿನಿಂದ ಕೀವು ಆಗಿ ಸಾವನ್ನಪ್ಪಿರುವ ನಿದರ್ಶನಗಳು ಈ ಸಮುದಾಯದಲ್ಲಿವೆ. ಭಿಕ್ಷೆ ಪಡೆಯದೆ ಆ ಮನೆಯಿಂದ ಒಂದು ಹೆಜ್ಜೆಯನ್ನು ಮುಂದಿಡದ ಮೊಂಡುತನ ಇವರಲ್ಲಿತ್ತು. ಈ ಹಠವು ರಕ್ತ ಕಳೆದುಕೊಂಡರೂ ಚಿಂತೆಯಿಲ್ಲ ಜೀವನೋಪಾಯಕ್ಕೆ ಭಿಕ್ಷೆ ಬೇಕು ಎನ್ನುವಂತಿತ್ತು. ಇವರ ಹಠಮಾರಿತನವು ಜನರಿಗೆ ಕಿರಿಕಿರಿ ಉಂಟುಮಾಡುತ್ತಿದ್ದರಿಂದ ಕಿರಿಕಿರಿ ಪದವು ಕರೆಕರೆ ಎಂದೂ ಕರೆಯಲ್ಪಡುತ್ತಾ, ಅಂತಿಮವಾಗಿಆಂಗ್ಲ ಭಾಷೆಯಲ್ಲಿನ ಅಪಭ್ರಂಶವು ಕರ್‌ಕರ್ ಎಂದು ಕರೆಯಲ್ಪಟ್ಟಿತ್ತು. ಈ ಹಠಮಾರಿ ತನದ ಭಿಕ್ಷಾ ಧೋರಣೆಯೇ ಕರ್‌ಕರ್‌ಮುಂಡ ಎಂಬ ಹೆಸರು ಈ ಸಮುದಾಯಕ್ಕೆ ಬರಲು ಕಾರಣವಾಗಿದೆ.

ಕರ್‌ಕರ್‌ಮುಂಡ ಸಮುದಾಯದವರು ವರ್ತನೆ ಪಡೆಯುವುದನ್ನು ಅನ್ಯ ಸಮದಾಯದ ಜನರು ಭಿಕ್ಷೆ ಎಂದು ಪರಿಗಣಿಸುವರು. ಇದು ಭಿಕ್ಷೆ ಅಲ್ಲ, ವರ್ತನೆ ಪಡೆಯುವುದು ನಮ್ಮ ಹಕ್ಕು, ಜನರು ನೀಡುತ್ತಿದ್ದ ವರ್ತನೆ ಇಂದು ಭಿಕ್ಷೆ ಎಂದು ತಪ್ಪಾಗಿ ಕರೆಯಲಾಗುತ್ತಿದೆ ಎಂಬುದು ಈ ಸಮುದಾಯದವರ ಅಭಿಪ್ರಾಯವಾಗಿದೆ.

ಇವರಲ್ಲಿ ವರ್ತನೆಯನ್ನು ಕುರಿತಂತೆ ಒಂದು ಐತಿಹ್ಯ ಇರುವುದನ್ನು ಕಾಣಬಹುದಾಗಿದೆ. ರಾಮಾಯಣ ಕಾಲದಲ್ಲಿ ರಾಮನರಾಜ್ಯ ಮಳೆ ಬೆಳೆಯಿಂದ ಸೌಖ್ಯವಾಗಿತ್ತು. ಆಗ ಜನರು ಸುಖ-ಭೋಗಗಳನ್ನು ಸವಿಯುತ್ತಾ ದುರಾಹಂಕಾರಿಗಳಂತೆ ವರ್ತಿಸತೊಡಗಿದರು. ಆಗ ರಾಮ ಇವರ ದುರಾಹಂಕಾರವನ್ನು ಮಟ್ಟಹಾಕಲು ಕೃಷಿಯಲ್ಲಿ ನೆರವಾಗಿದ್ದ ಜಾನುವಾರಗಳನ್ನೆಲ್ಲ ಒಂದು ಕಡೆ ಕೂಡಿಸಿ ಕಾವಾಲು ಭಟರನ್ನು ನೇಮಿಸಿದನು. ಒಂದು ದಿನ ರಾಮ ಕಾರ್ಯನಿಮಿತ್ತ ಬೇರೆ ಕಡೆ ಪ್ರಯಾಣ ಬೆಳೆಸಬೇಕಾಯಿತು. ಆಗ ಕಾವಲು ಭಟರನ್ನು ಕರೆಸಿ ನಾನು ಬರುವವರೆಗೂ ಅವುಗಳನ್ನು ಜನರಿಗೆ ಧಕ್ಕದಂತೆ ಸುರಕ್ಷಿತವಾಗಿ ಕಾಯಬೇಕು ಎಂದು ಅಜ್ಞೆಮಾಡಿ ಪ್ರಯಾಣ ಬೆಳೆಸಿದ. ರಾಮಹೋದ ನಂತರ ಚೆನ್ನಾಗಿ ಮಳೆ ಬಂದಿದ್ದ ಕಾರಣದಿಂದ ಭೂಮಿ ಊಳಲು ಎತ್ತುಗಳು ಅನಿವಾರ್ಯವಾಗಿದ್ದವು. ಆಗ ಕೃಷಿಕರೆಲ್ಲ ಸೇರಿ ಕಾವಲು ಭಟರ ಬಳಿಗೆ ಹೋಗಿ ತಮ್ಮ ಅಳಲನ್ನು ತೋಡಿಕೊಂಡರು. ಮನನೊಂದು ಕಾವಲು ಭಟರು ಉಳುಮೆಗೆ ಎತ್ತುಗಳನ್ನು ಬಿಟ್ಟುಕೊಟ್ಟರು. ಉಳುಮೆ ಕಾರ್ಯಮುಗಿದ ಮೇಲೆ ಕಾವಲು ಭಟರ ವಶಕ್ಕೆ ತಂದೊಪ್ಪಿಸಿದರು. ಕೆಲವು ದಿನಗಳ ನಂತರ ರಾಮನು ಯಾತ್ರೆ ಮುಗಿಸಿ ಹಿಂದಿರುಗಿ ಬಂದು ನೊಡುತ್ತಿರುವಾಗ ಜನರ ಫಸಲು ಚೆನ್ನಾಗಿದ್ದವು. ಇವರ ಅಹಂಕಾರವನ್ನು ದಮನಮಾಡಲು ನಾನು ಎತ್ತುಗಳನ್ನೆಲ್ಲ ಕೂಡಿಹಾಕಿಸಿದ್ದೆನು. ಇವರು ಹೇಗೆ ನೆಲವನ್ನು ಹೂಳಿ ಬೆಳೆ ಬೆಳೆದಿದ್ದಾರೆ ಎಂದು ಸಂಶಯಿಸತೊಡಗಿದನು. ಆಗ ಕಾವಾಲು ಭಟರನ್ನು ಗದರಿಸಿ ಕೇಳಿದಾಗ ಅವರು ನಡೆದ ಪ್ರಸಂಗವನ್ನೆಲ್ಲ ರಾಮನಿಗೆ ಒಪ್ಪಿಸಿದರು. ಇದರಿಂದ ಕೋಪೋದ್ರಿಕ್ತನಾದ ರಾಮನು ಕಾವಲು ಭಟರ ಕೈ ಕಾಲುಗಳನ್ನು ಕತ್ತರಿಸಲು ಆದೇಶಿಸಿದನು. ಕೈಕಾಲು ಕಳೆದುಕೊಂಡು ಅಂಗಊನವಾದ ಇವರ ಮೇಲೆ ರಾಮನ ಮನಸ್ಸು ಪರಿವರ್ತನೆಯಾಗಿ ದಯೆ ತೋರಲು ಮುಂದಾದನು. ಇದಕ್ಕಾಗಿ ರಾಮನು ಕೈಕಾಲು ಕಳೆದುಕೊಂಡವರನ್ನು ಮತ್ತು ಜನರನ್ನು ಕರೆಸಿ ಇವರ ಕೈ ಕಾಲುಗಳನ್ನು ಕಳೆದುಕೊಳ್ಳಲು ನೀವು ಕಾರಣ. ರಾಜಾಜ್ಞೆಯನ್ನು ಮೀರಿ ನಿಮಗೆ ಸಹಾಯ ಮಾಡಿರುವರು ಅದರಿಂದ ಈ ಸ್ಥಿತಿ ತಂದುಕೊಂಡಿದ್ದಾರೆ. ಅದಕ್ಕಾಗಿ ಪ್ರತಿವರ್ಷವು ನೀವು ಇವರಿಗೆ ನೀವು ಬೆಳೆದ ಬೆಳೆಯಲ್ಲಿ ಜೀವನಾಂಶಕ್ಕಾಗಿ ಒಂದು ಭಾಗ ಮೀಸಲಿಟ್ಟು ನೀಡಬೇಕು ಎಂದು ರಾಮನು ಆದೇಶಿಸಿದನಂತೆ. ಅಂದಿನಿಂದ ಪ್ರತಿ ವರ್ಷ ಜನರು ಇವರಿಗೆ ವರ್ತನೆ ನೀಡುತ್ತಾ ಬಂದಿರುವರು. ರಾಮನ ಮಾತಿಗೆ ತಪ್ಪಿ ನಡೆದಿದ್ದರಿಂದ ಕೈಕಾಲು ಕಳೆದುಕೊಂಡು ಅಂಗ ಊನವಾಗಿ ಮೊಂಡರಾದವು ಇದರಿಂದಾಗಿ ಬೇಡಿ ತಿನ್ನುವ ಶಿಕ್ಷೆಗೆ ಗುರಿಯಾದೆವು ಎಂದು ಯಂಕಪ್ಪ ಎಂಬ

ಮಾಹಿತಿದಾರ ತಿಳಿಸಿರುತ್ತಾರೆ. ಇದೆ ರೀತಿ ಹಲವು ಕಥೆಗಳಿದ್ದು ಇದು ಭಿಕ್ಷೆ ಅಲ್ಲ ಹಿಂದಿನ ಕಾಲದ ಸುಗ್ಗಿಯ ಸಂದರ್ಭದಲ್ಲಿ ನೀಡುತ್ತಿದ್ದ ಆಯಾ ಇಂದು ಭಿಕ್ಷೆಯಾಗಿದೆ ಎಂದು ಹೇಳಬಹುದಾಗಿದೆ.

ಕರ್‌ಕರ್‌ಮುಂಡ ಸಮುದಾಯವು ಸ್ಥಿತ್ಯಂತರವಾಗಿರುವುದರಿಂದ ಭಿಕ್ಷುಕ ವೃತ್ತಿಯು ವರ್ಷಕ್ಕೆ ಒಂದು ಬಾರಿ ವೇಷ ಹಾಕಿ ಬೇಡುವುದನ್ನು ಕಾಣಬಹುದು. ಆರ್ಥಿಕವಾಗಿ ತೀರ ಹಿಂದುಳಿದವರು ದಿನಂಪ್ರತಿ ಸಂತೆ, ಹಬ್ಬ, ಹಳ್ಳಿ, ಉತ್ಸವ, ಜಾತ್ರೆಗಳು ಮುಂತಾದ ಜನಭರಿತ ಸ್ಥಳಗಳಲ್ಲಿ ಪಾರಂಪರಿಕ ಭಿಕ್ಷಾವೃತ್ತಿಯಲ್ಲಿ ತೊಡಗಿರುವರು.ಮತ್ತೆ ಕೆಲವರು ಈ ವೃತ್ತಿ ಬದಲಾಗಿ ಪರ್ಯಾಯ ವೃತ್ತಿಗಳಾದ ಹಂದಿ ಸಾಕಾಣಿಕೆ, ಕೂದಲು, ಗುಜರಿ ವ್ಯಾಪಾರ ಇತ್ಯಾದಿ ವೃತ್ತಿಗಳನ್ನು ಮಾಡುತ್ತಿರುವರು. ಈ ಪಾರಂಪರಿಕ ವೃತ್ತಿಯನ್ನು ಇಂದು ಮಹಿಳೆಯರೇ ಹೆಚ್ಚು ಅನುಸರಿಸಿಕೊಂಡು ಬರುವುದು ವಿಶೇಷವೆನ್ನಬಹುದಾಗಿದೆ. ಈ ಮೇಲ್ಕಂಡ ರೀತಿಯಲ್ಲಿ ಇವರ ಭಿಕ್ಷಾವೃತ್ತಿಯ ಅನನ್ಯತೆಯನ್ನು ತಿಳಿಯಬಹುದಾಗಿದೆ.

**ಕರ್‌ಕರ್ ಮುಂಡರ ಬೇಟೆ :**

ಅಲೆಮಾರಿ ಸಮುದಾಯಗಳು ತಿರುಗಾಟದ ಬದುಕಿಗೆ ನಾಂದಿಯಾಡಿ ನೆಲೆ ನಿಂತಿರುವುದನ್ನು ಕಾಣುತ್ತೇವೆ. ಆ ಪ್ರದೇಶವನ್ನು ಕರ್ನಾಟಕದಲ್ಲಿ ಬಯಲು ಸೀಮೆ ಎನ್ನಲಾಗುವುದು. ಇಂತಹ ಸಮುದಾಯಗಳು ಬೇಟೆಯನ್ನು ಆಹಾರ ಕ್ರಮದ ಒಂದು ಭಾಗವಾಗಿ ಸ್ವೀಕರಿಸುವುದನ್ನು ಕಾಣಬಹುದು.

ಆದಿಮಾನವ ಆಹಾರಕ್ಕಾಗಿ ಬೇಟೆಯಾಡುತ್ತಿದ್ದ ಅವಧಿಯ ನಂತರ ಕೃಷಿ ಹಂತಕ್ಕೆ ತಲುಪಿದನು. ಕೃಷಿ ಹಂತಕ್ಕೆ ತಲುಪಿದಾಗ ಆತ್ಮ ರಕ್ಷಣೆಗಾಗಿಯೂ, ಸಾಮ್ರಾಜ್ಯ ಕಾಲದಲ್ಲಿ ಮೋಜು ಜೂಜುಗಳಿಗಾಗಿಯೂ, ಅಂತಿಮವಾಗಿ ಸಂಪ್ರದಾಯಕ್ಕಾಗಿಯೂ ಇಂದು ಬೇಟೆಯನ್ನು ಮುಂದುವರೆಸಿಕೊಂಡು ಬಂದಿರುವುದನ್ನು ಕಾಣಬಹುದು. ಬೇಟೆಯ ಕಾರಣಗಳು ಬದಲಾದಂತೆ ಆಯುಧಗಳ ಬಳಕೆಯು ಬದಲಾವಣೆ ಹೊಂದಿವೆ. ಪ್ರಾಚೀನ ಕಾಲದ ಮಾನವ ಕಲ್ಲಿನ ಮತ್ತು ಮರದ ಆಯುಧಗಳನ್ನು ಬಳಸಿ ಬೇಟೆಯಾಡುತ್ತಿದ್ದರೆ. ಶಿಲಾಯುಗದ ನಂತರದಲ್ಲಿ ಕಬ್ಬಿಣದ ಆಯುಧಗಳನ್ನು ಬಳಸತೊಡಗಿದ. ಭರ್ಚಿ, ಈಟಿ, ಕುಡುಗೋಲು, ಮಚ್ಚು, ಬಲೆ, ಕೋವಿ, ಮದ್ದು, ಸಿಡಿ, ಕತ್ತರಿ, ಗಾಳ, ಪಾಚಿ, ಜೊತೆಗೆ ಸಾಕಿದ ನಾಯಿಗಳ ಮೂಲಕವೂ ಬೇಟೆಯಾಡತೊಡಗಿದನು. ಇತ್ತೀಚಿಗೆ ಹಣೆ ಬ್ಯಾಟರಿ ತಂತಿ ಉರುಲು, ಬಂಕದ ಬಲೆ, ಬಳಸುವುದನ್ನು ಕಾಣಬಹುದು.

"ಪ್ರಾಣಿಗಳ ಚಲನವಲನ, ಆಹಾರ ಕ್ರಮ, ವಾಸಿಸುವ ಜಾಗಗಳಾದ ಗವಿ,

ಪೊಟರೆ, ಪೊದೆ ಬಿಲ, ಮುಂತಾದವುಗಳನ್ನು ಗುರುತಿಸಿ ಅವುಗಳ ದೌರ್ಬಲ್ಯವನ್ನು ಬಳಸಿಕೊಂಡು, ಸುಲಭವಾಗಿ ತಮ್ಮ ತಂತ್ರಕ್ಕೆ ಅಥವಾ ವಿಧಾನಕ್ಕೆ ಸಿಲುಕಿಕೊಳ್ಳುವಂತೆ ಅಥವಾ ಈಡಾಗುವಂತೆ ಮಾಡುವ ಕಲೆಯೇ ಬೇಟೆ" (ದೇವೇಂದ್ರಕುಮಾರ ಹಕಾರಿ, ಸಂಧ್ಯಾರೆಡ್ಡಿ:೨೦೦೦:೧) ಎಂದು ಬೇಟೆಯ ಕುರಿತು ವ್ಯಾಖ್ಯಾನ ನೀಡಿರುವರು. ಮಾನವ ಆಹಾರಕ್ಕಾಗಿ ಮೊಲ, ಜಿಂಕೆ, ಕಡವೆ, ಉಡ, ಕಾಡು ಹಂದಿಗಳನ್ನು ಬೇಟೆಯಾಡುತ್ತಿದ್ದನು. ತನ್ನ ರಕ್ಷಣೆಗಾಗಿ ತಾನು ಸಾಕಿದ ಪ್ರಾಣಿಗಳ ರಕ್ಷಣೆ ಮತ್ತು ಬೆಳೆಗಳ ರಕ್ಷಣೆಗಾಗಿ ಆನೆ, ಹುಲಿ, ಸಿಂಹ, ಕರಡಿಗಳನ್ನು ಬೇಟೆಯಾಡುತ್ತಿದ್ದನು. ಮನರಂಜನೆಗಾಗಿ, ಪ್ರತಿಷ್ಠೆಯ ಸಂಕೇತವಾಗಿ ಅರಸೊತ್ತಿಗೆಯ ಮಾನವರು ಮತ್ತು ಮನರಂಜನೆ ನೀಡುತ್ತಾ ಜೀವನ ನಡೆಸುದ್ದ ಜನರು ಆನೆ, ಹುಲಿ, ಕರಡಿ, ಸಿಂಹ, ಕೋತಿ ಹಾವುಗಳನ್ನು ಬೇಟೆಯಾಡುತ್ತಿದ್ದರು. ಮತ್ತೆ ಕೆಲವರು ಪ್ರಾಣಿಗಳನ್ನು ಸಾಯಿಸದೇ ಅವುಗಳನ್ನು ಪಳಗಿಸಿ ಮನರಂಜನೆಯ ಭಾಗವಾಗಿ ಬಳಸುತ್ತಾ ಜೀವನ ನಿರ್ವಹಿಸುತ್ತಿದ್ದ ವರ್ಗಗಳು ಇಂದಿಗೂ ಜೀವಂತವಾಗಿವೆ. ಕರಡಿಕಲಂದರ್, ಮಾನ್‌ಗಾರುಡಿ ಸಮುದಾಯಗಳು ಇದಕ್ಕೆ ಜ್ವಲಂತ ನಿದರ್ಶನವಾಗಿವೆ. ಈ ಮೂರು ಕಾರಣಗಳಾಗಿ ಹೊರತಾಗಿಯೂ ಇಂದು ಸಂಪ್ರದಾಯಕ್ಕಾಗಿ ಬೇಟೆಯು ಜಾರಿಯಲ್ಲಿದೆ.

ಬೇಟೆ ನಿಷೇಧ, ಪ್ರಾಣಿ ವದೆ ತಡೆ ಕಾಯ್ದೆಗಳನ್ನು ಮೀರಿ ಸಂಪ್ರದಾಯ ಕಾರಣದಿಂದ ಬೇಟೆ ಅಸ್ತಿತ್ವದಲ್ಲಿದೆ. ಪೂರ್ವಿಕರ ಆಶಯಗಳನ್ನು ಮುಂದುವರೆಸುವ ಸಲುವಾಗಿ ಬೇಟೆ ಸಂಪ್ರದಾಯ ಜಾರಿಯಲ್ಲಿದ್ದು, ಯುಗಾದಿ, ದೀಪಾವಳಿ, ಹಬ್ಬಗಳಲ್ಲಿ ಬೇಟೆಯಾಡಲೇ ಬೇಕು ಎಂಬ ನಿಯಮದೊಂದಿಗೆ ಬೇಡ, ಸಮುದಾಯ ಸೇರಿದಂತೆ ಇತರೆ ಅಲೆಮಾರಿ ಸಮುದಾಯಗಳು ಬೇಟೆಯಾಡುತ್ತಿವೆ. ಸಂಪ್ರದಾಯ ಕಾರಣದಿಂದ ಗ್ರಾಮ ದೇವತೆಗಳಿಗೆ ಹರಕೆಯ ರೂಪದಲ್ಲಿ ಕುರಿ, ಕೋಳಿ, ಕೋಣ, ಓತ, ಮೇಕೆಗಳನ್ನು ಬಲಿ ನೀಡುತ್ತಿರುವರು. ಬಲಿಯನ್ನು ಬೇಟೆ ಎಂಬ ಪರ್ಯಾಯ ಪದದಿಂದ ಕರೆಯುತ್ತಿರುವರು. ಈ ನಾಲ್ಕು ಕಾರಣಗಳಿಂದ ಆದಿಮಾನವನಿಂದ ಹಿಡಿದು ಆಧುನಿಕ ಮಾನವನ ಜೀವನ ವಿಧಾನದಲ್ಲಿ ಬೇಟೆ ಅವಿಭಾಜಿತವಾಗಿದೆ.

ಬೇಟೆಗಾರಿಕೆಯು ನೈಪುಣ್ಯತೆಯಿಂದ ಕೂಡಿದ್ದು, ಜಾಣ್ಮೆ, ತಂತ್ರ ಮರೆತರೆ ಜೀವಕ್ಕೆ ಅಪತ್ತು ಸವಾಲಾಗಿ ಬರುತ್ತಿತ್ತು. ಬೇಟೆಯಾಡುವುದು ಎದೆಗಾರಿಕೆ ಧೈರ್ಯದ ಸಂಕೇತವಾಗಿರುವುದು. ಇದು ವ್ಯಕ್ತಿಯ ಸಾಮಾಜಿಕ ಸ್ಥಾನಮಾನವನ್ನು ನಿರ್ಧರಿಸುತ್ತಿತ್ತು. ಆದಕ್ಕಾಗಿ ವ್ಯಕ್ತಿಯ ಜೀವನದಲ್ಲಿ ಬೇಟೆ ನಿರಂತರ ಪ್ರವೃತ್ತಿಯಾಗಿ ಕ್ರಿಯಾಶೀಲವಾಗಿರುತ್ತಿತ್ತು. ಒಂದೆ ವೃತ್ತಿಯಾಗಿದ್ದ ಬೇಟೆ ಇಂದು ಪ್ರವೃತ್ತಿ, ಹವ್ಯಾಸದ ಸ್ವರೂಪವನ್ನು ಪಡೆದಿದೆ.

ಬೇಟೆಗಾರ ಎಂದು ಮನ್ನಣೆ ಪಡೆಯಬೇಕೆಂದರೆ ವ್ಯಕ್ತಿ ಪ್ರಾಣಿಗಳ ಚಲನ-ವಲನ, ಋತುಮಾನಗಳ ಅರಿವು, ಯಾವ ಋತುಮಾನದಲ್ಲಿ ಯಾವ ಪ್ರಾಣಿ ದಷ್ಟ ಪುಷ್ಟವಾಗಿರುತ್ತವೆ, ಯಾವಾಗ ಗವಿ, ಪೊಟರೆ, ಗೂಡು, ಪೊದೆಯಿಂದ ಹೊರ ಬರುತ್ತವೆ. ಯಾವ ರೀತಿಯ ಆಹಾರ ತಿನ್ನುತ್ತವೆ ಎಂಬ ಇತ್ಯಾದಿ ಜ್ಞಾನವನ್ನು ಹೊಂದಿದ ವ್ಯಕ್ತಿ ಬೇಟೆಗಾರನಾಗಲು ಸಾಧ್ಯವಾಗುತ್ತದೆ. ಇಂತಹ ಜಾಣ್ಮೆ ಕೌಶಲ್ಯ ಬುಡಕಟ್ಟು ಸಮುದಾಯಗಳಿಗೆ ಪರಂಪರಾಗತವಾಗಿ ಬಂದಿರುತ್ತವೆ.

ಪುರಾತನ ಕಾಲದಿಂದಲೂ ಕರ್‌ಕರ್ ಮುಂಡ ಸಮುದಾಯ ಇಂತಹ ಬೇಟೆ ಸಂಸ್ಕೃತಿಯನ್ನು ಬೆಳೆಸಿ ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದು. ಈ ಸಮುದಾಯವು ಬೇಟೆಯನ್ನು ಆಹಾರ ಮತ್ತು ಹವ್ಯಾಸಿ, ಸಂಪ್ರದಾಯವಾಗಿಯೂ ಪಾಲಿಸುತ್ತಾ ಬಂದಿದೆ. ಇವರ ಬದುಕಿನಲ್ಲಿನ ಬೇಟೆಯ ಪಾತ್ರ ಮತ್ತು ಬೇಟೆಯ ಜ್ಞಾನವನ್ನು ಅರಿಯುವುದು ಪ್ರಮುಖವೆನಿಸುತ್ತದೆ.

ಕರ್‌ಕರ್ ಮುಂಡ ಸಮುದಾಯದವರು ಅಲೆಮಾರಿಯಾಗಿ ಜೀವನ ನಡೆಸುತ್ತಿದ್ದ ಕಾಲದಲ್ಲಿ ಹಳ್ಳಿಗಳ ಹೊರ ವಲಯದಲ್ಲಿ ಬೀಡು ಬಿಡುತ್ತಿದ್ದರು. ಮುಂಜಾನೆಯಿಂದ ಅಪರಾಹ್ನದವರೆಗೆ ಭಿಕ್ಷಾಟನೆ ಮಾಡುತ್ತಾ ಉಳಿದ ಸಮಯವನ್ನು ಬೇಟೆಯಲ್ಲಿ ಕಳೆಯುತ್ತಿದ್ದರು. ಬೇಟೆಯು ಆಹಾರಕ್ಕೆ ಅನಿವಾರ್ಯವಾಗಿದ್ದ ಕಾರಣದಿಂದ ಇದನ್ನು ಜೀವನ ಕ್ರಮದ ಒಂದು ಭಾಗವಾಗಿ ಅಳವಡಿಸಿಕೊಂಡಿದ್ದರು. ಮೂಲತಃ ಮಾಂಸಹಾರಿಗಳಾಗಿದ್ದರಿಂದ ತಾತ್ಕಾಲಿಕ ನೆಲೆಯಲ್ಲಿ ಲಭ್ಯವಿದ್ದ ಪ್ರಾಣಿ, ಪಕ್ಷಿಗಳನ್ನು ಋತುಮಾನಕ್ಕೆ ಅನುಗುಣವಾಗಿ ಬೇಟೆಯಾಡುತ್ತಿದ್ದರು. ಕರ್‌ಕರ್ ಮುಂಡರ ಬೇಟೆ ಸಂಸ್ಕೃತಿಯ ತಂತ್ರಗಾರಿಕೆಗಳನ್ನು ಬೇಟೆಯ ಅವನತಿಯ ಸಂದರ್ಭದಲ್ಲಿ ತಿಳಿಯುವುದು ಉಪಯುಕ್ತವೆನಿಸುತ್ತದೆ.

ಬೇಟೆಯನ್ನು ಪ್ರಾಣಿ ಮತ್ತು ಪಕ್ಷಿಗಳನ್ನಾಗಿ ವಿಂಗಡಿಸಿಕೊಂಡು ತಂತ್ರಗಾರಿಕೆ ತಿಳಿಯುವುದು ಸೂಕ್ತವೆನಿಸುತ್ತದೆ. ಮೊಲ, ಹಂದಿ, ಮೀನು, ಕಾಡುಹಂದಿ, ಉಡ, ತಾವಲ್ಲಿ(ಆಮೆ), ಈಣಚಿ(ಅಳಿಲು), ಮುಂಗೂಸಿ, ಮುಳ್ಳುಹಂದಿಗಳನ್ನು ಬೇಡೆಯಾಡುವುದನ್ನು ಕಾಣಬಹುದು.

**ಕುಂದ್ಲಿಯಾಟಮು (ಮೊಲದ ಬೇಟೆ) :**

ಕರ್‌ಕರ್ ಮುಂಡರಲ್ಲಿ ಮೊಲದ ಬೇಟೆ ಪ್ರಧಾನವಾಗಿದ್ದು, ಎಲ್ಲಡೆಯೂ ದೊರೆಯುವಂತಹ ಪ್ರಾಣಿಯಾಗಿರುವುದರಿಂದ ಈ ಬೇಟೆಯ ಪ್ರಾಧಾನ್ಯತೆ ಪಡೆದಿದೆ.

ಮೊಲವು ಅತ್ಯಂತ ಚುರುಕಾದ ಪ್ರಾಣಿಯಾಗಿದ್ದು, ಮಾನವ ಮತ್ತು ಪ್ರಾಣಿಗಳ ದೂರದ ಶಬ್ದ ಮತ್ತು ವಾಸನೆಯನ್ನು ಅತೀ ಸೂಕ್ಷ್ಮವಾಗಿ ಗ್ರಹಿಸಬಲ್ಲದು. ಇದನ್ನು ಹಿಡಿಯುವ ಬೇಟೆಗಾರನಿಗೆ ಮೊಲಕ್ಕಿಂತ ಹೆಚ್ಚಿನ ಜಾಣ್ಮೆ ಮತ್ತು ಚುರುಕುತನ ಬೇಕಾಗುವುದು. ಈ ಬೇಟೆಯ ಕಲೆಯನ್ನು ಕರ್‌ಕರ್ ಮುಂಡ ಸಮುದಾಯದವರು ಪರಂಪರೆಯಿಂದ ಪಡೆದಿರುವರು. ಮೊಲದ ಬೇಟೆಯ ಹಲವಾರು ವಿಧಾನಗಳಿಂದ ಕೂಡಿದ್ದು, ಈ ಬೇಟೆಗೆ ಕುಂದ್ಲಿಯಾಟ ಎನ್ನುವರು.

**ಸೋವು ಬೇಟೆ :**

ಹಗಲ ಹೊತ್ತಿನಲ್ಲಿ ಆಡುವ ಈ ಬೇಟೆಯಲ್ಲಿ ತಾವೇ ತಯಾರಿಸಿದ ಮೊಲದ ಬಲೆಯನ್ನು ಬಳಸುವರು. ಮೊಲಗಳು ನೆಲೆಸುವ ಸ್ಥಳ ಅವುಗಳ ಓಡಾಟ ಮತ್ತು ಹಿಕ್ಕೆಗಳನ್ನು ಗಮನಿಸಿ ಬಲೆಯನ್ನು ಬಿಡಲಾಗುವುದು. ಸುಮಾರು ನಾಲ್ಕರಿಂದ ಐದು ಬಲೆಗಳನ್ನು ಉದ್ದುದ್ದವಾಗಿ ಬಿಡುವರು. ಕೊನೆಯ ಎರಡು ಕಡೆ ಬಗ್ಗರಿಯಲ್ಲಿ ಇಬ್ಬರು ಅವಿತುಕೊಳ್ಳುವರು. ಬಲೆಗಳಿಗೆ ಊಡುಗಡ್ಡಿಗಳನ್ನು ಸೂಕ್ಷ್ಮವಾಗಿ ನಿಲ್ಲಿಸಿ, ಒಂದು ಚಿಕ್ಕ ಪ್ರಾಣಿ ಸ್ಪರ್ಷಿಸಿದರೂ ಬಲೆ ಸುತ್ತಿಕೊಳ್ಳುವಂತೆ ಚತುರತೆಯಿಂದ ಬಲೆ ಬಿಡವರು. ಅಂಚಿನಲ್ಲಿರುವ ಇಬ್ಬರನ್ನು ಹೊರತು ಪಡಿಸಿ ಉಳಿದವರು ಬಲೆಗೆ ಅಭಿಮುಖವಾಗಿ ಅನತಿ ದೂರದಿಂದ ಕೋಲು ಕಲ್ಲುಗಳಿಂದ ಶಬ್ದಮಾಡುತ್ತಾ ಸೋವಿಕೊಳ್ಳುತ್ತಾ ಬರುವರು. ಮೊಲ ಇದ್ದರೆ ಅದನ್ನು ಬಲೆಯ ಕಡೆಗೆ ಓಡಿಸಲಾಗುವುದು. ಅದು ಬಿದ್ದಾಗ ಅಂಚಿನಲ್ಲಿರುವ ವ್ಯಕ್ತಿಗಳು ಚೆಂಡು ಮುರಿದು ಬಲೆಯಿಂದ ಬಿಡಿಸಿಕೊಂಡು ಪುನಃ ಊಡುಗಡ್ಡಿ ನಿಲ್ಲಿಸುವರು. ಒಂದು ವೇಳೆ ಸೋವುವಾಗ ಮೊಲ ಇಲ್ಲದಿದ್ದರೆ ಬಲೆಯನ್ನು ಸುತ್ತಿಕೊಂಡು ಮತ್ತೆ ಬೇರೆ ಕಡೆ ಬಿಟ್ಟು ಸೋವುತ್ತಾ ಮೊಲದ ಅಥವಾ ಕುಂದ್ಲಿ ಬೇಟೆಯಾಡುವರು.

**ಹೆಜ್ಜೆ ಬೇಟೆ :** ಮಳೆ ಬಂದ ಮರುದಿನ ಮೊಲಗಳು ಓಡಾಡಿದ ಹೆಜ್ಜೆ ಗುರುತುಗಳನ್ನು ಹಿಂಬಾಲಿಸಿ ಈ ಬೇಟೆಯನ್ನು ಆಡಲಾಗುವುದು. ಹಳ್ಳ ಕೊಳ್ಳಗಳ ಸಮೀಪದಲ್ಲಿ ನೀರು ಅಥವಾ ಆಹಾರ ಹುಡುಕಿಕೊಂಡು ಬಂದ ಮೊಲಗಳ ಹೆಜ್ಜೆಗಳನ್ನು ಅನುಸರಿಸಿಕೊಂಡು ಹೋಗುವರು. ಅದು ಅವಿತು ಕುಳಿತುಕೊಂಡಿರುವ ಸ್ಥಳವನ್ನು ಪತ್ತೇಹಚ್ಚುವರು. ಅದು ಅವಿತು ಕುಳಿತ ಪೊದೆ, ಪೊಟರೆಗಳ ಸುತ್ತಲು ಬಲೆ ಕಟ್ಟಿ ಕಲ್ಲು ಹಾಕಿ ಶಬ್ದ ಮಾಡಿ ಅದನ್ನು ಗಾಬರಿಗೊಳಿಸುವರು. ಗಾಬರಿಗೊಂಡ ಮೊಲ ಪ್ರಾಣಾಪಾಯದಿಂದ ಪಾರಾಗಲು ಓಡುತ್ತಾ ಬಲೆಗೆ ಬಂದು ಬೀಳುವುದು. ಈ ರೀತಿಯಾಗಿ ಮೊಲದ ಹೆಜ್ಜೆಯನ್ನು ಹಿಂಬಾಲಿಸಿ ಬೇಟೆಯಾಡುವ ಕ್ರಮಕ್ಕೆ ಹೆಜ್ಜೆ ಬೇಟೆ ಎನ್ನುವರು.

**ಸಂಜೆ ಹೊಳೆ ಮತ್ತು ಬೆಳಗಿನ ಹೊಳೆ ಮೊಲದ ಬೇಟೆ**

ಮೊಲವನ್ನು ರಾತ್ರಿಯ ಸಮಯದಲ್ಲಿ ಹಿಡಿಯುವ ಬೇಟೆಯ ವಿಧಾನಗಳಲ್ಲಿ ಸಂಜೆ ಹೊಳೆ ಮತ್ತು ಬೆಳಗಿನ ಹೊಳೆ ಮೊಲದ ಬೇಟೆಯು ಒಂದಾಗಿದೆ. ಹಗಲಿನಲ್ಲಿ ದೊರೆಯದ ಮೊಲಗಳನ್ನು ಅದರ ಚಲನ ವಲನ, ಹೆಜ್ಜೆ, ಹಿಕ್ಕಿಗಳನ್ನು ಗಮನಿಸಿ ಬಲೆ ಬಿಟ್ಟು ಹಿಡಿಯುವರು. ಮೊಲಗಳು ಓಡಾಡಿರುವ ದಾರಿಗೆ ಸಂಜೆ ಏಳರಿಂದ ಹನ್ನೆರಡು ಗಂಟೆಯ ಸಮಯದಲ್ಲಿ ಬಲೆ ಕಟ್ಟಿ ಅವಿತು ಕುಳಿತುಕೊಳ್ಳುವರು. ಎರಡು ಬದಿಗಳಲ್ಲಿ ಅವಿತು ಕುಳಿತಿರುವವರು ಇತರೆ ಯಾವದೇ ಕ್ರೂರ ಪ್ರಾಣಿಗಳಿಗೆ ಗುರುತು ಸಿಗದಂತೆ ಮರ್ಚ್ನನ್ನು ತಯಾರಿಸಿಕೊಂಡು ಸೊಪ್ಪು ಟೊಂಗೆಗಳಿಂದ ಇತರೆ ಕ್ರೂರ ಪ್ರಾಣಿಗಳಿಗೆ ಗುರುತು ಸಿಗದಂತೆ ಮರ್ಚನ್ನು ತಯಾರಿಸಿಕೊಂಡು ಕುಳಿತಿರುವರು. ಬಲೆಯ ಅನತಿ ದೂರದಲ್ಲಿ  ಯಾವುದೇ ಪ್ರಾಣಿ ಬಂದರೂ ಗೊತ್ತಾಗುವಂತೆ ಸೀಮೆ ಎಣ್ಣೆ ಬುಡ್ಡಿಯ ಅಥವಾ ತಗಡಿನ ಡಬ್ಬಕ್ಕೆ ಸಣ್ಣ ಕಲ್ಲುಗಳನ್ನು ಹಾಕಿ ದಾರ ಕಟ್ಟುವರು. ಪ್ರಾಣಿಗಳು ಬಂದಾಗ ಅದಕ್ಕೆ ತಗುಲಿದರೆ ಶಬ್ದ ಬರುವಂತಿರುತ್ತದೆ. ಆಗ ಪ್ರಾಣಿ ಅಥವಾ ಮೊಲ ಬಂದಿದೆ ಎಂದು ತಿಳಿಯಲಾಗುವುದು. ಬಂದದ್ದು ಮೊಲವಾಗಿದ್ದರೆ ಆ ಕಡೆ ಬಗ್ಗರಿಯ ಶಬ್ದ ಬಂದ ತಕ್ಷಣ ವೇಗವಾಗಿ ಬಲೆಯ ಕಡೆ ಓಡಿ ಬಂದು ಬೀಳುತ್ತದೆ. ಅಥವಾ ಇತರೆ ಕ್ರೂರ ಪ್ರಾಣಿಗಳಾದರೆ ಮನುಷ್ಯನ ವಾಸನೆಯನ್ನು ಗ್ರಹಿಸುವ ಪ್ರಯತ್ನ ಮಾಡುತ್ತವೆ. ಆಗ ಬಲೆಯ ಅಂಚಿನಲ್ಲಿರುವವರು ನಿಧಾನವಾಗಿ ಲೂಡುಗಡ್ಡಿಗಳನ್ನು ಕೆಡವಿ ಬಲೆಯನ್ನು ನೆಲಸಮ ಮಾಡುವರು. ಆ ಪ್ರಾಣಿಗಳು ಹೋಗುವವರೆಗೂ ಉಸಿರು ಬಿಗಿ ಹಿಡಿದು ಕುಳಿತುಕೊಂಡು ಅವುಗಳಿಂದ ಪ್ರಾಣ ಉಳಿಸಿಕೊಳ್ಳುವರು. ಅವು ಹೋದ ನಂತರ ಪುನಃ ಬಲೆಯನ್ನು ಹೂಡಿ ಮೊಲಕ್ಕಾಗಿ ಕಾಯುವರು.

ಸಂಜೆ ವೇಳೆಯಲ್ಲಿ ಮೊಲ ಬೀಳದಿದ್ದರೆ ಅದೇ ಜಾಗದಲ್ಲಿ ಕೆಲವು ಗಂಟೆಗಳ ನಂತರ ಬೆಳಗಿನ ಜಾವ ಮೂರರಿಂದ ಐದು ಗಂಟೆಯವರೆಗೆ ಬೆಳಗಿನ ವೇಳೆ ಮೊಲದ ಬೇಟೆಯಾಡುವರು. ಸಾಮಾನ್ಯವಾಗಿ ಸಂಜೆ ವೇಳೆಯಲ್ಲಿ ಆಹಾರಕ್ಕಾಗಿ ಕಾಡಿನಿಂದ ಹೊಲಗಳಿಗೆ ಬರುವ ಮೊಲಗಳನ್ನು ಹಿಡಿಯಲಾಗುತ್ತದೆ. ಬೆಳಗಿನ ವೇಳೆಯಲ್ಲಿ ಆಹಾರ ತಿಂದು ಮರಳಿ ಕಾಡಿಗೆ ಹೋಗುವ ಮೊಲಗಳನ್ನು ಹಿಡಿಯಲಾಗುವುದು. ಈ ಬೇಟೆಯಾಡುವಾಗ ಬೇಟೆಗಾರ ಪ್ರಮುಖವಾಗಿ ಗಮನಿಸಬೇಕಾದುದ್ದು, ಗಾಳಿಯು ಎತ್ತ ಕಡೆ ಬೀಸುತ್ತದೆ ಎಂಬುದನ್ನು ಅರಿತುಕೊಳ್ಳುವುದು. ಮನುಷ್ಯನ ವಾಸನೆಯು ಪ್ರಾಣಿಗಳಿಗೆ ತಿಳಿಯದಂತೆ ಬಲೆ ಕಟ್ಟುವುದು ಚಾಣಾಕ್ಷತನಕ್ಕೆ ಒಂದು ನಿದರ್ಶನವಾಗಿರುತ್ತದೆ. ಈ ಸಂಜೆ ಹೊಳೆ ಮತ್ತು ಬೆಳಗಿನ ಹೊಳೆ ಮೊಲದ ಬೇಟೆಯನ್ನು ಹುಣ್ಣಿಮೆ ಬೆಳದಿಂಗಳ ದಿನಗಳಲ್ಲಿ ಮಾತ್ರ ಆಡುವರು.

**ಠಕ್ಕು ಬೇಟೆ**

ಸೋವು ಬೇಟೆಯನ್ನು ಹಗಲಿನಲ್ಲಿ ಆಡಿದರೆ ಠಕ್ಕು ಬೇಟೆಯನ್ನು ಚಂದ್ರನ ಬೆಳಕಿನಲ್ಲಿ ಆಡುವರು. ಕಾಡು ಸುಟ್ಟಾಗ ಪೊದೆಗಳು ಇಲ್ಲದ ಬೇಸಿಗೆ ಕಾಲದಲ್ಲಿ ಈ ವಿಧಾನದ ಮೂಲಕ ಮೊಲವನ್ನು ಹಿಡಿಯುವರು. ನಾಲ್ಕರಿಂದ ಐದು ಅಥವಾ ಬೇಟೆಗಾರರಿಗೆ ಅನುಗುಣವಾಗಿ ಬಲೆಗಳನ್ನು ಅರ್ಧ ಕಿಲೋ ಮೀಟರ್ ದೂರದವರೆಗೆ ನೇರವಾಗಿ ಹೂಡಿ ಅಂಚಿನಲ್ಲಿ ಇಬ್ಬರು, ಉಳಿದವರು ಕಲ್ಲು ಕುಟ್ಟುವ ಮೂಲಕ ಠಕ್ಕು ಠಕ್ಕು ಎಂದು ಶಬ್ದ ಮಾಡುತ್ತಾ ಮೊಲಗಳನ್ನು ಬಲೆಯ ಕಡೆ ಹೋಗುವಂತೆ ಓಡಿಸುವರು. ಇದರಿಂದಾಗಿ ಈ ವಿಧಾನಕ್ಕೆ ಠಕ್ಕ್‌ಬೇಟೆ ಎಂಬ ಹೆಸರು ಬಂದಿದೆ.

**ಅಕ್ಕೆ ಮೊಲದ ಬೇಟೆ :** ಇದು ಹೆಜ್ಜೆ ಬೇಟೆಗೆ ಪೂರಕವಾದ ಬೇಟೆಯ ಕ್ರಮವಾಗಿದೆ. ಮೊಲ ಅವಿತು ಕುಳಿತ ಪೊದೆ ಪೊಟರೆಯನ್ನು ಅದರ ಹೆಜ್ಜೆ ಮತ್ತು ಹಿಕ್ಕೆಗಳಿಂದ ಗ್ರಹಿಸುವರು. ಅಕ್ಕೆ ಮೊಲ ಸಾಮಾನ್ಯವಾಗಿ ಗರ್ಭಧರಿಸಿದ ಸಂದಭದಲ್ಲಿ ಇಲ್ಲವೇ ಮರಿ ಹಾಕಿದ ಸಮಯದಲ್ಲಿ ಅಕ್ಕೆಯಲ್ಲಿ ಇರುತ್ತದೆ ಎಂಬ ತಿಳುವಳಿಕೆ ಇವರದ್ದು, ಮೊಲ ಯಾವಾಗಲೂ ಸಂಚರಿಸುತ್ತಿರುವ ಪ್ರಾಣಿಯಾಗಿರುವುದು. ಅಕ್ಕೆ ಅಥವಾ ಸ್ಥಳವನ್ನು ಪತ್ತೆ ಹಚ್ಚಿ ಅದರ ಗಮನಕ್ಕೆ ಬಾರದಂತೆ ಸುತ್ತಲು ಬಲೆ ಬಿಟ್ಟು ನಂತರ ಕೂಗುತ್ತಾ, ಕಲ್ಲು ಹಾಕುತ್ತಾ ಅದರ ಅಕ್ಕಿಯಿಂದ ಹೊರ ಬರುವಂತೆ ಮಾಡಿ ಬಲೆಗೆ ಕೆಡವುದು ಅಕ್ಕೆ ಮೊಲದ ಬೇಟೆಯ ವಿಶೇಷತೆಯಾಗಿದೆ.

**ತಂತಿ ಉರುಲು ಬೇಟೆ :**

ಮೊಲಗಳ ಕುರಿತಾದ ಅನುಭವದ ತಿಳುವಳಿಕೆಯಿಂದ ಅದರ ಗಾತ್ರಕ್ಕೆ ತಕ್ಕಂತೆ ಕುತ್ತಿಗೆ ನೇಣು ಬಿಗಿದುಕೊಳ್ಳುವಂತೆ ಅಲ್ಯೂಮಿನಿಯಂ ತಂತಿಯಿಂದ ಉರುಲುಗಳನ್ನು ತಯಾರಿಸುವರು. ಈ ಉರುಲುಗಳನ್ನು ಮೊಲಗಳು ಓಡಾಡಿದ ಜಾಗದಲ್ಲಿ ಗಿಡಗಳ ಮಧ್ಯೆ ಕಟ್ಟುವರು. ರಾತ್ರಿಯ ವೇಳೆಯಲ್ಲಿ ಕಟ್ಟಿ ಬಂದು ಮುಂಜಾನೆ ಹೋಗುವರು. ಮೊಲದ ಕುತ್ತಿಗೆ ಈ ಉರುಲಿನಲ್ಲಿ ಸಿಕ್ಕಿಕೊಂಡರೆ ಅದರಿಂದ ಬಿಡಿಸಿಕೊಳ್ಳಲು ಸಾಧ್ಯವಾಗದೆ ಒದ್ದಾಡಿ ಪ್ರಾಣ ಬಿಟ್ಟಿರುತ್ತದೆ. ಮುಂಜಾನೆ ಬೇಟೆಗಾರ ಅದನ್ನು ಬಿಡಿಸಿಕೊಂಡು ಬರುವನು.

**ಹಣೆ ಬ್ಯಾಟರಿ ಮೊಲದ ಬೇಟೆ :** ಬೇಟೆ ನಿಷೇಧದ ಫಲವಾಗಿ ಬಲೆಯನ್ನು ಬಳಸಿ ಆಡುವ ಮೊಲದ ಬೇಟೆ ಅಂಚಿಗೆ ತಳ್ಳಲ್ಪಟ್ಟಿತು. ಇದಕ್ಕೆ ಪರ್ಯಾಯವಾಗಿ ಅಸ್ತಿತ್ವಕ್ಕೆ ಬಂದ ಬೇಟೆಯ ವಿಧಾನವೇ ಹಣೆ ಬ್ಯಾಟರಿ ಮೊಲದ ಬೇಟೆ. ಈ ವಿಧಾನದಲ್ಲಿ ಸಾಂಪ್ರದಾಯಿಕ ಬೇಟೆಯ ಆಯುಧಗಳಿಗೆ ಬದಲಾಗಿ ಆಧುನಿಕ

ಉಪಕರಣಗಳನ್ನು ಬಳಸುವುದನ್ನು ಕಾಣಬಹುದಾಗಿದೆ. ಅಮವಾಸ್ಯೆಯ ಕತ್ತಲಿನಲ್ಲಿ ಹಣೆಗೆ ಒಂದು ಕೈ ಬ್ಯಾಟರಿಯ ಕಟ್ಟನ್ನು ಹಾಕಿಕೊಂಡು ಹಗಲಿಗೆ ಜಾರ್ಜ್ ಮಾಡಿದ ಚಿಕ್ಕ ಆಟೋ ರಿಕ್ಷಾದ ಬ್ಯಾಟರಿಯನ್ನು ಹಾಕಿಕೊಂಡು ಬೇಟೆಗೆ ಹೋಗುವರು. ಇದು ಹೆಚ್ಚು ದೂರ ಪ್ರಕಾಶಿಸುವಂತೆ ವ್ಯವಸ್ಥೆ ಮಾಡಿಕೊಂಡಿರುತ್ತಾರೆ. ಕಾಲು ಸಪ್ಪಳ ಪ್ರಾಣಿಗಳಿಗೆ ಕೇಳಿಸದಂತೆ ಅರನ್ ಎಂಬ ಉಪಕರಣವನ್ನು ಹಾಕಿಕೊಂಡು ಹೋಗುವರು. ಪ್ರಾಣಿಗಳ ಕಣ್ಣುಗಳ ಬಣ್ಣದಿಂದಲೇ ಪ್ರಾಣಿಯನ್ನು ಗ್ರಹಿಸುವ ಕೌಶಲ್ಯತೆ ಈ ಬೇಟೆಗಾರನಲ್ಲಿರುವುದು. ಬ್ಯಾಟರಿ ಬೆಳಕಿನಲ್ಲಿ ಮೊಲ, ಹಂದಿ, ಕಂಡರೆ, ಅರನ್ ಹಾಕಿಕೊಂಡು ಸಮೀಪ ಹೋಗಿ ದೊಣ್ಣೆಯಿಂದ ಹೊಡೆದು ಸಾಯಿಸುವರು. ಹಿಂದೆ ಇರುವ ಸಹಚರರು ಅದನ್ನು ಹಿಡಿದುಕೊಂಡ ನಂತರ ಬ್ಯಾಟರಿ ಬೆಳಕಿನಲ್ಲಿ ಪ್ರಾಣಿಗಳನ್ನು ಹುಡುಕುತ್ತಾಹಣೆಗೆ ಬ್ಯಾಟರಿ ಹಾಕಿಕೊಂಡವನು ಮುಂದೆ ಸಾಗುವನು. ಇದು ಇತ್ತೀಚಿನ ಬೇಟೆಯ ವಿಧಾನವಾಗಿದ್ದು, ರಾತ್ರಿಯ ಸಮಯದ ಬ್ಯಾಟರಿ ಬೆಳಕಿನಲ್ಲಿ ಮೊಲಗಳ ನರ್ತನವನ್ನು ಬೇಟೆಗಾರ ಮನರಂಜನೆಯಾಗಿ ಸ್ವೀಕರಿಸಿ ಅಂತಿಮವಾಗಿ ಸಾಯಿಸುವನು. ಮರಿಗಾಳಾಗಿದ್ದರೆ ಮನೆಗೆ ತಂದು ಸಾಕುವರು. ಬೇಟೆಗಾರ ಬಹು ಎಚ್ಚರಿಕೆಯಿಂದ ಈ ಬೇಟೆಯನ್ನು ಆಡಬೇಕಾಗುವುದು. ಇಲ್ಲವಾದರೆ ಹಾವು, ಹುಲಿ, ಕರಡಿ ಇತ್ಯಾದಿ ಪ್ರಾಣಿಗಳಿಂದ ಪ್ರಾಣಕ್ಕೆ ಆಪತ್ತು ತಂದುಕೊಳ್ಳಬೇಕಾಗುತ್ತದೆ. ಕಣ್ಣಿನ ಬಣ್ಣವನ್ನು ಗ್ರಹಿಸಿ ಮೊಲವಾದರೆ ಸಮೀಪಕ್ಕೆ ಹೋಗಬೇಕು. ಬೇರೆ ಪ್ರಾಣಿಯಾದರೆ ಬದಲಿ ದಿಕ್ಕಿನೆಡೆಗೆ ಹೋಗುವುದು ಬೇಟೆಯ ಕಲೆಯಾಗಿದ. ಈ ರೀತಿಯ ಜಾಣ್ಮೆ, ಕೌಶಲ್ಯ, ಸಮಯ ಪ್ರಜ್ಞೆ ಮತ್ತು ಜ್ಞಾನ ಬೇಟೆಗಾರನಿಗೆ ಅವಶ್ಯಕವಾಗಿ ಬೇಕಾಗಿರುತ್ತದೆ.

ಕರ್‌ಕರ್‌ಮುಂಡರು ಸೇರಿದಂತೆ ಇತರೆ ಸಮುದಾಯದವರು ಇಂತಹ ಮೊಲದ ಬೇಟೆಯ ತಂತ್ರಗಾರಿಕೆಯನ್ನು ಹೊಂದಿದ್ದು, ಇದರ ಹೊರತಾಗಿಯೂ ಸಂದರ್ಭೋಚಿತವಾಗಿ ಬೇಟೆಯ ಕ್ರಮಗಳನ್ನು ಬದಲಿಸಿಕೊಳ್ಳುವುದನ್ನು ಕಾಣಬಹುದಾಗಿದೆ. ಕೈಯಲ್ಲಿ ಹಿಡಿಯುವುದು, ಕಲ್ಲಿಂದ ಒಡೆದು ಸಾಯಿಸುವುದು, ದೊಣ್ಣೆ ಬೀಸಿ ಹಿಡಿಯುವುದು ಬೇಟೆಯ ತತ್ಕಾಲದ ಕಲೆಗಳಾಗಿವೆ.

**ಪಂದಿಯಾಟಮು (ಹಂದಿಬೇಟೆ) :**

ಕರ್‌ಕರ್ ಮುಂಡರು ಹಂದಿ ಬೇಟೆಯನ್ನು ಪಂದಿಯಾಟಮು ಎಂದು ಕರೆಯುವರು. ಮೊಲದ ಬೇಟೆಯು ಚುರುಕು ತನಕ್ಕೆ ನಿದರ್ಶನವಾದರೆ ಹಂದಿ ಬೇಟೆ ಎದೆಗಾರಿಕೆಯಿಂದ ಕೂಡಿರುವಂತಾಗಿದೆ. ಈ ಸಮುದಾಯದಲ್ಲಿ ಹಂದಿಯು ಇಂದು ಜೀವನಾವರ್ತಕ ಮತ್ತು ವಾರ್ಷಿಕಾವರ್ತನ ಆಚರಣೆಗಳಲ್ಲಿ ವಿಶೇಷ ಆಹಾರವಾಗಿ ಸೇರಿ ಹೋಗಿದೆ.

ಹಿಂದೆ ಹಂದಿಯನ್ನು ಬೇಟೆಯಾಡಿ ಕೊಲ್ಲಲಾಗುತ್ತಿತ್ತೆ ಹೊರತು ತಿನ್ನಲಾಗುತ್ತಿರಲ್ಲಿಲ್ಲ. ಹೈದ್ರಾಬಾದಿನ ನಿಜಾಮನ ಆಪ್ತವರ್ಗವಾಗಿದ್ದ ರಜಾಕಾರರ ಮತಾಂತರ ನೀತಿಯಿಂದ ತಪ್ಪಿಸಿಕೊಳ್ಳಲು ಹಂದಿಯನ್ನು ತಿನ್ನಬೇಕಾಯಿತು. ಹಂದಿಯು ವಿಜಯನಗರ ಸಾಮ್ರಾಜ್ಯದ ಲಾಂಛನವಾಗಿದ್ದು, ವಿಷ್ಣುವಿನ ಅವತಾರಗಳಲ್ಲಿ ಒಂದಾಗಿದೆ. ವಿಷ್ಣು ಪುರಾಣದಲ್ಲಿ ಹಿರಣಯಾಕ್ಷನನ್ನು (ಹಿರಣ್ಯಕಶ್ಯಪನ ಸಹೋದರ) ಸಂಹರಿಸಲು ವಿಷ್ಣು ದಶಾವಾತಾರಗಳಲ್ಲಿ ಒಂದಾದ ಮೂರನೇ ವರಹ ಅವತಾರವನ್ನು ತಾಳುತ್ತಾನೆ. ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ವೈಷ್ಣವ ಪರಂಪರೆ ಉಚ್ಛ ಸ್ಥಿತಿಯಲ್ಲಿದ್ದಾಗ ವರಹಕ್ಕೆ ಲಾಂಛನದ ಸ್ಥಾನಮಾನ ನೀಡಲಾಯಿತು. ಬೇಡ ಸಮುದಾಯವು ಕಾಡುಹಂದಿಯನ್ನು ಬೇಟೆಯಾಡುತ್ತಾರೆಯೇ ಹೊರತು ಅದನ್ನು ತಿನ್ನುವುದು ಈ ಸಮುದಾಯದಲ್ಲಿ ನಿಷೇಧವಾಗಿದೆ. ಕರ್‌ಕರ್ ಮುಂಡರಲ್ಲಿ ಮತಾಂತರದಿಂದ ತಪ್ಪಿಸಿಕೊಳ್ಳಲು ಹಂದಿಯನ್ನು ತಿನ್ನುವ ಪರಿಪಾಠ ಬೆಳೆಸಿಕೊಂಡರು. ಬೇಟೆಯ ನಂತರದಲ್ಲಿ ಹಂದಿ ಆಹಾರದಲ್ಲಿ ಸೇರಿಹೋದಾಗ ಅದರ ಸಾಕಾಣಿಕೆ ರೂಢಿಗತವಾಯಿತು. ಕರ್‌ಕರ್ ಮುಂಡರಲ್ಲದೇ ಕೊರಚ, ಕೊರವ ಸಮುದಾಯಗಳು ಕಾಡುಹಂದಿಯನ್ನು ಬೇಟೆಯಾಡುವ ಮತ್ತು ಸಾಕುವ ಕಲೆಯನ್ನು ಮೈಗೂಡಿಸಿಕೊಂಡಿರುವರು. ಇವರಿಗೂ ಸಹ ಮತಾಂತರದ ಭಯವು ಕಾಡಿದ ಸಲುವಾಗಿ ಹಂದಿ ಆಹಾರ ಮತ್ತು ಆರ್ಥಿಕತೆಯ ಮೂಲವಾಗಿರಬಹುದಾಗಿದೆ. ಹಂದಿಯನ್ನು ಬಲೆಯಿಂದ ಹಿಡಿಯುವುದು ಒಂದು ವಿಧಾನವಾದರೆ ಭರ್ಚಿ, ಈಟಿಯಿಂದ ಕೊಲ್ಲುವುದು ಮತ್ತೊಂದು ವಿಧಾನವಾಗಿದೆ. ವಿಜಯನಗರೋತ್ತರ ಕಾಲದಲ್ಲಿ ಕರ್‌ಕರ್ ಮುಂಡರು ಕಾಡುಹಂದಿಯನ್ನು ಭರ್ಚಿ, ಈಟಿಯಿಂದ ಬೇಟೆಯಾಡುತ್ತಿದ್ದರು ಎಂದು ತಿಳಿಯಬಹುದಾಗಿದೆ.

ಮರ ಏರಿ ಭರ್ಚಿ ಹಾಕುವುದು ಮತ್ತೆ ಕೆಲವು ಸಂದರ್ಭದಲ್ಲಿ ಬೆನ್ನು ಹತ್ತಿ ಕೊಲ್ಲುವ ತಂತ್ರಗಳನ್ನು ಕಾಣುತೇವೆ. ಜೊತೆಗೆ ಹಂದಿ ಏಟುತಿಂದು ಎದುರು ಬಿದ್ದಾಗ ಅದರ ಕೊರೆ ಹಲ್ಲಿನ ತಿವಿತದಿಂದ ತಪ್ಪಿಸಿಕೊಳ್ಳುವ ಮತ್ತು ತಿರುಗಿ ಬರುವ ಸಮಯದಲ್ಲಿ ಚಾಣಾಕ್ಷತನದಿಂದ ಭರ್ಚಿಯಿಂದ ಕೊಲ್ಲುವ ಕಲೆ ಬೇಟೆಗಾರನಿಗೆ ಬಳುವಳಿಯಾಗಿ ಬಂದಿರುತ್ತದೆ. ಬೇಟೆಯಾಡಿದ ಹಂದಿಯನ್ನು ತಿನ್ನದೇ ಇರುತ್ತಿದ್ದುದ್ದರಿಂದ ರಕ್ಷಣೆಗೆ ಮತ್ತು ಹವ್ಯಾಸಿಯಾಗಿತ್ತು. ತುಳುವ ಸಂತತಿಯಿಂದ ವೈಷ್ಣವ ಪರಂಪರೆ ಶೈವ ಪರಂಪರೆಯನ್ನು ಹತ್ತಿಕ್ಕಲ್ಪಟ್ಟಾಗ ವಿಷ್ಣುವಿನ ರೂಪದ ಹಂದಿಯನ್ನು ಕೊಲ್ಲುವ ಮೂಲಕ ವೈಷ್ಣವರಿಗೆ ತಿರುಗೇಟು ನೀಡುವ ಪರಿಪಾಠವಾಗಿ ಹಂದಿ ಬೇಟೆ ಬೆಳೆದು ಬಂದಿರಬಹುದಾಗಿದೆ. ಹಂದಿ ಬೇಟೆ ವೈಷ್ಣವ ಮತ್ತು ಶೈವ ಧಾರ್ಮಿಕ ಸಂಘರ್ಷದ ಹಿನ್ನೆಲೆಯಲ್ಲಿ ಬಂದಿರಬಹುದಾಗಿದೆ.

ಸುರಪುರ ಸಂಸ್ಥಾನವು ಮೊಗಲಾಯಿಗಳ ಆಡಳಿತಕ್ಕೆ ಒಳಪಟ್ಟಾಗ ಅಲ್ಲಿನ ಕರ್‌ಕರ್ ಮುಂಡ ಸಮುದಾಯ ಮುಸ್ಲಿಂರ ಮತಾಂತರದಿಂದ ಪಾರಾಗಲು ಅವರ ಧರ್ಮಕ್ಕೆ ಅನಿಷ್ಟವಾದ ಹಂದಿಯನ್ನು ತಿನ್ನುವುದು ಅನಿವಾರ್ಯವಾಯಿತು. ಅದಕ್ಕಾಗಿ ಭರ್ಚಿ, ಈಟಿಯಿಂದ ಹವ್ಯಾಸಿ ಮತ್ತು ರಕ್ಷಣೆಯ ಹಿನ್ನೆಲೆಯಲ್ಲಿದ್ದ ಹಂದಿ ಬೇಟೆಯು ಅನಿವಾರ್ಯವಾಯಿತು. ಅಂದಿನ ಕರ್‌ಕರ್ ಮುಂಡ ಸಮುದಾಯದ ಜನರು ಬಲಿಷ್ಟವಾಗಿ ದಷ್ಟಪುಷ್ಟವಾಗಿದ್ದರಿಂದ ಆಹಾರದ ಭಾಗವಾಗಿದ್ದ ಹಂದಿಯನ್ನು ಬೇಟೆಯಿಂದಲೇ ಪಡೆಯುತ್ತಿದ್ದರು. ನಂತರದ ವಿಧಾನದಲ್ಲಿ ಹಂದಿಯನ್ನು ಬಲೆ ಕಟ್ಟಿ ಬೇಟೆಯಾಡುವ ಪದ್ಧತಿ ರೂಢಿಸಿಕೊಂಡರು.

ಹಂದಿ ಬಲೆಯು ಬಲಿಷ್ಟವಾದ ದಾರಗಳಿಂದ ನೇಯ್ಯಲ್ಪಟ್ಟಿದ್ದು ಅದನ್ನು ಕಾಡಿನ ಒಂದು ಸಂಗ್ಧದ ಸ್ಥಳದಲ್ಲಿ ಬಿಡುವರು. ಕಾಡಿನ ಇನ್ನೊಂದು ಪ್ರದೇಶದಿಂದ ಹಂದಿಗಳನ್ನು ಸೋವುಗಾರರು ಅಟ್ಟಿಕೊಂಡು ಬರುವರು. ಬಲೆಯ ಅಕ್ಕಪಕ್ಕದಲ್ಲಿ ಮರವೇರಿ ಅಡಗಿ ಕುಳಿತ ಬೇಟೆಗಾರರು ಹಂದಿ ಬಲೆಗೆ ಬಿದ್ದ ತಕ್ಷಣ ಭರ್ಚಿಯಿಂದ ತಿವಿದು ಕೊಲ್ಲುವರು. ನಂತರ ಅದನ್ನು ಮೆರವಣಿಗೆಯ ಮೂಲಕ ಊರಿಗೆ ತಂದು ಆಹಾರವಾಗಿ ಬಳಸುತ್ತಿದ್ದರು. ಹಂದಿಯನ್ನು ಮತ್ತೊಂದು ವಿಧಾನದಲ್ಲಿ ಕೊಲ್ಲಲಾಗುತ್ತಿತ್ತು. ಹಂದಿ ಓಡಾಡುವ ದಾರಿಯಲ್ಲಿ ಸಿಡಿ ಮದ್ದನ್ನು ಮಾಂಸದ ತುಂಡಿನಲ್ಲಿ ಅಥವಾ ಮಾವಿನ ವಾಟೆಯಲ್ಲಿ ಇಡಲಾಗುತ್ತಿತ್ತು. ಹಂದಿಯು ಮಾಂಸದ ಅಥವಾ ಮಾವಿನ ಹಣ್ಣಿನ ವಾಸನೆಯನ್ನು ಹಿಡಿದು ಬಂದು ಅದನ್ನು ಕಡಿದಾಗ ಸಿಡಿಮದ್ದು ಸ್ಫೋಟಿಸುತ್ತಿತ್ತು. ಆಗ ಅದು ಸತ್ತ ನಂತರ ಮರುದಿನ ಬೆಳಗ್ಗೆ ಅದನ್ನು ತರಲಾಗುತ್ತಿತ್ತು. ಒಂದು ವೇಳೆ ಹಂದಿ ಮದ್ದು ಕಡಿದು ಅಲ್ಲಿ ಸಾಯದೇ ಬೇರೆ ಕಡೆ ಹೋಗಿದ್ದರೆ ರಕ್ತಸ್ರಾವದ ಜಾಡು ಹಿಡಿದು ಹೋಗುವರು. ಒಂದು ವೇಳೆ ಅದು ಬದುಕಿದ್ದರೆ ಭರ್ಚಿಯಿಂದ ಇರಿದು ಕೊಂದು ತರುತ್ತಿದ್ದರು. ಬೇಟೆಗಾರಿಕೆ ಕಡಿಮೆಯಾಗಿ ಹಂದಿಯ ಆಹಾರದ ಅಭಾವ ಸಂಭವಿಸಲು ಹಂದಿ ಸಾಕಾಣಿಕೆಯನ್ನು ಮೈಗೂಡಿಸಿಕೊಂಡರು. ಆ ವೇಳೆಗಾಗಲೇ ಹಂದಿ ಸಾಂಪ್ರದಾಯಿಕ ಕಾರಣಗಳಿಂದ ಅನಿವಾರ್ಯವಾಗಿದ್ದರಿಂದ ಕಾಡು ಹಂದಿಗೆ ಬದಲಾಗಿ ಸಾಕಿದ ನಾಡು ಹಂದಿಯು ಬಲಿ ಎಂಬ ಹೆಸರಿನಿಂದ ಬೇಟೆಯಾಗಿ ಪ್ರಚಲಿತವಾಯಿತು. ಜನಪದರು ಬಲಿಯನ್ನು ಬೇಟೆ ಎಂದೇ ಇಂದಿಗೂ ಕರೆಯಲ್ಪಡುವುದನ್ನು ಕಾಣುಬಹುದು. ಕರ್‌ಕರ್ ಮುಂಡರಲ್ಲಿ ಹಂದಿಯ ಆಹಾರ ಹಲವಾರು ಕಾರಣಗಳಿಂದ ಅವಿಭಾಜಿತವಾದಾಗ ಬೇಡರಲ್ಲಿನ ಹಂದಿಯು ನಿಷೇಧವು ಕರ್‌ಕರ್ ಮುಂಡರು ಬೇಡರಿಂದ ವಿಘಟನೆ ಹೊಂದಿರುವ ಸಾಧ್ಯತೆಗಳನ್ನು ಕಾಣಬಹುದಾಗಿದೆ.

**ಏದುಮುಯಾಟ (ಮುಳ್ಳು ಹಂದಿ ಬೇಟೆ) :**

ಮುಳ್ಳು ಹಂದಿಯು ಹಂದಿ ಪ್ರಭೇದದಲ್ಲಿ ಒಂದಾಗಿದ್ದು, ಇದನ್ನು ಕರ್‌ಕರ್ ಮುಂಡರು ಏದುಮು ಎಂದು ಕರೆಯುವರು. ಇದು ಮೈತುಂಬಲುಗಟಿಯಾದ ಮುಳ್ಳುಗಳನ್ನು ಹೊಂದಿದ್ದು, ದೈವದತ್ತವಾಗಿ ಬಂದಿರುವಂತಹ ಮುಳ್ಳುಗಳಿಂದ ರಕ್ಷಣೆ ಮಾಡಿಕೊಳ್ಳುವುದು. ತಲೆಯು ತುಂಬಾ ಸೂಕ್ಷ್ಮ ಮತ್ತು ಚಿಕ್ಕದಾಗಿದ್ದು, ಮುಳ್ಳಿನಿಂದ ಕೂಡಿದ ಗಟ್ಟಿಯಾದ ಚಿಪ್ಪಿನಲ್ಲಿ ತಲೆಯನ್ನು ಸೇರಿಸಿಕೊಂಡಾಗ ದೊಡ್ಡ ಕಲ್ಲನ್ನು ಅದರ ಮೇಲೆ ಹಾಕಿದರೂ ಸಾಯುವುದಿಲ್ಲ. ಉಸಿರು ಕಟ್ಟಿಕೊಳ್ಳುವ ಮೂಲಕ ರಕ್ಷಿಸಿಕೊಳ್ಳುವುದರ ಜೊತೆಗೆ ತನ್ನ ಗಟ್ಟಿಯಾದ ಮುಳ್ಳುಗಳನ್ನು ಬಾಣಗಳಂತೆ ಮನುಷ್ಯನ ಅಥವಾ ಇತರ ಪ್ರಾಣಿಗಳಿಗೆ ಬಿಡುತ್ತಾ ತನಗೆ ಬಂದ ಆಪತ್ತಿನಿಂದ ಪಾರಾಗುತ್ತದೆ. ಈ ಜ್ಞಾನವನ್ನು ತಿಳಿದ ಬೇಟೆಗಾರ ತಲೆಯು ಹೊರಗಡೆ ಬಂದಾಗ ಮಾತ್ರ ಅದರ ತಲೆಗೆ ಹೊಡೆದೆ ಸಾಯಿಸುವನು. ಏದುಮು ಹತ್ತಿ ಮರದ ಕೆಳಗೆ ಹೋಗುವುದಿಲ್ಲ ಕಾರಣ ಹತ್ತಿ ಹಣ್ಣು ತಲೆಗೆ ಬಿದ್ದರೆ ಸಾಕು ಅದು ಸಾಯುವುದು. ಅದರ ತಲೆಯು ಸೂಕ್ಷವಾಗಿದ್ದು ಅದರಲ್ಲಿಯೇ ಇದರ ಜೀವ ಅಡಗಿದೆ. ಹೀಗಾಗಿ ಹತ್ತಿ ಮರದ ಕೆಳಗೆ ಹೋಗುವುದಿಲ್ಲ ಎಂಬ ತಿಳುವಳಿಕೆ ಕರ್‌ಕರ್ ಮುಂಡರಲ್ಲಿದೆ. ಬೇಟೆಗಾರ ಏದುಮು ತಲೆ ಹೊರಗೆ ಹಾಕುವವರೆಗೆ ಕಾದು ಕುಳಿತು ಅದಕ್ಕೆ ಅರಿವಾಗದಂತೆ ಉದ್ದವಾದ ದೊಣ್ಣೆಯಿಂದ ಹೊಡೆದು ಕೊಲ್ಲುವನು. ಇದನ್ನು ಕಾಡಿನಲ್ಲಿಯೇ ಸುಟ್ಟು ಅದರ ಮಾಂಸವನ್ನು ಮಾತ್ರ ಮನೆಗೆ ತರುವರು. ಕಾರಣ ಇದರ ಮುಳ್ಳುಗಳನ್ನು ತಮಗಾಗದವರ ಮನೆಯ ಸೂರುಕಟ್ಟಿಗೆಯಲ್ಲಿ ತಂದು ಇಟ್ಟರೆ ಅವರ ಮನೆಯಲ್ಲಿ ಅದು ಇರುವವರೆಗೆ ಜಗಳ ನಡೆಯುವುದು ಮತ್ತು ಮಾಟ ಮಂತ್ರ ಮಾಡಲು ಇದರ ಮುಳ್ಳುಗಳನ್ನು ಬಳಸುವರು ಎಂಬ ನಂಬಿಕೆ ಇವರಲ್ಲಿದೆ.

**ಚಾಪ್ಲು ಯಾಟ (ಮೀನುಬೇಟೆ) :**

ಮೀನುಬೇಟೆಯು ಗಂಗಾಮತಸ್ಥ ಸಮುದಾಯದಲ್ಲಿ ಪ್ರಧಾನ ವೃತ್ತಿಯಾಗಿ ಕಂಡು ಬರುವಂತಹದ್ದು, ಕರ್‌ಕರ್ ಮುಂಡರು ಈ ಬೇಟೆಯನ್ನು ತನ್ನ ಅಲೆಮಾರಿತನದಿಂದ ಮತ್ತು ಪ್ರದೇಶಗಳ ಋತುಮಾನಕ್ಕೆ ಅನುಗುಣವಾಗಿ ಮೀನು ಹಿಡಿಯುವುದನ್ನು ಕಾಣಬಹುದು. ನೆಲದ ಮೇಲಿನ ಜೀವಿಗಳಲ್ಲದೇ ಜಲಚರಗಳನ್ನು ಹಿಡಿದು ತಿನ್ನುವುದನ್ನು ಕಾಣುತ್ತೇವೆ. ಆ ಮೂಲಕ ಆಹಾರವನ್ನಾಗಿಸಿಕೊಂಡು ಬದುಕುವ ಈ ಸಮುದಾಯದವರು ಮೀನುಗಳನ್ನು ಹಲವಾರು ವಿಧಾನಗಳ ಮೂಲಕ ಹಿಡಿಯುವರು. ಕರ್‌ಕರ್‌ಮುಂಡರು ಮೀನು ಬೇಟೆಯನ್ನು ಚಾಪ್ಲುಯಾಟ ಎಂದು ಕರೆಯುವರು. ಚಾಪ್ಲುಗಳನ್ನು ಗಾತ್ರ

ಮತ್ತು ಋತುಮಾನಕ್ಕೆ ಅನುಗುಣವಾಗಿ ಗಾಳದ ಮೂಲಕ ಬಂಕದ ಬಲೆ, ಕೂಳಿ, ಬೀಸೋ ಬಲೆಯಿಂದ ಹಿಡಿಯುವುದನ್ನು ಕಾಣಬಹುದು.

**ಗಾಳದ ಬೇಟೆ :** ಹಳ್ಳ, ಕೊಳ್ಳ, ಬಾವಿ, ನದಿಗಳಲ್ಲಿ ಗಾಳದ ಮೂಲಕ ಮೀನನ್ನು ಬೇಟೆಯಾಡುವರು. ಮೀನಿನ ಕಿವಿರುಗಳಿಗೆ ಸಿಕ್ಕಿಕೊಳ್ಳುವಂತೆ ಕೊಕ್ಕೆಯಾಕಾರದ ಗಟ್ಟಿಯಾದ ತಂತಿಯಿಂದ ಗಾಳವನ್ನು ತಯಾರಿಸುವರು. ಆ ಗಾಳಕ್ಕೆ ಉದ್ದವಾಗಿ ಗಟ್ಟಿಯಾದ ದಾರವನ್ನು ಕಟ್ಟುವರು. ಗಾಳಕ್ಕೆ ಮಳೆ ಹುಳುಗಳನ್ನು ಅರ್ಧಕ್ಕೆ ಕತ್ತರಿಸಿ ಸಿಕ್ಕಿಸಿ ನೀರಿನೊಳಗೆ ಬಿಸಾಕುವರು. ಮಳೆ ಹುಳುಗಳನ್ನು ತಿನ್ನುತ್ತಾ ಮೀನು ಗಾಳಕ್ಕೆ ಸಿಕ್ಕಿಕೊಂಡು ಒದ್ದಾಡುವುದು. ಆಗ ದಡದಲ್ಲಿ ಕೋಲು ಹಿಡಿದ ಮೀನುಗಾರ ಅದನ್ನು ದಡಕ್ಕೆ ಎತ್ತಿಕೊಂಡು ಗಾಳದಿಂದ ಬಿಡಿಸಿಕೊಂಡು ಚೀಲಕ್ಕೆ ಹಾಕಿಕೊಳ್ಳುವನು. ಮತ್ತೆ ಕೆಲವು ಸಂದರ್ಭದಲ್ಲಿ ಗಾಳದಿಂದ ಮೀನನ್ನು ಬಿಡಿಸಿ ನೀರು ಇರುವ ಪಾತ್ರೆ ಅಥವಾ ಕುಂಭದಲ್ಲಿ ಹಾಕಿ ಬದುಕಿಸಿಕೊಂಡು ಮನೆಗೆ ಹೋದಾಗ ಸಾಯಿಸಿ ಆಹಾರವನ್ನಾಗಿಸುವರು.

**ಬಂಕದ ಬಲೆಯಿಂದ ಮೀನು ಬೇಟೆ :** ಬಂಕದ ಬಲೆಯನ್ನು ಸೊಳ್ಳೆ ಪರದೆಯಿಂದ ವೃತ್ತಾಕಾರದ ಕೋಲುಗಳಿಗೆ ಸುತ್ತಿ ಸೀಮೆ ಎಣ್ಣೆ ಲಾಳಿಕೆಯ ಹಾಗೆ ಕೋಲುಗಳಿಗೆ ಜೋಡಿಸಲಾಗಿರುತ್ತದೆ. ಕೆಳಗಿನ ಉದ್ದವಾದ ತುದಿಯನ್ನು ಬಟ್ಟೆಯಿಂದ ಗಂಟು ಹಾಕಲಾಗಿರುತ್ತದೆ. ಎಡಗೈಯಿಂದ ಬಂಕದ ಬಲೆಯನ್ನು ಮುಕ್ಕಾಲು ಭಾಗ ನೀರಿನಲ್ಲಿ ಮುಳುಗಿಸಿ ಬಲಗೈಯಿಂದ ಕೋಲಿನ ಮೂಲಕ ಬಲೆಯ ಕಡೆಗೆ ಮೀನುಗಳನ್ನು ಸೋವಲಾಗುವುದು. ಬಲೆಯೊಳಗೆ ಮೀನುಗಳು ಹೋದಾಗ ಬಲೆಯನ್ನು ಮೇಲೆ ಎತ್ತಿ ಮೀನುಗಳನ್ನು ಗಂಟಿನೊಳಗೆ ಕಳುಹಿಸಲಾಗುವುದು. ಹೀಗೆ ಮೀನುಗಳು ಆ ಗಂಟಿನಲ್ಲಿ ತುಂಬುವವರೆಗೆ ನಾಲ್ಕರಿಂದ ಐದು ಬಾರಿ ಸೋಸುವರು. ನೀರಿನಿಂದ ಹೊರಗೆ ಬಂದು ನಂತರ ಗಂಟನ್ನು ಬಿಚ್ಚಿ ನೀರು ತುಂಬಿದ ಪಾತ್ರೆಯಲ್ಲಿ ಶೇಖರಿಸುವ ಕ್ರಮವನ್ನು ಬಂಕದ ಬೇಟೆಯಲ್ಲಿ ಕಾಣಬಹುದಾಗಿದೆ.

**ಕೂಳೆ ಹೂಡುವುದು**

ಕುಣಿ ಅಥವಾ ಕೂಳೆಯು ಇಳಿ ಮೀನುಗಳನ್ನು ಹಿಡಿಯುವ ಸಾಧನವಾಗಿದ್ದು, ಎರಡು ಅಥವಾ ಮೂರು ಅಡಿ ಉದ್ದವಿರುವ ಬಿದಿರಿನ ಕಡ್ಡಿಗಳಿಂದ ಮತ್ತು ತೆಂಗಿನ ಕಡ್ಡಿಗಳಿಂದ ಇದನ್ನು ತಯಾರಿಸುವರು. ಇದರ ಮೇಲ್ಭಾಗ ಅಗಲವಾಗಿದ್ದು ತೆರೆದುಕೊಂಡಿರುತ್ತದೆ. ಕೆಳಭಾಗ ಚಿಕ್ಕದಾಗಿ ಮುಚ್ಚಿಕೊಂಡಿರುವುದು. ಮೀನುಗಳು ನೀರಿಗೆ ವಿರುದ್ಧವಾಗಿ ಸಂಚರಿಸುವುದರಿಂದ ನೀರು ಹರಿಯುವ ದಿಕ್ಕಿಗೆ ಅಗಲವಾಗಿರುವ ಮುಂಭಾಗವನ್ನು ಇಟ್ಟು, ಅದರ ಮೂಲಕ ನೀರು ಹರಿಯುವಂತೆ ತಂತ್ರ ರೂಪಿಸುವರು.

ಬೇರೆ ಕಡೆಯಲ್ಲಿ ಹೋಗುವ ನೀರಿಗೆ ತಡೆಗೊಡೆ ಕಟ್ಟುವರು. ಅದರೊಳಗೆ ಮೀನು ಒಮ್ಮೆ ಹೋದರೆ ಹೊರಗೆ ಬರಲು ಸಾಧ್ಯವಾಗದಂತೆ ಕೂಳೆಯನ್ನು ತಯಾರಿಸಲಾಗಿರುತ್ತದೆ. ಇದನ್ನು ಮೊಣಕಾಲು ಮಟ್ಟದ ತೆಳುವಾಗಿ ಹರಿಯುವ ನೀರಿನಲ್ಲಿ ಬಳಸಲಾಗುವುದು. ವಿಶೇಷವಾಗಿ ಮಳಲೆ ಕುನ್ನಿ ಎಂಬ ಚಿಕ್ಕ ಮೀನುಗಳನ್ನು ಹಿಡಿಯಲು ಮಾತ್ರ ಈ ವಿಧಾನವನ್ನು ಬಳಸುವರು.

**ಬೀಸೋ ಬಲೆಯಿಂದ ಮೀನು ಬೇಟೆಯಾಡುವುದು**

ನದಿ, ಕೆರೆ ಇತ್ಯಾದಿ ವಿಶಾಲವಾದ ಜಲರಾಶಿಯಲ್ಲಿ ಬೀಸೋ ಬಲೆಯಿಂದಮೀನುಗಳನ್ನು ಹಿಡಿಯುವರು. ಮರದ ದಿನ್ನೆ ಅಥವಾ ಬಿದುರಿನಿಂದ ತಯಾರಿಸಿದ ತೆಪ್ಪಗಳಲ್ಲಿ ದೊಡ್ಡ ಮೀನುಗಳನ್ನು ಹಿಡಿಯುವರು. ಬಲೆಯನ್ನು ನೀರಿನಲ್ಲಿ ವಿಶಾಲವಾಗಿ ಬೀಸಿ ಸ್ವಲ್ಪ ಸಮಯದ ನಂತರ ಸುತ್ತಿಕೊಂಡು ಮೀನುಗಳನ್ನು ಹಿಡಿಯುವ ವಿಧಾನವಾಗಿದೆ. ಈ ಬೇಟೆಯ ಕ್ರಮವು ಇಂದು ತೆಪ್ಪಗಳಿಗೆ ಬದಲಾಗಿ ಮೋಟರ್ ಬೋಟ್‌ಗಳಿಂದ ಕೂಡಿದೆ. ಸರ್ಕಾರದ ಪರವಾನಿಗೆಯಂತೆ ನಡೆಯುತ್ತಿರುವುದು. ಪ್ರಕೃತಿ ಸಂಪತ್ತು ಸರ್ಕಾರದ ಸ್ವತ್ತಾದಾಗ ಬೇಟೆ ನಿಷೇಧ ಜಾರಿಯಾಯಿತು ಇದಕ್ಕೆ ಪರ್ಯಾಯವಾಗಿ ಸಹಕಾರ ಸಂಘಗಳ ಷೇರುದಾರರಾಗಿ ಹಳ್ಯಾಳದಲ್ಲಿನ ಕರ್‌ಕರ್ ಮುಂಡ ಸಮುದಾಯದ ಜನರು ಕೃಷ್ಣ ನದಿಯಲ್ಲಿ ಮೀನುಗಾರಿಕೆಯನ್ನು ವೃತ್ತಿಯನ್ನಾಗಿಸಿಕೊಂಡಿದ್ದಾರೆ. ಪುರುಷರು ಮೀನು ಹಿಡಿದರೆ ಅದನ್ನು ಮಾರುವ ಕಾಯಕದಲ್ಲಿ ಮಹಿಳೆಯರು ತೊಡಗಿದ್ದಾರೆ. ಮೀನುಗಳನ್ನು ಹಿಡಿಯುವುದಕ್ಕೆ ಕೆಲವೊಂದು ವಿಧಾನಗಳಿದ್ದಾಗ್ಯೂ ಮಹಿಳೆಯರು ಹಳ್ಳಗಳಲ್ಲಿ ನೀರಿಗೆ ಒಡ್ಡು ನಿರ್ಮಿಸಿ ನೀರನ್ನು ಖಾಲಿಮಾಡಿ ಮೀನು ಹಿಡಿಯುವರು ಮತ್ತು ಕೆಲವರು ತಮ್ಮ ಸೀರೆಗಳ ಮೂಲಕವು ಮೀನು ಹಿಡಿಯುವುದನ್ನು ಕಾಣಬಹುದು. ಈ ರೀತಿಯಾಗಿ ಮೀನಿನ ಬೇಟೆಯು ಕರ್‌ಕರ್ ಮುಂಡರ ಜೀವನ ವಿಧಾನದಲ್ಲಿ ರೂಢಿಯಾಗಿರುವುದು.

**ಉಡದ ಬೇಟೆ :**

ಹಗಲಿನ ಹೊತ್ತಿನಲ್ಲಿ ನಾಯಿಗಳ ಸಹಾಯದಿಂದ ಉಡದ ಬೇಟೆಯಾಡುವರು. ಕರ್‌ಕರ್ ಮುಂಡರು ಇದನ್ನು ಉಡಮುಯಾಟ ಎನ್ನುವರು. ಮಳೆ ಬಂದ ನಂತರ ಭೂಮಿಯ ಮೇಲೆ ಶಾಖ ಹೆಚ್ಚಾದಾಗ ಉಡವು ಗವಿ, ಹುತ್ತ, ಬೋನಿನಿಂದ ಗಮ್ಮಕ್ಕೆ ಹೊರಗೆ ಬರುತ್ತದೆ. ಆಗ ನಾಯಿ ಅದರ ವಾಸನೆಯನ್ನು ಹಿಡಿದು ಬೆನ್ನಟ್ಟಿ ಬೇಟೆಯಾಡುತ್ತದೆ. ಆಕಸ್ಮಾತ್ ಅದು ತಪ್ಪಿಸಿಕೊಳ್ಳಲು ಹುತ್ತ ಗವಿ, ಬೋನು ಸೇರಿಕೊಂಡರೆ, ಆಗ ಬೇಟೆಗಾರ ಆಯುಧಗಳ ಸಹಾಯದಿಂದ ಅದು ಹೊಕ್ಕ ಸ್ಥಳವನ್ನು ಅಗೆಯುವನು.

ಅದು ನೆಲ ಹಿಡಿದರೆ ಏಳು ಜೊತೆ ಎತ್ತು ಕಟ್ಟಿ ಎಳೆಸಿದರೂ ಬರುವುದಿಲ್ಲ ಎಂಬ ಮಾತಿದೆ. ಉಡದ ಉಗುರುಗಳು ಅಷ್ಟು ಬಲಿಷ್ಠವಾಗಿರುತ್ತವೆ ಎಂದು ನಂಬಲಾಗಿದೆ. ಅದಕ್ಕಾಗಿ ಬೇಟೆಗಾರ ಕಂಚಿ ಕಡ್ಡಿಯನ್ನು ಅದರ ಮರ್ಮಾಂಗಕ್ಕೆ ಚುಚ್ಚಿದಾಗ ಅದು ನೆಲವನ್ನು ಬಿಡುತ್ತದೆ. ಆಗ ಬಾಲವನ್ನು ಅದರ ಬಾಯಿಗೆ ಸೇರಿಸಿ ಕಾಲು ಕಟ್ಟಿ ಹಿಡಿಯುವನು. ಉಡದ ಬೇಟೆ ಆಕಸ್ಮಿಕವಾಗಿ ಆಗುವುದಲ್ಲದೇ ಅದು ಸಿಕ್ಕರೆ ಆ ದಿನ ಸಂತೋಷದಾಯಕವಾಗುವುದು. ಇದರ ಚರ್ಮ ಸುಲಿದು ಸಂಗೀತ ವಾದ್ಯಗಳನ್ನು ಕಟ್ಟುವರು. ಇದರ ಕೊಬ್ಬಿನಿಂದ ಉಡಮುನ್ನೈಯ್ಯಿ ತಯಾರಿಸುವರು. ಇದು ಮೈಕೈ, ಮಂಡಿನೋವು ಮತ್ತು ಉಳುಕುಗಳಿಗೆ ಔಷಧಿಯಾಗಿ ಬಳಕೆಯಾಗುವುದು. ಉಡ ಕೇವಲ ಆಹಾರವಾಗದೆ ಔಷಧಿಯ ಕಾರಣದಿಂದಲೂ ಮಹತ್ವ ಪಡೆದುಕೊಂಡಿದೆ.

**ಈಣಚಿ ಬೇಟಿ (ಅಳಿಲುಬೇಟೆ) :**

ಈಣಚಿ ಬೇಟಿ ಎಂದು ಕರೆಯಲ್ಪಡುವ ಅಳಿಲು ಬೇಟೆಯು ವಿಶೇಷವಾಗಿದೆ ಎಂದು ಹೇಳಬಹುದು. ಅಳಿಲನ್ನು ವಿಶೇಷವಾಗಿ ತಯಾರಿಸಿದ ಬಲೆಯಿಂದ ಹಿಡಿಯುವರು. ಅಳಿಲು ಹಿಡಿಯುವ ವಿಧಾನದಲ್ಲಿ ಕ್ಯಾಟರಿ ಬಿಲ್ಲಿನಿಂದ ಒಡೆದು ಹಿಡಿಯುವ ವಿಧಾನ ಒಂದಾದರೆ, ಬಲೆಯಿಂದ ಹಿಡಿಯುವುದು ಮತ್ತೊಂದು ವಿಧಾನವಾಗಿದೆ. ಮರದಲ್ಲಿರುವ ಅಳಿಲನ್ನು ಗಮನಿಸಿ ಆ ಮರದ ಸುತ್ತಲು ಮತ್ತು ಅದು ತಪ್ಪಿಸಿಕೊಳ್ಳಲು ಅನುಕೂಲವಾಗುವಂತಹ ಪೊದೆಗಳಲ್ಲಿ ಈ ಬಲೆಯನ್ನು ಬಿಡುವರು. ಬಲೆಗೆ ಅಭಿಮುಖವಾಗಿ ನಿಂತು ಅಳಿಲಿಗೆ ಕಲ್ಲಿನಿಂದ ಒಡೆದು ಮರದಿಂದ ಕೆಳಗೆ ಇಳಿಸಿ ಬಲೆಯ ಕಡೆಗೆ ಓಡಿಸುವರು. ಪೊದೆಯಲ್ಲಿ ಅಡಗಿಕೊಳ್ಳಲು ಪ್ರಯತ್ನಿಸಿದ ಅಳಿಲಿನ ತಲೆ ಬಲೆಗೆ ಸಿಕ್ಕಿ ಒದ್ದಾಡುವಾಗ ಬೇಟೆಗಾರ ಕುತ್ತಿಗೆ ಹಿಸುಕಿ ಸಾಯಿಸುವನು.

**ತಾವೆಲಿ ಯಾಟ (ಆಮೆ) :**

ಬಾವಿಯಲ್ಲಿನ ಆಮೆಗಳನ್ನು ನೀರಿನಲ್ಲಿ ಮುಳುಗಿ ಹಿಡಿದು ತಂದು ತಿನ್ನುತ್ತಿದ್ದರು ಮತ್ತೆ ಕೆಲವು ಸಮಯದಲ್ಲಿ ಮೀನಿನ ಬಲೆಯಿಂದ ಆಮೆಗಳನ್ನು ಹಿಡಿಯಲಾಗುತ್ತಿತ್ತು. ಅಪರೂಪಕ್ಕೆ ಇವು ಸಿಗುತ್ತಿದ್ದರಿಂದ ತಾವೆಲಿಯನ್ನು ವಿಶೇಷ ಆಹಾರವಾಗಿ ಕರ್‌ಕರ್ ಮುಂಡರು ಸ್ವೀಕರಿಸಿದ್ದರು. ಇಂದು ತಾವೆಲಿಗಳು ದೊರೆಯದಿರುವುದರಿಂದ ಈ ಆಹಾರ ಪದ್ಧತಿ ಕಣ್ಮರೆಯಾಗಿದೆ.

**ಮುಂಗೂಸಿ ಬೇಟೆ**

ಮುಂಗೂಸಿ ಬೇಟೆಯು ವಿಶೇಷತೆಯಿಂದ ಕೂಡಿರುವಂತ್ತಾಗಿದ್ದು, ಇದನ್ನು ತಿನ್ನುವ ಪರಿಪಾಠ ಪೂರ್ವದಿಂದಲೂ ಕರ್‌ಕರ್ ಮುಂಡರಲ್ಲಿತ್ತು. ಮುಂಗೂಸಿಯನ್ನು ಹಿಡಿಯಲು

ಅಳಿಲು ಬೇಟೆಯ ಬಲೆಯನ್ನು ಬೇಲಿಯಲ್ಲಿ ಹೂಡಿ ಮುಂಗೂಸಿ ಹಿಡಿದು ತಿನ್ನುತ್ತಿದ್ದರು. ಈ ಸಮುದಾಯದವರು ಪ್ರಾಣಿ ಜೀವಿಗಳನ್ನಲ್ಲದೆ ಹಕ್ಕಿ, ಪಕ್ಷಿ, ಹಿಡಿದು ತ್ತಿನ್ನುವುದನ್ನು ಸಹ ರೂಢಿಸಿಕೊಂಡಿದ್ದರು. ಅಂತಹ ಹಕ್ಕಿ ಬೇಟೆಯಲ್ಲಿ ಕೌಜುಗ, ಪುರಲೆ, ನವಿಲು, ಪಾರಿವಾಳಗಳನ್ನು ಹಿಡಿದು ತಿನ್ನುತ್ತಿದ್ದರು.

**ಕೌಜುಮುಯಾಟ (ಕೌಜುಗಬೇಟೆ)**

ಕರ್‌ಕರ್ ಮುಂಡರು ಕೌಜುಗದ ಮಾಂಸವು ಗಟ್ಟಿ ಹಾಗೂ ಸತ್ವಯುತವಾದ ಆಹಾರ ಎಂಬ ನಂಬಿಕೆಯಿಂದ ಕೌಜುಗದ ಬೇಟೆಯಲ್ಲಿ ತೊಡಗಿರುವುದನ್ನು ಕಾಣಬಹುದಾಗಿದೆ. ಅದಕ್ಕಾಗಿ ಕೌಜುಗಳನ್ನು ಹಿಡಿಯಲು ಹಲವಾರು ವಿಧಾನಗಳನ್ನು ಬಳಸುವರು. ಪಂಜರದಲ್ಲಿ ಸಾಕಿದ ಕೌಜುಗಳ ಸಹಾಯದಿಂದ ಕಾಡು ಕೌಜುಗಳನ್ನು ಹಿಡಿಯಲಾಗುವುದು. ಕೌಜುಗಳನ್ನು ಹಿಡಿಯಲು ವಿಶೇಷ ಕುಣಿಕೆಗಳಿಂದ ಕೂಡಿರುವ ಪಾಜಿಗಳನ್ನು ಬಳಸುತ್ತಿದ್ದರು. ಬಿದಿರು ಕಡ್ಡಿ, ಎತ್ತಿನ ಅಥವಾ ಕುದುರೆ ಬಾಲದ ಕೂದಲಿನಿಂದ ಉರುಲುಗಳನ್ನು ಮಾಡಿ ಪಾಜಿಯನ್ನು ತಾವೇ ತಯಾರಿಸಿಕೊಳ್ಳುತ್ತಿದ್ದರು. ಇದನ್ನು ಬೇಲಿ ಅಥವಾ ಪೊದೆಗಳ ಮಧ್ಯದಲ್ಲಿ ಬಿಡುವರು. ಅದರ ಹಿಂಭಾಗದಲ್ಲಿ ಸಾಕಿದ ಕೌಜುಗಳ ಪಂಜರವನ್ನು ಇಡಲಾಗುತ್ತಿತ್ತು. ಪಾಜಿ ಹಾಗೂ ಪಂಜರದ ಪಕ್ಷಿಗಳು ಕಾಡಿನ ಕೌಜುಗಗಳಿಗೆ ಕಾಣದಂತೆ ಇಡುವರು. ಸಾಕಿದ ಕೌಜುಗಳು ತಮ್ಮದೇ ಆದ ಶೈಲಿಯಲ್ಲಿ ಕೂಗುತ್ತಿರುವಾಗ ಆ ದನಿಯನ್ನು ಗ್ರಹಿಸಿದ ಕಾಡು ಕೌಜುಗಗಳು ದನಿಯ ಕಡೆ ಬರುತ್ತಿರುವಾಗ ಮಧ್ಯದಲ್ಲಿರುವ ಪಾಜಿಯ ಉರುಲಿಗೆ ಸಿಕ್ಕಿಕೊಂಡು ಒದ್ದಾಡಿ ಸಾಯುವವು. ಪಾಜಿಯಿಂದ ಬಿಡಿಸಿ ರೆಕ್ಕೆ ಕಟ್ಟಿ ಮತ್ತೊಂದೆಡೆಗೆ ಪಾಜಿ ಬಿಟ್ಟು ಮತ್ತೆ ಇದೆ ಕ್ರಮವನ್ನು ಅನುಸರಿಸಿ ಕೌಜುಗ ಬೇಟೆ ಆಡುವರು. ಕೌಜುಗ ಅಲ್ಲದೇ ಇದೇ ಜಾತಿಗೆ ಸೇರಿದ ಪುರಲೆಯನ್ನು ಬೇಟೆಯಾಡುವರು. ಅದನ್ನು ಸಹ ಈ ತರಹದ ಪಾಜಿಯಿಂದಲೇ ಹಿಡಿಯುವುದನ್ನು ಕರ್‌ಕರ್ ಮುಂಡರಲ್ಲಿ ಕಾಣಬಹುದಾಗಿದೆ.

**ಪುರಲೆ ಬೇಟೆ**

ಪುರಲೆಯು ಕೌಜುಗ ಹಕ್ಕಿಯ ಜಾತಿಗೆ ಸೇರಿದ್ದು, ಗಾತ್ರದಲ್ಲಿ ಚಿಕ್ಕದಾಗಿರುವುದು. ಪುರಲೆಯಲ್ಲಿ ಹಲವಾರು ಪ್ರಭೇಧಗಳನ್ನು ಗ್ರಹಿಸಿರುವ ಬೇಟೆಗಾರನು ಅವುಗಳಿಗೆ ಹಲವು ಹೆಸರು ನೀಡಿರುವನು. ಕುಲ್ಡು ಪುರಲೆ, ಕೆಂದಪುರಲೆ, ಚಿಪ್ಲಕ್ಕಿ, ಗೇರುಗ ಎಂಬ ಹೆಸರುಗಳಿಂದ ಕರೆಯುಲಾಗಿದೆ. ಪುರುಲೆಯು ಕೌಜುಗಕ್ಕಿಂತ ಗಾತ್ರದಲ್ಲಿ ಚಿಕ್ಕದಾಗಿರುವುದರಿಂದ ಅವುಗಳ ಗಾತ್ರಕ್ಕೆ ಅನುಗುಣವಾಗಿ ಸಣ್ಣ ಉರುಲಿನ ಪ್ರತ್ಯೇಕ ಪಾಜಿಯನ್ನು ಕರ್‌ಕರ್ ಮುಂಡರು ತಯಾರಿಸಿರುವರು. ಕುಲ್ಡು ಪುರಲೆ, ಗೇರುಗ

ಹೆಸರಿನ ಹಕ್ಕಿಗಳು ಗುಂಪುಗುಂಪಾಗಿ ಇರುವುದರಿಂದ ಪಾಜಿಯನ್ನು ಪೊದೆಯ ಒಂದು ದಿಕ್ಕಿಗೆ ಉದ್ದವಾಗಿ ಬಿಟ್ಟು ವಿರುದ್ಧ ದಿಕ್ಕಿನಿಂದ ಕಲ್ಲು, ಕೋಲಿನಿಂದ ಸೋವುತ್ತಾ ಬರುವರು. ಆಗ ಕುಲ್ಡುಪುರಲೆ ಗೇರುಗಗಳು ಸಾಲು ಸಾಲಾಗಿ ಒಂದರ ಹಿಂದೆ ಒಂದು ಬಂದು ಪಾಜಿಯಲ್ಲಿನ ಉರುಲುಗಳಿಗೆ ಸಿಕ್ಕಿಕೊಳ್ಳುವವು. ಇದೆ ತರಹ ಪಾಜಿಯ ಹಿಂಬದಿಯಲ್ಲಿ ಕುಳಿತು ಚಿಪ್ಲಕ್ಕಿ ಕೆಂದಪುರುಲೆಗಳ ಹಾಗೆ ಸಿಳ್ಳು ಹಾಕಿ ಕರೆದು ಪಾಜಿಯಲ್ಲಿ ಬೀಳುವಂತೆ ಮಾಡುವುದು ಮತ್ತೊಂದು ಬೇಟೆಯ ಕಲೆಯಾಗಿದೆ. ಇದಲ್ಲದೇ ಬಡಗಲು ಬಂಡೆ ಮತ್ತು ಹಾಸು ಬಂಡೆಯಿಂದಲೂ ಇವುಗಳನ್ನು ಹಿಡಿಯುವರು. ಪುರಲೆಗಳು ಕೆದರಿದ ಸ್ಥಳಗಳಿಗೆ ನಾಲ್ಕು ದಿನದ ವರೆಗೆ ರಾಗಿ, ಜೋಳ, ಗೋಧಿ, ಕಾಳು ಹಾಕಿ ಸವಿಗೊಂಡುಕೊಳ್ಳುವಂತೆ ಮಾಡುವರು. ಮಾರನೆಯ ದಿನ ಕಾಳು ತಿನ್ನಲು ಬರುತ್ತವೆ ಎಂಬ ಖಚಿತ ಮಾಹಿತಿಯಿಂದ ದೊಡ್ಡ ಚಪ್ಪಡಿ ಕಲ್ಲಿಗೆ ಚಿಕ್ಕ ಕವೆಗೋಲು ಇಟ್ಟು ನಿಲ್ಲಿಸಿ ಒಂದು ಸಣ್ಣ ಕಡ್ಡಿಯಿಂದ ಅದು ಬೀಳುವಂತೆ ಇಡುವರು. ಹಾಸು ಬಂಡೆಯ ಕೆಳಗೆ ಕಾಳುನ್ನು ಹಾಕಿ ಬರುವರು. ಪುರಲೆಗಳು ಕಾಲು ಕೆದರಿ ತಿನ್ನುವುದರಿಂದ ಕೆದರುವಾಗ ಆ ಕಡ್ಡಿಗೆ ತಗುಲಿಸಿದಾಗ ಆ ಕಲ್ಲು ಚಪ್ಪಡಿ ಅವುಗಳ ಮೇಲೆ ಬೀಳುವುದು. ಮರುದಿನ ಬೆಳಗ್ಗೆ ಬೇಟೆಗಾರ ಸತ್ತ ಪುರುಲೆಗಳನ್ನು ತೆಗೆದುಕೊಂಡು ಬರುವನು.

**ಅಡವಿ ಪಾರಿವಾಳದ ಬೇಟೆ**

ಹಕ್ಕಿಗಳಲ್ಲಿ ಅಡವಿ ಪಾರಿವಾಳವು ಆಹಾರ ಮತ್ತು ಆರೋಗ್ಯವಾಗಿ ಮಹತ್ವ ಪಡೆದಿದೆ. ಇದರ ಮಾಂಸವು ರೋಗ ನಿರೋಧಕ ಶಕ್ತಿಯನ್ನು ಹೊಂದಿರುವುದರಿಂದ ಹೆಚ್ಚಿನ ಮಹತ್ವ ಪಡೆದಿದೆ. ಅಡವಿ ಪಾರಿವಾಳಗಳು ಯಾವಾಗಲೂ ಪಾಳು ಬಿದ್ದ ಬಾವಿ, ಮನೆ, ಬಂಗಲೆಗಳನ್ನು ವಾಸಸ್ಥಾನವನ್ನಾಗಿಸಿಕೊಂಡಿರುತ್ತವೆ. ಅವುಗಳನ್ನು ಹಿಡಿಯಲು ಕರ್‌ಕರ್ ಮುಂಡರು ರಾತ್ರಿ ಮತ್ತು ಹಗಲಿನ ಎರಡು ಸಮಯದಲ್ಲಿ ಬಾವಿಗೆ ಸಂಪೂರ್ಣವಾಗಿ ಬಲೆಯಿಂದ ಮುಚ್ಚಿ ಬಡಿಗೆಯಿಂದ ಶಬ್ದ ಮಾಡುವರು. ಆಗ ಆ ಶಬ್ದಕ್ಕೆ ಎದರಿದ ಪಾರಿವಾಳಗಳು ಬಾವಿಯಿಂದ ಹೊರಗಡೆ ಬರುವಾಗ ಬಲೆಯಲ್ಲಿ ಸಿಕ್ಕಿ ಕೊಳ್ಳುವವು. ಆಗ ಸುತ್ತಲು ಇರುವ ಬೇಟೆಗಾರರು ಅವುಗಳನ್ನು ಬಿಡಿಸಿ ಕೊಂಡು ಚೀಲದಲ್ಲಿ ಹಾಕಿಕೊಳ್ಳುವರು. ರಾತ್ರಿಯ ಸಮಯದಲ್ಲಾದರೆ ಬಾವಿಗೆ ಬಲೆ ಹಾಕಿ ಬಾವಿಯ ಒಳಕ್ಕೆ ಬ್ಯಾಟರಿ ಬೆಳಕು ಬಿಟ್ಟಾಗ ಅವು ವೇಗವಾಗಿ ಹೊರಗಡೆ ಬಂದು ಬಲೆಗೆ ಬೀಳುತ್ತವೆ. ಪಾರಿವಾಳದ ಆಹಾರವು ಪಾರ್ಶ್ವವಾಯು ಬರದಂತೆ ತಡೆಯುವ ಮೂಲಕ ಸ್ವಾಸ್ಥ್ಯ ಆರೋಗ್ಯಕ್ಕೆ ಕಾರಣ ಎಂದು ತಿಳಿದುಕೊಂಡಿದ್ದಾರೆ. ಹೀಗಾಗಿ ಕರ್‌ಕರ್ ಮುಂಡರು ಸೇರಿದಂತೆ ಹಲವಾರು ಬುಡಕಟ್ಟು ಸಮುದಾಯಗಳು ತಾವು

ತಿನ್ನುವ ಆಹಾರದಿಂದ ರೋಗ ನಿರೋಧಕ ಶಕ್ತಿಯನ್ನು ಪಡೆದು ಸದೃಢ ದೇಹ, ಸ್ವಸ್ಥ ಆರೋಗ್ಯ ಹೊಂದಿರುವರು ಎಂದು ಹೇಳಬಹುದು.

**ಕರ್‌ಕರ್ ಮುಂಡರ ಬೇಟೆಯಲ್ಲಿನ ನಂಬಿಕೆ ನಿಷೇಧಗಳು**

ಕರ್‌ಕರ್ ಮುಂಡರು ಮೂಲತಃ ಪಶುಪಾಲಕರಾಗಿದ್ದವರು ಎಂದು ಅವರ ಬೆಡಗುಗಳಿಂದ ತಿಳಿದುಬರುತ್ತದೆ. ಪಶುಪಾಲನ ಸಮುದಾಯಗಳು ಬೇಟೆಯನ್ನೂ ಸಹ ಅನುಸರಿಸಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಕರ್ನಾಟಕದ ಬಯಲು ಸೀಮೆಯಲ್ಲಿ ನೆಲೆ ನಿಂತಿರುವ ಪಶುಪಾಲನ ಸಮುದಾಯಗಳಂತೆ ಕರ್‌ಕರ್ ಮುಂಡರು ದಿನನಿತ್ಯದ ಮತ್ತು ವಿಶೇಷ ದಿನದ ಬೇಟೆ ಎಂದು ವಿಂಗಡಿಸಿಕೊಂಡಿರುವುದನ್ನು ಕಾಣಬಹುದು. ಕರ್‌ಕರ್ ಮುಂಡರಲ್ಲಿ ಯುಗಾದಿಯ ದಿನದಂದು ಬೇಟೆಯಾಡಿ ಮಾಂಸವನ್ನು ತಿನ್ನಲೇಬೇಕು ಎಂಬ ನಿಯಮವಿತ್ತು. ಆ ಸಂಪ್ರದಾಯದಂತೆ ಯುಗಾದಿ ಅಮವಾಸ್ಯೆಯ ದಿನದಂದು ಬೇಟೆಗೆ ಹೋಗುವರು. ಆ ದಿನದಂದು ಬೇಟೆಗೆ ಹೋದವರು ಬೇಟೆ ಸಿಗುವವರೆಗೂ ಮರಳಿ ಊರಿಗೆ ಬರುವಂತಿಲ್ಲ. ಬೇಟೆಯನ್ನು ಹೊಡೆದು ತಂದಾಗ ಊರಿನಲ್ಲಿನ ಮಹಿಳೆಯರು ಅವರಿಗೆ ಆರತಿ ಎತ್ತುವ ಮೂಲಕ ಸ್ವಾಗತಿಸುವರು. ತಂದ ಬೇಟೆಯ ಒಂದು ಪಾಲನ್ನು ಅವರಿಗೆ ನೀಡುವರು. ಒಂದು ವೇಳೆ ಬೇಟೆ ಆಗದಿದ್ದಾಗ ಬೇಟೆಗಾರರ ಗುಂಪಿನಲ್ಲಿ ಮಾವಂದಿರೇನಾದರು ಇದ್ದರೆ ಅವರನ್ನು ಬೆತ್ತಲು ಮಾಡಿ ಬೇಟೆ ಸೊಪ್ಪನ್ನು (ಜೀರುಂಡೆಸೊಪ್ಪು)ಉಡಿಸುವರು. ಬೇಟೆ ಆಗುವವರೆಗೂ ಬಟ್ಟೆ ಧರಿಸುವಂತಿಲ್ಲ ಮತ್ತೆ ಕೆಲವು ಸಂದರ್ಭದಲ್ಲಿ ಬೇಟೆಗೆ ಹೋಗುವಾಗ ಎದುರಿಗೆ ಬಂದ ಅಥವಾ ಮಾತಾಡಿಸಿದ ವ್ಯಕ್ತಿಯ ಚಿತ್ರವನ್ನು ಮೂರು ದಾರಿ ಕೂಡುವ ಸ್ಥಳದಲ್ಲಿ ಬಿಡಿಸಿ ಚಪ್ಪಲಿಯಿಂದ ಹೊಡೆದು ಮೂತ್ರ ಮಾಡುವರು. ಇದರಿಂದ ಬೇಟೆಯ ಅಪಶಕುನ ಹೋಗುತ್ತದೆ ಎಂಬ ನಂಬಿಕೆ ಇದೆ.

ಬೇಟೆಯಾಡಿದ ಮುಳ್ಳು ಹಂದಿಯ ಮಾಂಸವನ್ನು ಅಡವಿಯಲ್ಲಿಯೇ ಸುಟ್ಟು ಮನೆಗೆ ತರುವರು. ಅದರ ಮುಳ್ಳುಗಳನ್ನು ಮಾತ್ರ ತರುವಂತಿಲ್ಲ. ಕಾರಣ ಆ ಮುಳ್ಳುಗಳಿಂದ ಜಗಳ ಸಂಭವಿಸುತ್ತದೆ ಎಂಬ ನಂಬಿಕೆ ಬಲವಾಗಿ ಬೇರೂರಿದೆ. ಇನ್ನೊಂದು ಕಾರಣವೆಂದರೆ ಆ ಮುಳ್ಳುಗಳಿಂದ ಬೇರೆಯವರು ಮಾಟ ಮಂತ್ರ ಮಾಡಿಸುತ್ತಾರೆ ಎಂಬ ಭಯ ಇವರಲ್ಲಿದೆ.

ಕರ್‌ಕರ್ ಮುಂಡರು ಬಾಣಂತಿ ಹಾಗೂ ಮಗುವಿಗೆ ದುಷ್ಟ ಶಕ್ತಿಗಳು ಬಾರದಿರಲೆಂದು ಕಾಗೆಯ ಪುಕ್ಕವನ್ನು ಮನೆಯ ಬಾಗಿಲ ಮೇಲೆ ತಂದು ಕಟ್ಟುತ್ತಿದ್ದ ನಂಬಿಕೆಯನ್ನು ರೂಢಿಸಿಕೊಂಡು ಬಂದಿರುವರು. ಕಾಗೆ ಶನಿಯ ಸಂಕೇತವಾಗಿರುವ

ಕಾರಣ ಕಾಗೆಯ ಪುಕ್ಕವನ್ನು ಮನೆಯ ಬಾಗಿಲಿಗೆ ಕಟ್ಟುವುದರಿಂದ ಮನೆಯಲ್ಲಿ ಯಾವುದೇ ಶನಿ ಕಾಟ ಇರುವುದಿಲ್ಲ ಎಂಬ ನಂಬಿಕೆ ಇವರಲ್ಲಿದೆ. ಆದರೆ ಕೆಲವು ಅಧ್ಯಯನಕಾರರು ಇದನ್ನು ತಪ್ಪಾಗಿ ಗ್ರಹಿಸಿ ಕರ್‌ಕರ್ ಮುಂಡ ಸಮುದಾಯದಲ್ಲಿನ ಒಳಪಂಗಡವಾಗಿರುವ ಬಂಡ ಅಥವಾ ಕಾಕುಲ(ಕಾಗೆಕುಲ)ಮೊಂಡರು ಕಾಗೆಗಳನ್ನು ತಿನ್ನುತ್ತಿದ್ದರು ಎಂದು ಉಲ್ಲೇಖಿಸಿದ್ದಾರೆ. ಯುಗಾದಿಯ ದಿನದಂದು ಬೇಟೆಯಾಡಿ ತಂದ ಮಾಂಸವನ್ನು ಸಮುದಾಯದವರ ಎಲ್ಲಾ ಮನೆಗೆ ಬೇಟೆಗೆಯ ಮಾಂಸವನ್ನು ಸಮನಾಗಿ ಪಾಲು ಹಾಕಿ ಹಂಚಲಾಗುವುದು. ಇದು ಬುಡಕಟ್ಟುಗಳ ಬಾಂಧವ್ಯ ಮತ್ತು ಆಹಾರ ಹಂಚಿಕೆಯ ಸಹಕಾರವನ್ನು ಸೂಚಿಸುತ್ತದೆ. ನವಿಲನ್ನು ಬೇಟೆಯಾಡಿದರೆ ಮುಂಗೈ ಊನವಾಗುತ್ತದೆ ಎಂಬ ನಂಬಿಕೆ ಇರುವ ಕಾರಣ ನವಿಲು ಬೇಟೆಯನ್ನೇ ನಿಷೇಧಿಸಿದ್ದಾರೆ. ಶ್ರಾವಣ ಮಾಸದಲ್ಲಿ ಯಾವ ಬೇಟೆಯನ್ನು ಮಾಡುವುದಿಲ್ಲ. ಕಾರಣ ಆ ಸಂದರ್ಭದಲ್ಲಿ ಜೀವಿಗಳು ಗರ್ಭಧರಿಸುವ ಸಂದರ್ಭವಾಗಿರುತ್ತದೆ. ಅವುಗಳ ಸಂತಾನೋತ್ಪತ್ತಿ ಹೆಚ್ಚಾಳವಾದ ಸಂದರ್ಭದಲ್ಲಿ ಮಾತ್ರ ಕೆಲವು ಆಯ್ದ ಬೇಟೆಯನ್ನು ಮಾಡುವರು. ಜೊತೆಗೆ ಕರ್‌ಕರ್ ಮುಂಡರು ಬೇಟೆಯ ಎಲ್ಲಾ ಪದಗಳನ್ನು ತೆಲುಗಿನಲ್ಲಿ ಸಂಬೋಧಿಸಲ್ಪಡುತ್ತಿರುವುದನ್ನು ಕಾಣಬಹುದಾಗಿದೆ.

ಬೇಟೆ ನಿಷೇಧ ಕಾಯ್ದೆಯಿಂದಾಗಿ ಬಹುತೇಕ ಎಲ್ಲಾ ಅಲೆಮಾರಿ ಹಾಗೂ ಬುಡಕಟ್ಟುಗಳಲ್ಲಿ ಬೇಟೆ ಹಾಗೂ ಬಲಿಯು ಬೇರೆಯೇ ಸ್ವರೂಪ ಪಡೆದುಕೊಂಡಿದೆ. ಇದಕ್ಕೆ ಕರ್‌ಕರ್ ಮುಂಡರು ಹೊರತಾಗಿಲ್ಲ. ಕೆಲವೊಂದು ವಿಶೇಷ ಸಂದರ್ಭದಲ್ಲಿ ಮಾತ್ರ ಮೂಲದಿಂದ ಆಚರಿಸಿಕೊಂಡು ಬಂದ ಸಂಪ್ರದಾಯಗಳನ್ನು ಮಾತ್ರ ಅನುಸರಿಸಿಕೊಂಡು ಬರುತ್ತಿರುವುದು ಕಂಡುಬರುತ್ತದೆ. ನಾಗರಿಕತೆಯ ಅಂಚಿಗೆ ಬರುತ್ತಿರುವ ಈ ಸಮುದಾಯವು ಆಧುನಿಕತೆಯ ಸೆಳೆತದಿಂದಾಗಿ ಸಂಪ್ರದಾಯ ಹಾಗೂ ಮೂಢನಂಬಿಕೆಗಳನ್ನು ಅಷ್ಟಾಗಿ ಪಾಲಿಸಿಕೊಂಡು ಬರದಿರುವುದನ್ನೂ ಸಹ ನಾವು ಕಾಣಬಹುದು

**ಹಂದಿ ಸಾಕಾಣಿಕೆ :**

ಹಂದಿ ಸಾಕಾಣಿಕೆಯನ್ನು ಕೊರಚರು, ಕೊರವರು ಪಾರಂಪರಿಕ ವೃತ್ತಿಯಾಗಿ ಉಳಿಸಿಕೊಂಡು ಬಂದಿರುವರು. ಆದರೆ ಕರ್‌ಕರ್‌ಮುಂಡರ ಮೂಲವೃತ್ತಿ ಹಂದಿ ಸಾಕಾಣಿಕೆಯಲ್ಲ. ಕರ್‌ಕರ್ ಮುಂಡರಲ್ಲಿ ಹಿಂದೆ ಹಂದಿ ತಿನ್ನುವುದು ನಿಷೇಧವಿತ್ತು. ರಜಾಕಾರರ ಆಳ್ವಿಕೆಯ ಸಂದರ್ಭದಲ್ಲಿ ರಜಾಕಾರರು ಎಲ್ಲಾ ಸಮುದಾಯಗಳನ್ನು

ಮತಾಂತರಗೊಳಿಸುವ ಹುನ್ನಾರ ನಡೆಸಲಾಯಿತು. ಈ ಮತಾಂತರ ಹಾವಳಿಯಿಂದ ತಪ್ಪಿಸಿಕೊಳ್ಳಲು ಕೆಲವು ಸಮುದಾಯಗಳು ಅನಿವಾರ್ಯವಾಗಿ ಹಂದಿಯನ್ನು ಆಹಾರವಾಗಿ ಬಳಸಲು ಪ್ರಾರಂಭಿಸಿದರು. ಹಾಗಾಗಿ ಕರ್‌ಕರ್ ಮುಂಡ ಸಮುದಾಯವು ಮತಾಂತರ ಪ್ರಕ್ರಿಯೆಯಿಂದ ಪಾರಾದರು ಎನ್ನಬಹುದು. ಮುಸ್ಲಿಂರಿಗೆ ಹಂದಿಯು ಅನಿಷ್ಟವಾಗಿದ್ದು ಅದನ್ನು ತಿಂದರೆ ಮತಾಂತರ ಮಾಡಲು ಸಾಧ್ಯವಿಲ್ಲ ಎಂಬ ಸತ್ಯ ಇವರಿಗೆ ಅರಿವಾಗಿದ್ದರಿಂದ ತಮ್ಮ ಮೂಲ ಧರ್ಮ ಹಾಗೂ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳುವ ಕಾರಣಕ್ಕಾಗಿ ಅನಿವಾರ್ಯವಾಗಿ ಹಂದಿಯನ್ನು ತಿನ್ನಲು ಒಪ್ಪಿಕೊಳ್ಳಲೇ ಬೇಕಾಯಿತು ಎಂಬುದು ತಿಳುವಳಿಕೆದಾರರಿಂದ  ತಿಳಿದುಬರುತ್ತದೆ. ಮೂಲದಲ್ಲಿ ಹಂದಿ ಬೇಟೆಯನ್ನು ಮಾಡಿದರೂ ಸಹ ಅದರ ಮಾಂಸವನ್ನು ಸೇವಿಸುತ್ತಿರಲಿಲ್ಲ. ಆದರೆ ರಜಾಕಾರರ ಮತಾಂತರಕ್ಕೆ ಬಲಿಯಾಗಬಾರದೆಂದು ಅನಿವಾರ್ಯವಾಗಿ ಹಂದಿ ಮಾಂಸವನ್ನು ಆಹಾರವಾಗಿ ಬಳಸಲು ಪ್ರಾರಂಭಿಸಿದರು. ತದನಂತರ ಇದು ಅವರ ಜೀವನಾವರ್ತನ ಆಚರಣೆಗಳಲ್ಲಿ ಹಂದಿಯು ಪ್ರಮುಖ ಸ್ಥಾನವನ್ನು ಪಡೆದುಕೊಂಡಿತು. ಮುಂದೆ ಇವರ ಮೂಲ ಕುಲಕಸುಬಿಗೆ ಪರ್ಯಾಯ ವೃತ್ತಿಯಾಗಿ ಹಂದಿ ಸಾಕಾಣಿಕೆಯಾಗಿನೆಚ್ಚಿಕೊಂಡರು. ಹೀಗೆ ಮತಾಂತರ ಕಾರಣಕ್ಕಾಗಿ ರೂಢಿಸಿಕೊಂಡು ಬಂದ ಹಂದಿ ಸಾಕಾಣಿಕೆಯು ಇಂದು ಉದ್ಯಮವಾಗಿ ಮಾನ್ಯತೆ ಪಡೆದಿದೆ.

ಕರ್ನಾಟಕದ ಕಿತ್ತೂರು, ಮಲ್ಲಾಪುರ, ಮುಧೋಳ, ಮಧುಗಿರಿ, ದಾವಣಗೆರೆ ಇತ್ಯಾದಿ ಸ್ಥಳಗಳಲ್ಲಿನ ಕರ್‌ಕರ್ ಮುಂಡರು ಹಂದಿ ಸಾಕಾಣಿಕೆಯಲ್ಲಿ ತೊಡಗಿರುವರು.ಮನೆಯ ಸಮೀಪದ ಕೊಟ್ಟಿಗೆಯಲ್ಲಿಕೂಡಿಹಾಕಿ ಆಹಾರ ನೀಡಿ ಸಾಕುವುದು ಒಂದು ವಿಧಾನವಾದರೆ, ನಗರ ಅಥವಾ ಹಳ್ಳಿಗಳಲ್ಲಿ ಸ್ವೇಚ್ಛೆಯಾಗಿ ಬಿಟ್ಟು ಸಾಕುವುದು ಮತ್ತೊಂದು ವಿಧಾನವಾಗಿದೆ. ಹಂದಿಯು ತನ್ನ ಸಂತಾನೋತ್ಪತ್ತಿಯಲ್ಲಿ ಹತ್ತರಿಂದ ಹನ್ನೆರಡು ಮರಿಗಳನ್ನು ಹಾಕುತ್ತದೆ. ಮರಿಹಾಕಿದ ಸಂದರ್ಭದಲ್ಲಿ ಕೆಲವು ಹಂದಿಗಳು ತನ್ನ ಮರಿಗಳನ್ನೇ ತಿಂದು ಮತ್ತೆ ಕೆಲವು ನೈಸರ್ಗಿಕವಾಗಿ ಹೊಂದಿಕೊಳ್ಳದೇ ಸಾಯುವವು. ಅಳಿದುಳಿದ ಹಂದಿ ಮರಿಗಳಿಗೆ ಅಂತಿಮವಾಗಿ ಕಿವಿಯನ್ನು ಕತ್ತರಿಸುವರು. ಅವು ೮೦ ರಿಂದ ೧೦೦ ಕಿ.ಲೋ ತೂಕದ ಮಾಂಸದ ಹಂದಿಗಳಾದಾಗ ಹಿಡಿದು ತಂದು, ಕೊಯ್ದು ಮಾಂಸವನ್ನು ಸ್ಥಳೀಯವಾಗಿ ಒಂದು ಕೆ.ಜಿ.ಗೆ ೪೦ ರೂಪಾಯಿಗಳಂತೆ ಮಾರಲಾಗುತ್ತದೆ. ಮತ್ತೆ ಕೆಲವರು ಬೆಳಗಾವಿ ಮೂಲಕ ಗೋವಾ ಹಾಗೂ ಬೆಂಗಳೂರು ಸೇರಿದಂತೆ ಇತರೆ ನಗರಗಳಿಗೆ ಮಾರಾಟ ಮಾಡುವರು. ಯಾವುದೇ ಖರ್ಚಿಲ್ಲದೇ ಹಂದಿ ಸಾಕಾಣಿಕೆಯು ಹೆಚ್ಚು ಲಾಭ ತರುವ ಉದ್ಯಮವಾಗಿದೆ. ಇವರ ಈ ವೃತ್ತಿಗೆ

ಪ್ರತಿಸ್ಪರ್ಧಿಯಾಗಿ ಉದ್ಯಮಿಗಳು ಹಂದಿಯನ್ನು ಪಾರಂಗಳಲ್ಲಿ ಸಾಕಿ ದೇಶ ವಿದೇಶಗಳಿಗೆ ಕಳುಹಿಸಿ ಹೆಚ್ಚು ಲಾಭ ಗಳಿಸುತ್ತಿದ್ದಾರೆ. ಹಂದಿ ಸಾಕಾಣಿಕೆಯ ವೃತ್ತಿಯು ಕರ್‌ಕರ್ ಮುಂಡರು ನಗರದ ಕೊಳಚೆ ಪ್ರದೇಶಗಳಲ್ಲಿ ನೆಲೆನಿಲ್ಲಲು ಕಾರಣವಾಗಿರಬೇಕು.

**ಕೂದಲು ವ್ಯಾಪಾರ**

ಕರ್‌ಕರ್ ಮುಂಡರ ಜೀವನ ನಿರ್ವಹಣೆಯ ಆರ್ಥಿಕ ಮೂಲವಾಗಿ ಕೂದಲು ವ್ಯಾಪಾರವು ಒಂದಾಗಿದೆ. ಕರ್ನಾಟಕ, ಆಂಧ್ರ ಪ್ರದೇಶ ಮತ್ತು ತೆಲಂಗಾಣ ರಾಜ್ಯಗಳಲ್ಲಿನ ಬಹುತೇಕ ಕರ್‌ಕರ್ ಮುಂಡರು ಈ ವೃತ್ತಿಯನ್ನು ಅವಲಂಬಿಸಿ ಬದುಕುತ್ತಿದ್ದಾರೆ. ಇದನ್ನು ಸ್ಟೇಷನರಿ ವ್ಯಾಪಾರ ಎಂದು ಸಹ ಕರೆಯುವರು. ಕರ್ನಾಟಕದಲ್ಲಿ ಈ ಕೂದಲು ಉದ್ಯಮದ ಕೇಂದ್ರ ಮಾರುಕಟ್ಟೆ ಕೊಪ್ಪಳದ ಭಾಗ್ಯನಗರವಾಗಿದೆ. ಈ ವೃತ್ತಿಯಲ್ಲಿ ಮಹಿಳೆಯರೆ ಹೆಚ್ಚು ತೊಡಗಿದ್ದಾರೆ. ಮಹಿಳೆಯರು ಊರೂರು ಸುತ್ತಿ ಸೂಜಿ, ದಾರ, ಪಿನ್ನ, ಕಾಡಿಗೆ, ರಬ್ಬರ್‌ಬೆಂಡು, ಕರಿಮಣಿ ಇತ್ಯಾದಿ ದಿನಬಳಕೆಯ ವಸ್ತುಗಳನ್ನು ನೀಡಿ ಅದಕ್ಕೆ ಪರ್ಯಾಯವಾಗಿ ಕೂದಲನ್ನು ಸಂಗ್ರಹಿಸುವರು. ಸಂಗ್ರಹಿಸಿ ತಂದಂತಹ ಕೂದಲನ್ನು ಶುದ್ಧಗೊಳಿಸಿ ನಗರದ ಇದೇ ಸಮುದಾಯದ ವ್ಯಾಪಾರಿಗಳಿಗೆ ಮಾರುವರು. ಒಂದು ಕಿ.ಲೋ ಕೂದಲಿಗೆ ಮೂರರಿಂದ ನಾಲ್ಕು ಸಾವಿರ ರೂಗಳವರೆಗೆ ಬೆಲೆ ಸಿಗುವುದು. ಅದು ಆಯಾ ನಗರಗಳ ಮಾರುಕಟ್ಟೆಯ ದರದ ಮೇಲೆ ಅವಲಂಬಿಸಿರುತ್ತದೆ. ಹೀಗೆ ಮಹಿಳೆಯರು ಸಂಗ್ರಹಿಸಿ ತಂದ ಕೂದಲನ್ನು ಕೊಂಡುಕೊಂಡು ಕರ್ನಾಟಕದ ಕೊಪ್ಪಳ ನಗರದಲ್ಲಿನ ಭಾಗ್ಯನಗರದಲ್ಲಿರುವ ಮಾರುಕಟ್ಟೆಗೆ ಸಾಗಿಸುವರು. ಇನ್ನು ಕೆಲವರು ಹೈದ್ರಾಬಾದಿನ ಮಾರುಕಟ್ಟೆಯಲ್ಲಿ ಕಿ.ಲೋಗೆ ಕನಿಷ್ಟ ಹತ್ತು ಸಾವಿರ ರೂಗಳ ಬೆಲೆ ಸಿಗುವುದರಿಂದ ಅಲ್ಲಿ ಮಾರಾಟ ಮಾಡುವರು. ಕೊಪ್ಪಳದಲ್ಲಿ ಸಂಗ್ರಹಿಸಿದ ಕೂದಲನ್ನು ಶೈನಿಂಗ್ ಮಾಡಿ ಎಳೆ ಎಳೆಯಾಗಿ ಬಿಡಿಸಿ ಚೌರಿಕೂದಲಿನ ರೂಪಕ್ಕೆ ತಂದು ಸಿಂಬೆಗಳನ್ನಾಗಿ ಮಾಡಿ ಹೈದ್ರಾಬಾದಿನ ಮಾರುಕಟ್ಟೆಯಲ್ಲಿ ಮಾರುವರು. ಇವರು ತಾವು ಕೊಂಡ ಬೆಲೆಗಿಂತ ಹೆಚ್ಚಿನ ಬೆಲೆಗೆ ಮಾರಾಟ ಮಾಡುವುದರಿಂದ ಇವರ ಆರ್ಥಿಕಸ್ಥಿತಿ ಉತ್ತಮವಾಗಿದೆ. ಹೀಗೆ ಸಂಗ್ರಹಿಸಿದ ಕೂದಲನ್ನು ಲೈಸನ್ಸ್ ಹೊಂದಿದ ಗುಂಟೂರಿನ ಫ್ಯಾಕ್ಟರಿಗೆ ಮಾರುತ್ತಾರೆ. ಈ ಫ್ಯಾಕ್ಟರಿಯು ಮೇಲ್ವರ್ಗದವರಿಗೆ ಸೇರಿದ್ದಾಗಿದೆ.ಇಲ್ಲಿ ತಯಾರಾದ ವಿಗ್ ಮತ್ತು ಸಿದ್ಧಗೊಳಿಸಿದ ಕೂದಲನ್ನು ವಿದೇಶಗಳಿಗೆ ಮಾರಾಟ ಮಾಡುವ ಮೂಲಕ ಹೆಚ್ಚು ಲಾಭಗಳಿಸುವರು. ಹಳ್ಳಿ ಹಳ್ಳಿ ತಿರುಗಿ ದಿನಬಳಕೆಯ ವಸ್ತುಗಳನ್ನು ಕೂದಲಿಗೆ ಅನುಗುಣವಾಗಿ ನೀಡಿ ಸಂಗ್ರಹಿಸಿದವರಿಗೆ ಸಿಗುವ ಆದಾಯಕ್ಕಿಂತ ಮಧ್ಯವರ್ತಿಗಳಿಗೆ ಮತ್ತು ಬೃಹತ್ ಕೈಗಾರಿಕೆಗಳನ್ನು ನಿರ್ಮಿಸಿದ ಸ್ಥಿತಿವಂತರಿಗೆ ಇದರಿಂದ

ಅತಿಹೆಚ್ಚು ಹೆಚ್ಚಿನ ಆದಾಯ ಬರುತ್ತದೆ. ಈ ಹಿಂದೆ ಒಂದು ಕೆ.ಜಿ.ಗೆ ೩೦ರಿಂದ ೩೫ ಸಾವಿರದ ವರೆಗೆ ಬೆಲೆ ಹೇರಿಕೆಯಾಗಿತ್ತಂತೆ. ಇದರಿಂದಾಗಿ ಈ ವ್ಯಾಪಾರದಲ್ಲಿ ಇವರು ಹೆಚ್ಚು ಆಸಕ್ತರಾಗಿದ್ದಾರೆ. ಆದರೆ ಇಂದು ಬಿಸಿಲು ಮಳೆಯೆನ್ನದೆ ಊರೂರು ಅಲೆದು ಕೂದಲು ಸಂಗ್ರಹಿಸಿದ ಶ್ರಮಿಕರಿಗೆ ಇದರ ನಿಖರ ಬೆಲೆಯನ್ನು ಯಾವುದೇ ಮಧ್ಯವರ್ತಿಗಳು ತಿಳಿಸುತ್ತಿಲ್ಲ.

ಮಹಿಳೆಯರು ಹಳ್ಳಿ ಹಳ್ಳಿಗಳಲ್ಲಿ ಅಲೆಯುತ್ತಾ ಕೂದಲು ಸಂಗ್ರಹಿಸಲು ಹೋದಾಗ ಈ ಹಿಂದೆ ಯಾರೋಮಾಡಿದ ದರೋಡೆಗಳಿಗೆ ಇವರೇ ಕಾರಣರೆಂದು ಪೋಲೀಸರು ಮತ್ತು ಊರಿನ ಜನರು ಮನಬಂದಂತೆ ಥಳಿಸಿರುವ ನಿದರ್ಶನಗಳುಂಟು.ಈ ಸಮುದಾಯದ ಮುಖ್ಯ ವ್ಯಾಪಾರಿಗಳು ನಿಯಮಾನುಸಾರ ಅನುಮತಿ ಪಡೆಯದೇ ಇಲ್ಲದಿರುವ ಕಾರಣ ಸೇಲ್ಸ್ ಟ್ಯಾಕ್ಸ್ ಅಧಿಕಾರಿಗಳು ಕೂದಲು ಸಾಗಿಸುವಾಗ ಹಿಡಿದು ಕೂದಲನ್ನು ವಶಪಡಿಸಿಕೊಂಡು ಹೆಚ್ಚು ಹಣ ಪಡೆದು ವಾಪಸ್ಸು ನೀಡುತ್ತಿರುವುದು ಕಂಡುಬರುತ್ತದೆ. ಆರ್ಥಿಕವಾಗಿ ಸಬಲರಿಲ್ಲದ ತಳಸಮುದಾಯಗಳು ಇಂದು ಕೂದಲು ಉದ್ಯಮದಲ್ಲಿ ಅನೇಕ ತಾಂತ್ರಿಕ ಸಮಸ್ಯೆಗಳನ್ನು ಎದುರಿಸುತ್ತಿವೆ. ಈ ಸಮಸ್ಯೆಗಳಿಗೆ ಸೂಕ್ತ ಪರಿಹಾರವೆಂದರೆ ಅಲೆಮಾರಿ ಹಾಗೂ ಬುಡಕಟ್ಟುಗಳಿಗಾಗಿ ಸರ್ಕಾರ ಅಸ್ತಿತ್ವಕ್ಕೆ ತಂದಿರುವ ಆಯೋಗಗಳು ಇಂತಹ ಸಮುದಾಯಗಳ ಆರ್ಥಿಕ ಸಬಲತೆಯ ಕಡೆಗೆ ಹೆಚ್ಚು ಗಮನ ಹರಿಸಿದರೆ ಆರ್ಥಿಕವಾಗಿ ಸದೃಢವಾಗಲು ಸಾಧ್ಯವಾಗುತ್ತದೆ.

ಹೈದ್ರಾಬಾದಿನಲ್ಲಿರುವ ಕರ್‌ಕರ್ ಮುಂಡ(ಬಂಡೋಳ್) ಸಮುದಾಯದ ಅತಿಹೆಚ್ಚು ಜನರು ಹೆಚ್ಚಾಗಿ ಕೂದಲು ವ್ಯಾಪಾರದಲ್ಲಿ ತೊಡಗಿದ್ದಾರೆ. ತಿರುಪತಿ ತಿಮ್ಮಪ್ಪನ ದೇವಾಲಯದ ಆಡಳಿತ ಮಂಡಳಿಯು ಸ್ವತಃ ವಿದೇಶಿ ಮಾರುಕಟ್ಟೆಯೊಂದಿಗೆ ನೇರಸಂಪರ್ಕ ಹೊಂದಿದೆ. ಸಣ್ಣಪುಟ್ಟ ದೇವಸ್ಥಾನಗಳಲ್ಲಿ ಹರಾಜು ಮುಖಾಂತರ ಇವರೇ ಕ್ಷೌರಿಕರನ್ನು ನೇಮಿಸಿ ಅಲ್ಲಿ ಸಂಗ್ರಹವಾದ ಕೂದಲನ್ನು ವ್ಯಾಪಾರ ಮಾಡುತ್ತಾರೆ.

ಹಳ್ಳಿಗಳಲ್ಲಿ ಕೂದಲು ಸಂಗ್ರಹಿಸುವವರನ್ನು ಹೊರತುಪಡಿಸಿದರೆ, ಉಳಿದ ಹಂತದ ವ್ಯಾಪಾರಿಗಳು ಆರ್ಥಿಕವಾಗಿ ಸಧೃಡರಾಗಿದ್ದಾರೆ. ಈ ಸಮುದಾಯದವರಿಗೆ ಸಂಪರ್ಕ ಭಾಷೆಯ ಕೊರತೆಯಿಂದಾಗಿ ವಿದೇಶಕ್ಕೆ ಮಾರಾಟ ಮಾಡಬಹುದಾದ ಸರ್ಕಾರದ ಪರವಾನಗಿ ಪತ್ರ ಪಡೆಯಲಾಗುತ್ತಿಲ್ಲ. ಕೂದಲು ವ್ಯಾಪಾರವನ್ನು ಕರ್‌ಕರ್‌ಮುಂಡ ಸಮುದಾಯ ಮಾತ್ರವಲ್ಲದೆ ಇತರೆ ಸಮುದಾಯದವರು ನಡೆಸುತ್ತಿದ್ದಾರೆ. ಒಂದೆಡೆ ನೆಲೆನಿಲ್ಲಲು ಸಾಧ್ಯವಾಗದ ಕಾರಣ ಸರ್ಕಾರದ ಯೋಜನೆಗಳ ಬಗ್ಗೆ ಸರಿಯಾದ ತಿಳುವಳಿಕೆ ಇಲ್ಲದೆ ಮತ್ತು ಬಂಡವಾಳದ ಕೊರತೆಯಿಂದಾಗಿ ಈ ಸಮುದಾಯದಲ್ಲಿನ

ಹೆಚ್ಚಿನ ಜನರು ಕೇವಲ ಹಳ್ಳಿಗಳಲ್ಲಿ ಕೂದಲು ಸಂಗ್ರಹಿಸುವ ಹಂತಕ್ಕೆ ಮಾತ್ರ ಸೀಮಿತರಾಗಿದ್ದಾರೆ. ಇತ್ತೀಚೆಗೆ ಕೂದಲು ಉದ್ಯಮದಲ್ಲಿನ ಲಾಭಾಂಶವನ್ನು ಗಮನಿಸಿ ದಾಸರು, ಕೊರಚರು, ಮುಸ್ಲಿಂರು ಸಹ ಈ ವೃತ್ತಿಯನ್ನು ಅವಲಂಬಿಸಿರುವುದು ಕಂಡುಬರುತ್ತದೆ.

**ಆಹಾರ ಪದ್ಧತಿ**

ಮಾನವನ ಅಸ್ತಿತ್ವಕ್ಕೆ ಅನ್ನ, ಗಾಳಿ, ನೀರು ಅಗತ್ಯವಾಗಿ ಬೇಕಾಗಿರುವ ಮೂಲಭೂತ ಅವಶ್ಯಕತೆಗಳಾಗಿವೆ. ನೀರು ಮತ್ತು ಗಾಳಿ ಪ್ರಕೃತಿದತ್ತವಾಗಿ ಸಹಜವಾಗಿಯೇ ಪಡೆಯಬಹುದಾಗಿದೆ. ಅನ್ನ ಪ್ರಕೃತಿಯಲ್ಲಿ ದೊರೆಯುವುದಾದರೂ ಪ್ರಯತ್ನ ಪೂರ್ವಕವಾಗಿ ಸಿಗುವಂತಹದ್ದಾಗಿದೆ. ಆದಿಮಾನವನಿಗೆ ಕಾಡಿನಲ್ಲಿ ಗೆಡ್ಡೆ-ಗೆಣಸು, ಹಣ್ಣು-ಹಂಪಲುಗಳು ಆಹಾರವಾಗಿದ್ದವು. ಅವುಗಳ ಅಭಾವ ಉಂಟಾದಾಗ ಬೇಟೆಯಾಡಿ ಪ್ರಾಣಿಗಳ ಹಸಿ ಮಾಂಸವನ್ನು ಆಹಾರವನ್ನಾಗಿಸಿಕೊಂಡನು. ಬೆಂಕಿಯ ಅನ್ವೇಷಣೆಯಿಂದಾಗಿ ಬೇಯಿಸಿದ ಆಹಾರವನ್ನು ತಿನ್ನತೊಡಗಿದನು. ತನ್ನ ಅಲೆಮಾರಿ ಜೀವನಕ್ಕೆ ನಾಂದಿಹಾಡಿ, ಸ್ಥಿರನೆಲೆ ಕಂಡುಕೊಳ್ಳಲು ಪ್ರಯತ್ನಿಸಿದನು. ಬೇಟೆಯಲ್ಲಿನ ಸೌಮ್ಯ ಪ್ರಾಣಿಗಳನ್ನು ಕೊಲ್ಲದೇ ಅವುಗಳನ್ನು ಸಾಕಿ ಕೃಷಿಗೆ ಬಳಸತೊಡಗಿದನು. ಕೃಷಿಯ ಅನೇಕ ಬಗೆಯ ಬೀಜಗಳನ್ನು ಬಿತ್ತಿ ಬೆಳೆದ ಫಸಲಿನಿಂದ ಶುಚಿ, ರುಚಿ, ಆಹಾರ ಕಂಡುಕೊಂಡು ಅದರ ಜೊತೆಗೆ ದನ, ಕುರಿ, ಕೋಳಿ, ಮೇಕೆ, ಹಂದಿಗಳನ್ನು ಸಾಕುವುದರ ಜೊತೆಗೆ ಕೆಲವು ಪ್ರಾಣಿಗಳನ್ನು ಆಹಾರದ ಒಂದು ಭಾಗವಾಗಿಸಿಕೊಂಡನು. ಹೀಗೆ ಹಂತ ಹಂತವಾಗಿ ಅವಿಷ್ಕಾರಗೊಂಡ ಆಹಾರ ಕ್ರಮವು ಮಾಂಸಾಹಾರ ಮತ್ತು ಸಸ್ಯಾಹಾರ ಎಂಬ ಎರಡು ಆಹಾರ ಪದ್ಧತಿಗಳಾಗಿರೂಢಿಸಿಕೊಂಡಿರುವುದನ್ನು ಕಾಣಬಹುದಾಗಿದೆ. ಈ ಎರಡು ಬಗೆಯ ಆಹಾರ ಕ್ರಮಗಳು ಇಂದಿಗೂ ಅನೇಕ ಸಮುದಾಯಗಳು ಅನುಸರಿಸಿಕೊಂಡು ಬಂದಿವೆ. ಇದಕ್ಕೆ ಕರ್‌ಕರ್ ಮುಂಡ ಸಮುದಾಯ ಹೊರತಾಗಿಲ್ಲ.

ಕರ್‌ಕರ್ ಮುಂಡರು ಶಾಖಾಹಾರ ಮತ್ತು ಮಾಂಸಹಾರಗಳೆರಡನ್ನು ಸೇವಿಸುವರು. ಅಲೆಮಾರಿತನದಿಂದ ಊರೂರು ಅಲೆಯುತ್ತಾ ಆಯದ ರೂಪದಲ್ಲಿರೈತ ಬೆಳೆದ ರಾಗಿ, ಜೋಳ, ಅಕ್ಕಿ, ಗೋಧಿ ಇತ್ಯಾದಿ ದವಸ ಧಾನ್ಯಗಳನ್ನು ತನ್ನ ದಿನನಿತ್ಯದ ಜೀವನಕ್ಕಾಗಿ ಆಹಾರಕ್ಕೋಸ್ಕರ ಬಳಸತೊಡಗಿದ.ಒಂದು ಕಾಲಾವಧಿಯವರೆಗೆ ಭಿಕ್ಷೆಬೇಡಿ ಆಹಾರವನ್ನು ಸಂಗ್ರಹಿಸುತ್ತಾ ಉಳಿದ ಸಮಯದಲ್ಲಿ ಹವ್ಯಾಸವೆಂಬಂತೆ ಬೇಟೆಗೆ ಹೋಗಿ ಪ್ರಾಣಿ, ಪಕ್ಷಿ, ಮೀನುಗಳನ್ನು ಹಿಡಿದು ತಂದು ಆಹಾರದ ಭಾಗವಾಗಿಸಿಕೊಂಡ.ಇವರ ಬದುಕಿನಲ್ಲಿ ಬೇಟೆ ಆಕಸ್ಮಿಕವಾದ ಆಹಾರದ ಒಂದು ಭಾಗವಾಗಿತ್ತು. ಸಸ್ಯಹಾರದಲ್ಲಿ

ಜೋಳದ ರೊಟ್ಟಿ, ತರಕಾರಿ, ಬೇಳೆ ಕಾಳು, ಸಂಬಾರು, ರಾಗಿ ಮುದ್ದೆ ಇನ್ನಿತರೆ ಪದಾರ್ಥಗಳು ಇವರ ಆಹಾರದ ಭಾಗವಾಯಿತು. ಮತ್ತೆ ದುಡಿಯಲು ಶಕ್ತವಿಲ್ಲದ ಕೆಲವು ಕಡುಬಡವರು ಅಕ್ಕಿ ಅಥವಾ ರಾಗಿ, ಜೋಳದ ಅಂಬಲಿಯನ್ನು ಸೇವಿಸುತ್ತಿದ್ದರು. ಇವರು ವಿಶೇಷ ಸಂದರ್ಭದಲ್ಲಿ ಕುರಿ, ಕೋಳಿ, ಹಂದಿ, ಮೇಕೆಯ ಮಾಂಸವನ್ನು ತಿನ್ನುತ್ತಿದ್ದರು. ಇಂದಿಗೂ ತಿನ್ನುತ್ತಿರುವರು. ಇವರು ದನದ ಮಾಂಸವನ್ನು ಸೇವಿಸುವುದಿಲ್ಲ. ಕರ್‌ಕರ್ ಮುಂಡ ಪೂರ್ವಿಕರು ಮೊಲ, ಕಾಡುಹಂದಿ, ಮುಳ್ಳುಹಂದಿ, ಮೀನು, ಉಡ, ಆಮೆ, ಅಳಿಲು(ಈಣಚಿ) ಮುಂಗುಸಿ, ಕೌಜುಗ, ಪುರಲೆ, ಅಡವಿ ಪಾರಿವಾಳಗಳನ್ನು ಹಿಡಿದು ತಿನ್ನುತ್ತಿದ್ದರು. ಆದರೆ ಬೇಟೆಯ ನಶಿಸುವಿಕೆಯಿಂದ ಈ ಆಹಾರ ಕ್ರಮ ಬದಲಾವಣೆ ಹೊಂದಿದೆ.

ಸಮುದಾಯದ ಆಚರಣೆಗಳಲ್ಲಿ ಇಂದು ಹಂದಿ ಮಾಂಸದ ಆಹಾರ ಪ್ರಮುಖವಾಗಿದೆ. ಋತುಮತಿ, ವಿವಾಹ, ಶವಸಂಸ್ಕಾರ ಸಂದರ್ಭದಲ್ಲಿ ಹಂದಿಯ ಬಲಿ ವಿಶೇಷವಾಗಿದೆ. ಅದರ ಆಹಾರ ಇವರಿಗೆ ಪ್ರಿಯವಾಗಿದೆ. ಜಾತ್ರೆ, ಹಬ್ಬ, ಅಮವಾಸ್ಯೆ ಉಣ್ಣುಮೆಯಂದು ಶಕ್ತಿದೇವತೆಗಳಿಗೆ ಹರಕೆಯಾಗಿ ಕುರಿ, ಕೋಳಿ ಮೇಕೆಗಳನ್ನು ಬಲಿನೀಡಿ ಮಾಂಸದೂಟ ಮಾಡುವರು. ಉತ್ತರ ಕರ್ನಾಟಕದ ಈ ಸಮುದಾಯದವರು ಸಜ್ಜೆ, ಜೋಳದ ರೊಟ್ಟಿಯೊಂದಿಗೆ ಪುಡಿಚಟ್ನಿ ಇನ್ನಿತರೆ ಶಾಖಾಹಾರದ ಜೊತೆಗೆ ಹಬ್ಬಗಳಲ್ಲಿ ಮಾಂಸವನ್ನು ತಿನ್ನುವರು. ದಕ್ಷಿಣ ಕರ್ನಾಟಕದಲ್ಲಿ ರಾಗಿ, ಜೋಳದ ಮುದ್ದೆ ಮತ್ತು ಅನ್ನವನ್ನು ದಿನನಿತ್ಯದ ಆಹಾರವನ್ನಾಗಿ ಸೇವಿಸುವರು. ಋತುಮತಿ ಮತ್ತು ಬಾಣಂತಿಗೆ ಪೌಷ್ಠಿಕಾಂಶಯುಕ್ತ ಆಹಾರವಾಗಿ ನೀರುಗಡುಬು ಗಂಜಿ, ಕೋಳಿ, ಕುರಿ, ಹಂದಿ ಮಾಂಸದ ಆಹಾರ ನೀಡುವರು. ಇವರ ಮಾಂಸದೂಟದಲ್ಲಿ ಬಹುತೇಕರು ದೇಶಿಯವಾಗಿ ತಯಾರಿಸಿದ ಮಧ್ಯ ಸೇವಿಸುವರು.

ಆಧುನಿಕ ಸಂದರ್ಭದಲ್ಲಿ ಇವರ ಆಹಾರ ಕ್ರಮವು ಪ್ರಾದೇಶಿಕ ಮಿತಿಯಲ್ಲಿ ಬದಲಾವಣೆಗೆ ಒಳಪಟ್ಟಿದೆ. ಮಾಂಸಹಾರದಲ್ಲಿ ಬೇಟೆ ಇಲ್ಲವಾಗಿ ಭಿಕ್ಷೆಯ ಪ್ರಮಾಣ ಕಡಿಮೆಯಾಗಿರುವುದರಿಂದ ಕುರಿ, ಕೋಳಿ, ಮೀನು, ಮೇಕೆಗಳನ್ನು ಹೆಚ್ಚಾಗಿ ಬಳಸುವರು. ಹಂದಿಯ ಬಳಕೆ ಕ್ರಮೇಣ ಕಡಿಮೆಯಾಗಿದೆ. ನಗರ ಪ್ರದೇಶದಲ್ಲಿ ಹೆಚ್ಚಾಗಿ ವಾಸಿಸುವ ಕರ್‌ಕರ್ ಮುಂಡರು ವ್ಯಾಪಾರಿ ಕೆಲಸದಲ್ಲಿ ನಿರತರಾಗಿರುವುದರಿಂದ ಹೋಟೆಲ್ ಊಟ, ತಿಂಡಿಗೆ ಮೊರೆ ಹೋಗಿದ್ದಾರೆ. ಇತ್ತೀಚೆಗೆ ಮದುವೆ ಸಂದರ್ಭದಲ್ಲಿ ಲಾಡು, ಉಗ್ಗಿ, ರೊಟ್ಟಿ, ಚಿತ್ರನ್ನ, ಪಲ್ಲಾವ್ ಇನ್ನಿತರ ವಿವಿಧ ರೀತಿಯ ಅಡುಗೆಗಳನ್ನು ಮಾಡುತ್ತಿದ್ದಾರೆ. ಸಸ್ಯಾಹಾರವಾಗಿ ಸಂತೆಯಲ್ಲಿನ ತರಕಾರಿಗಳಿಂದ ಮೂಲಂಗಿ,

ಬದನೆಕಾಯಿ, ಹಿರೇಕಾಯಿ, ಚವಳಿಕಾಯಿ, ಆಲೂಗೆಡ್ಡೆ, ಈರುಳ್ಳಿ, ಬೆಳ್ಳುಳ್ಳಿ ಇತ್ಯಾದಿ ಸೊಪ್ಪುಗಳ ಅಡಿಗೆಯನ್ನು ಸೇವಿಸುವರು. ಅಂತಿಮವಾಗಿ ಇವರ ಆಹಾರ ಕ್ರಮವು ಅವರವರ ಆರ್ಥಿಕತೆಯನ್ನು ಅವಲಂಬಿಸಿರುತ್ತದೆ.

ಕರ್‌ಕರ್‌ಮುಂಡರು ಹಿಂದೆ ಸತ್ವಯುತ ಆಹಾರವನ್ನು ಮಾಂಸಾಹಾರ ಮತ್ತು ಜನರಿಂದ ಜವಾರಿತಳಿಯ ಧಾನ್ಯಗಳನ್ನು ಪಡೆದ ಆಹಾರವನ್ನು ತಿನ್ನುತ್ತಾ ಸ್ಥಿರ ಆರೋಗ್ಯ ಕಂಡುಕೊಂಡಿದ್ದರು. ಆದರೆ ಇಂದು ನಗರದ ಕೊಳಚೆ ಪ್ರದೇಶದಲ್ಲಿ ವಾಸಿಸುತ್ತಾರೆ. ರೋಗಗಳ ತವರೂರಿನಂತಿರುವ ಈ ಪ್ರದೇಶದ ಆರೋಗ್ಯದ ತೊಂದರೆಗಳನ್ನು ತಡೆಯುವ ಸತ್ವಯುತ ಆಹಾರ ಇಲ್ಲವಾಗಿ ಇಂದು ಅನೇಕ ಜನರು ಅನಾರೋಗ್ಯಕ್ಕೆ ತುತ್ತಾಗುತ್ತಿದ್ದಾರೆ. ಜೊತೆಗೆ ಪ್ರತಿ ದಿನ ದುಡಿಯುವ ಇವರಿಗೆ ಮದ್ಯಪಾನ ಧೂಮಪಾನದಂತಹ ದುಶ್ಚಟಗಳು ಅನಿವಾರ್ಯವಾಗಿವೆ. ಹಿರಿಯ ತಲೆಮಾರಿನ ಸ್ತ್ರೀಯರು ಮದ್ಯಪಾನ ಸೇವನೆ ಮಾಡುವುದನ್ನು ಕಾಣಬಹುದು. ಇದರಿಂದಾಗಿ ಅಪೌಷ್ಠಿಕ ಕೊರತೆ ರಕ್ತಹೀನತೆಯಂತಹ ರೋಗಗಳಿಗೆ ತುತ್ತಾಗಿ ಮಾತೃ ಮರಣ ಶಿಶುಮರಣಗಳು ಕಂಡುಬರುತ್ತಿವೆ.

**ಜಾತಿ ಪಂಚಾಯ್ತಿ ಅಥವಾ ಕುಲ ಪಂಚಾಯ್ತಿ**

ಸಮಾಜವು ನಿತ್ಯಪರಿವರ್ತನ ಶೀಲವಾಗಿರುತ್ತದೆ. ಚಲನೆಯನ್ನು ಸಮನಾಂತರ ಮತ್ತು ಲಂಬಾಂತರ ಚಲನೆ ಎಂದು ಪಿ.ಎ. ಸಾರೋಕಿನ್ ಅವರು ಗುರುತಿಸಿದ್ದಾರೆ. ಲಂಬಾಂತರ ಚಲನೆ ಸಮಾಜದ ಮೇಲ್ಮುಖ ಮತ್ತು ಕೆಳಮುಖ ಚಲನೆಯನ್ನು ಗುರುತಿಸಿ ಸಮಾಜದಲ್ಲಿ ಸ್ಥಾನಮಾನಗಳ ಅಂತರವನ್ನು ತಿಳಿಸಿದ್ದಾರೆ. ಮೇಲ್ಮುಖ ಚಲನೆಗಿಂತ ಕೆಳಮುಖ ಚಲನೆ ಹೆಚ್ಚಾದಾಗ ಸಮಾಜದ ಭದ್ರತೆ ಧಕ್ಕೆ ಬರುತ್ತದೆ. ಭದ್ರತೆಯನ್ನು ಹೊಂದಲು ತನ್ನೊಳಗೆ ನಿಷೇಧ ಅಥವಾ ಕಾನೂನುಗಳ ಮೂಲಕ ಸಮಾಜವನ್ನು ನಿಯಂತ್ರಿಸುತ್ತದೆ. ಸಾಮಾಜಿಕ ನಿಯಂತ್ರಣಗಳಲ್ಲಿ ಔಪಚಾರಿಕ ಮತ್ತು ಅನೌಪಚಾರಿಕ ನಿಯಂತ್ರಣಗಳೆಂದು ವರ್ಗೀಕರಿಸಲಾಗಿದ್ದು, ಔಪಚಾರಿಕ ನಿಯಂತ್ರಣವು ಕಾರಾಗೃಹ, ನ್ಯಾಯಾಂಗ, ಪೋಲಿಸ್ ಇತ್ಯಾದಿ ಕಾನೂನು ಸಂಸ್ಥೆಗಳ ಮೂಲಕ ಸಮಾಜವನ್ನು ಸರಿದಾರಿಯಲ್ಲಿ ಕೊಂಡೊಯ್ಯಲು ಪ್ರಯತ್ನಿಸುತ್ತದೆ. ಈ ವ್ಯವಸ್ಥೆಯು ಆಧುನಿಕ ಸಮಾಜಗಳಲ್ಲಿ ಕಂಡುಬರುತ್ತದೆ. ಅನೌಪಚಾರಿಕ ವ್ಯವಸ್ಥೆಯು ಸಾಮಾಜಿಕ ಮೌಲ್ಯಗಳು, ನೈತಿಕ ನಿಯಮಗಳು, ಧಾರ್ಮಿಕ ವಿಧಿನಿಷೇಧಗಳ ಮೂಲಕ ಸಮಾಜವನ್ನು ನಿಯಂತ್ರಿಸುತ್ತದೆ. ಪ್ರಾಚೀನ ಸಮುದಾಯಗಳಲ್ಲಿ ಹಾಗೂ ಇಂದಿನ ಬುಡಕಟ್ಟು ಸಮುದಾಯಗಳಲ್ಲಿ ಕಂಡುಬರುತ್ತದೆ. ಸಮುದಾಯದಲ್ಲಿ ಸಮಾಜದ ಅಸ್ತಿತ್ವಕ್ಕೆ ವಿರುದ್ಧವಾದ

ಕಾರ್ಯಚಟುವಟಿಕೆಗಳು ನಡೆದಾಗ ಅವುಗಳನ್ನು ಸರಿ ದಾರಿಗೆ ತರಲು ಅಥವಾ ಶಿಕ್ಷೆ ನೀಡಲು ನ್ಯಾಯ ಪಂಚಾಯ್ತಿ ವ್ಯವಸ್ಥೆ ಅಸ್ತಿತ್ವದಲ್ಲಿರುತ್ತದೆ. ಇದು ಅನೌಪಚಾರಿಕ ಸಾಮಾಜಿಕ ನಿಯಂತ್ರಣ ವ್ಯವಸ್ಥೆಯಾಗಿದೆ. ಇಲ್ಲಿ ಸಮುದಾಯದ ಪರಂಪರೆ, ಧಾರ್ಮಿಕ ನಂಬಿಕೆಗಳ, ವೃತ್ತಿ, ಆಚಾರ ವಿಚಾರಗಳನ್ನು ಆಧರಿಸಿದ ಮೌಖಿಕ ನಿಯಮಗಳಿರುತ್ತವೆ. ಅವುಗಳನ್ನು ಜನರು ಜೀವನನೊಂದಿಗೆ ಬೆರೆಸಿಕೊಂಡಿರುತ್ತಾರೆ.

ಭಾರತದ ಪ್ರತಿಯೊಂದು ಬುಡಕಟ್ಟುಗಳು ತಮ್ಮ ಸಮುದಾಯದ ಆಂತರಿಕ ಒಳಜಗಳಗಳನ್ನು ಬಗೆಹರಿಸಲು ತಮ್ಮಲ್ಲಿಯೇ ಒಂದು ನಿಯಂತ್ರಣ ಅಥವಾ ವ್ಯವಸ್ಥೆಯನ್ನು ಹೊಂದಿರುವರು. ಜನರಲ್ಲಿ ದ್ವೇಷ, ಕೋಪ, ಮೋಹ, ಮದ, ಮತ್ಸರ, ಕ್ರೋಧ ಇತ್ಯಾದಿ ಭಾವನೆಗಳು ಮೂಡಿದಾಗ ಅವುಗಳನ್ನು ನಿಯಂತ್ರಿಸಿ ಚೆನ್ನಾಗಿ ಬಾಳಲು ಮತ್ತು ನಾವು ನಮ್ಮವರು ಎಂಬ ಭಾವನೆಯಿಂದ ಶಾಂತಿಯುತ ಜೀವನವನ್ನು ಕಂಡುಕೊಳ್ಳಲು ಈ ನ್ಯಾಯ ವ್ಯವಸ್ಥೆ ಸಹಕರಿಸುತ್ತದೆ. ಇಂತಹ ನ್ಯಾಯವ್ಯವಸ್ಥೆಯನ್ನು ಕುಲಪಂಚಾಯ್ತಿ, ಜಾತಿಪಂಚಾಯ್ತಿ, ನ್ಯಾಯ ಪಂಚಾಯ್ತಿ, ಗುಡಿಕಟ್ಟೆ, ಕಟ್ಟೆಮನೆ ಎಂದು ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ. ಇದರಲ್ಲಿನ ನಿಯಮಗಳು, ಸರಿ–ತಪ್ಪು, ಒಳ್ಳೆಯದು–ಕೆಟ್ಟದ್ದು, ನ್ಯಾಯ–ಅನ್ಯಾಯ, ಪಾಪ–ಪುಣ್ಯ ಎಂಬ ಸಂಸ್ಕೃತಿಯನ್ನು ಒಳಗೊಂಡಿರುತ್ತವೆ. ಪರಂಪರೆಯಿಂದ ನಂಬಿಕೊಂಡು ಆಚರಿಸಿಕೊಳ್ಳುತ್ತಾ ಬಂದ ಜೀವನ ಮೌಲ್ಯಗಳು ನಶಿಸಿಹೋಗದಂತೆ ನೋಡಿಕೊಳ್ಳುವುದು ಈ ಸಮಾಜಿಕ ನ್ಯಾಯ ಪದ್ಧತಿಯ ಕರ್ತವ್ಯವಾಗಿರುತ್ತದೆ.

ಭಾರತದಲ್ಲಿ ಸ್ಥಿರವಾಗಿ ನೆಲೆಯೂರಿರುವ, ಅಲೆಮಾರಿಗಳಾಗಿ ಜೀವನ ಸಾಗಿಸುತ್ತಿರುವ ಬಹುತೇಕ ಬುಡಕಟ್ಟು ಸಮುದಾಯಗಳಲ್ಲಿ ನ್ಯಾಯ ಪದ್ಧತಿ ವ್ಯವಸ್ಥೆ ಕಂಡುಬರುತ್ತದೆ. ಆದಿಮ ಬುಡಕಟ್ಟುಗಳು ಹಾಗೂ ನಾಡಿನೊಂದಿಗೆ ಸಂಪರ್ಕ ಹೊಂದದೆ ಸ್ವತಂತ್ರವಾಗಿ ಕಾಡಿನ ಮಧ್ಯಭಾಗದಲ್ಲಿ ವಾಸಿಸುತ್ತಿರುವ ಸಮುದಾಯಗಳಲ್ಲಿ ಇಂದಿಗೂ ಈ ವ್ಯವಸ್ಥೆ ಜೀವಂತವಾಗಿದೆ. ನಾಡಿನ ಅನೌಪಚಾರಿಕ, ಸಾಮಾಜಿಕ ನಿಯಂತ್ರಣದಿಂದ ಹೊರತಾಗಿದ್ದಾರೆ. ಇಂತಹ ನ್ಯಾಯ ವ್ಯವಸ್ಥೆಯು ಪ್ರದೇಶದಿಂದ ಪ್ರದೇಶಕ್ಕೆ, ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುತ್ತದೆ. ಅಷ್ಟೇ ಅಲ್ಲ ನ್ಯಾಯವನ್ನು ನಿರ್ಣಯಿಸುವ ಕ್ರಮ, ಶಿಕ್ಷಿಸುವ ವಿಧಾನಗಳಲ್ಲಿಯು ಭಿನ್ನತೆಗಳಿರುತ್ತವೆ. ಭಿನ್ನತೆಗಳಿದ್ದರೂ ಪಂಚಾಯ್ತಿಗಳ ಮೂಲ ಉದ್ದೇಶ ಸಮುದಾಯದ ಸಾಮಾಜಿಕ ನ್ಯಾಯವಾಗಿರುತ್ತದೆ.

ಬುಡಕಟ್ಟಿನ ನ್ಯಾಯ ಪಂಚಾಯ್ತಿಯಲ್ಲಿ ಆಯಾ ಸಮುದಾಯದ ಅನುಭವಸ್ಥ ಹಿರಿಯರಲ್ಲಿ ಒಬ್ಬರನ್ನು ನ್ಯಾಯಾಧೀಶರನ್ನಾಗಿ ಆಯ್ಕೆಮಾಡುವರು. ಕೆಲವೊಂದು

ಸಮುದಾಯಗಳಲ್ಲಿ ನ್ಯಾಯಾಧೀಶನ ಆಯ್ಕೆ ವಂಶಪಾರಂಪರೆಯಿಂದ ಕೂಡಿದ್ದರೆ, ಮತ್ತೆ ಕೆಲವು ಸಮುದಾಯಗಳಲ್ಲಿ ಅರ್ಹತೆಯ ಆಧಾರದ ಮೇಲೆ ಆಯ್ಕೆ ಮಾಡಿಕೊಳ್ಳುವರು. ಕಲಿತವರಿಗಿಂತ ನುರಿತವರು ಮೇಲು, ಅನುಭವವೇ ಜ್ಞಾನ ಎಂಬಂತೆ ಅನುಭವಸ್ತ ಹಿರಿಯರ ನಿರ್ಣಯಗಳು ಪದವಿ ಪಡೆದ ನ್ಯಾಯಾಧೀಶರಿಗಳಿಗಿಂತಲೂ ಸೂಕ್ತವಾಗಿರುತ್ತವೆ. ಇದು ಅವರ ಸಾಮಾಜಿಕ ಒಡನಾಟದಿಂದ ಸಾಧ್ಯವಾಗಿರುತ್ತದೆ. ಅಪರಾಧಿಗಳ ಕೃತ್ಯಗಳನ್ನು ಪ್ರತ್ಯಕ್ಷವಾಗಿ ಕಾಣುವ ಅವಕಾಶ ಅವರಿಗಿರುತ್ತದೆ. ಅದರಿಂದ ನಿರಾಪರಾಧಿಗಳಿಗೆ ಅನ್ಯಾಯವಾಗದಂತೆ ನೋಡಿಕೊಳ್ಳುವನು. ಅಪರಾಧಿಗೆ ದಂಡ ರೂಪದ ಅಥವಾ ಕುಲದ ಬಹಿಷ್ಕಾರದ ಶಿಕ್ಷೆಗಳನ್ನು ವಿಧಿಸುವರು. ಒಂದು ವೇಳೆ ಅಪರಾಧಿ ತನ್ನ ತಪ್ಪನ್ನು ಒಪ್ಪಿಕೊಂಡರೆ ಮತ್ತೆ ಸಮುದಾಯದಲ್ಲಿ ಮೌಲ್ಯಯುತವಾಗಿ ಬದುಕಲು ಅವಕಾಶ ನೀಡುವರು. ಬುಡಕಟ್ಟುಗಳು ಗಾತ್ರದಲ್ಲಿ ಚಿಕ್ಕವಾಗಿರುವ ಕಾರಣ ಸದಸ್ಯನನ್ನು ಹೊರಗೆ ಕಳುಹಿಸಲು ಇಚ್ಛಿಸದೇ ಹೊಂದಾಣಿಕೆ ಮಾಡಿಕೊಳ್ಳುವಲ್ಲಿ ಹೆಚ್ಚಿನ ಆಸಕ್ತಿ ವಹಿಸುತ್ತವೆ.

**ಕರ್‌ಕರ್‌ಮುಂಡ ಕುಲಂ ಪಂಚಾಯ್ತಿ ವ್ಯವಸ್ಥೆ**

ಮೂಲತಃ ಅಲೆಮಾರಿ ಸಮುದಾಯವಾಗಿರುವುದರಿಂದ ಇವರಲ್ಲಿ ಹಬ್ಬ, ಜಾತ್ರೆ, ಮದುವೆ, ನಾಮಕರಣ ಇತ್ಯಾದಿ ಸಂದರ್ಭಗಳಲ್ಲಿ ನ್ಯಾಯ ಪಂಚಾಯ್ತಿಗಳು ಜರುಗುತ್ತವೆ.

ಕರ್‌ಕರ್‌ಮುಂಡರ ಭಿಕ್ಷಾ ವ್ಯಾಪ್ತಿಯಲ್ಲಿ ಒಳಜಗಳ, ಗಂಡ ಹೆಂಡಿರ ಜಗಳ ಹಾಗೂ ದೇವರುಗಳ ಆರಾಧನೆಯಲ್ಲಿನ ನಿಷೇಧವನ್ನು ಮೀರಿದರೆ ಕುಲ ವಿರೋಧಿ ಕಾರ್ಯ ಮಾಡಿದರೆ, ಸಮಾಜ ವಿರೋಧಿ ಚಟುವಟಿಕೆಗಳಲ್ಲಿ ವ್ಯಕ್ತಿ ಭಾಗವಹಿಸಿದರೆ ಮೊದಲು ಮನೆಯ ಹಿರಿಯರು ಬಗೆಹರಿಸುವ ಪ್ರಯತ್ನ ಮಾಡುವರು. ಅಲ್ಲಿ ಬಗೆಹರಿಯದಿದ್ದರೆ ಊರಿನ ಮುಖಂಡ ಗುಡಿಗಾಡು(ಗುರಿಕಾರ)ನ ವ್ಯಾಪ್ತಿಗೆ ಈ ವ್ಯಾಜ್ಯವನ್ನು ಒಪ್ಪಿಸುವರು. ಹಿಂದೆ ಈ ಗುರಿಕಾರ ವೃತ್ತಿಯನ್ನು ಯನಗೊಂಡ್ಲೋಳ್ ಬೆಡಗಿನವರು ಕಟ್ಟೆಯ ಮೇಲೆ ಕುಳಿತು ಬಗೆಹರಿಸುತ್ತಿದ್ದರು. ಇದರಿಂದ ಇವರಿಗೆ ಕಟ್ಟಿಂಟಿಲೋಳ್(ಕಟ್ಟೆ ಮನೆಯವರು)ಎಂಬ ಹೆಸರು ಬಂದಿದೆ. ಗುರಿಕಾರ ಸಾಧ್ಯವಾದ ಮಟ್ಟಿಗೆ ಈ ಪ್ರಕರಣಗಳನ್ನು ಅಲ್ಲಿಯೇ ಇತ್ಯರ್ಥ ಪಡಿಸಲು ಪ್ರಯತ್ನಿಸುವನು. ಅದನ್ನು ಮೀರಿದಾಗ ಸಮುದಾಯದ ಇತರ ಗುರಿಕಾರರಿಗೆ ಈ ಪ್ರಕರಣದ ಸುದ್ದಿ ಮುಟ್ಟಿಸಿ ಸಭೆ ಸೇರುವ ದಿನವನ್ನು ಗೊತ್ತುಪಡಿಸುವನು. ಸಮೀಪದಲ್ಲಿ ನಡೆಯುವ ಹಬ್ಬ, ಜಾತ್ರೆ ಮದುವೆ ಇತ್ಯಾದಿ ದಿನಗಳಂದು ಆ ದಿನದ ಕಾರ್ಯ ಮುಗಿದ ನಂತರದಲ್ಲಿ ಎಲ್ಲಾ ಗುರಿಕಾರರು ಸೇರಿ ತಮ್ಮೊಳಗೆ ಒಬ್ಬ ಕುಲಸ್ತಡು(ಕುಲಸ್ತ)ನನ್ನು ಸಭೆಯ ಮುಖಂಡನನ್ನಾಗಿ

ನೇಮಿಸಿಕೊಂಡು, ಪ್ರಕರಣದ ಪೂರ್ವಾಪರಗಳನ್ನು ತಿಳಿಯುತ್ತಾ ಅಂತಿಮವಾಗಿ ನಿರ್ಣಯ ಕೈಗೊಳ್ಳುವನು. ಈ ನಿರ್ಣಯ ಅಂತಿಮವಾಗಿದ್ದು, ಅದನ್ನು ಯಾರೂ ಪ್ರಶ್ನಿಸುವಂತಿಲ್ಲ. ಹಾಗೇನಾದರೂ ತಿರಸ್ಕರಿಸಿದರೆ ತಪ್ಪುದಂಡ ಕಟ್ಟಬೇಕು. ಇಲ್ಲದಿದ್ದರೆ ಕುಲದಿಂದ ಬಹಿಷ್ಕಾರ ಹಾಕಲಾಗುತ್ತಿತ್ತು. ತಪ್ಪು ಮಾಡಿದವರು ತಪ್ಪು ಒಪ್ಪಿಕೊಂಡು ಇಂತಿಷ್ಟು ಹಣದ ರೂಪದ, ಬಲಿಯ ರೂಪದ ದಂಡ ಕಟ್ಟಿ ಪ್ರಾಯಶ್ಚಿತ ಮಾಡಿಕೊಳ್ಳುವನು. ಜೊತೆಗೆ ಬಂದಂತಹ ಜನರಿಗೆಲ್ಲಾ ಅನ್ನ ಹಾಕಿಸಿ ಕುಲಶುದ್ಧಿಮಾಡಿಕೊಂಡು ಸಮುದಾಯದಲ್ಲಿ ಪುನಃ ಸೇರಿಕೊಳ್ಳುವನು.

ಕರ್‌ಕರ್ ಮುಂಡರಲ್ಲಿ ಭಿಕ್ಷೆ ಪ್ರಧಾನ ಕಸುಬು ಆಗಿತ್ತು. ಹಳ್ಳಿಗಳಲ್ಲಿ ಭಿಕ್ಷೆ ಬೇಡಲು ಗುರಿಕಾರರ ಒಪ್ಪಿಗೆ ಪಡೆಯಬೇಕಿತ್ತು. ಅವನ ಸರಹದ್ದು ಮೀರಿ ಬೇರೆ ಹಳ್ಳಿಯಲ್ಲಿ ಭಿಕ್ಷೆ ಬೇಡಿದರೆ ತಪ್ಪುದಂಡಕಟ್ಟಬೇಕು. ಈ ತಪ್ಪುದಂಡ ಕುಲಸ್ತರ ಸ್ವಾಧೀನಕ್ಕೆ ಸೇರಿ ಮುಂದಿನ ದೈವಾಚರಣೆಗಳಿಗೆ ಸದುಪಯೋಗವಾಗುತ್ತಿತ್ತು. ಗಂಡ ಹೆಂಡಿರ ವ್ಯಾಜ್ಯಗಳು ಗುರಿಕಾರರ ಅಥವಾ ಕುಲಸ್ತಡುನ ಸಮ್ಮುಖಕ್ಕೆ ಬಂದಾಗ ಸಾಮಾನ್ಯವಾಗಿ ಹೊಂದಾಣಿಕೆ ಮಾಡುವ ಪ್ರಯತ್ನ ನಡೆಸಲು ಸೂಕ್ತ ತಿಳುವಳಿಕೆ ನೀಡುವರು. ಪ್ರಯತ್ನ ಫಲಿಸದಿದ್ದಾಗ ವಿಚ್ಛೇದನ ನೀಡುವರು. ವಿಚ್ಛೇಧನೆ ನೀಡಿದಾಗ ಗಂಡು ಹೆಣ್ಣಿನ ಜೀವನಾಂಶಕ್ಕೆಂದು ದಂಡವನ್ನು ಕಟ್ಟಬೇಕು. ಅದು ಅವಳಿಗೆ ಸೇರುವುದು. ಇಲ್ಲವೆ ಕೆಲವೊಂದು ಹಳ್ಳಿಗಳನ್ನು ಭಿಕ್ಷೆ ಬೇಡಲು ಬಿಟ್ಟುಕೊಡಬೇಕು. ಹೀಗೆ ವಿಚ್ಛೇದನಕ್ಕೆ ಒಳಗಾದವರು ಇಷ್ಟಪಟ್ಟು ಮತ್ತೆ ಮರುವಿವಾಹವಾಗಲು ಬಯಸಿದರೆ ಪುನಃ ಇವರ ಸಾನಿಧ್ಯದಲ್ಲಿ ಕುಲಶುದ್ಧೀಕರಣ ಮಾಡಿ ತಪ್ಪುದಂಡ ನೀಡಿ, ಕೂಡಿಕೆ ಕಾರ್ಯದ ಮೂಲಕ ವಿವಾಹವಾಗಬಹುದಾಗಿದೆ. ಈ ಸಮುದಾಯದಲ್ಲಿ ಕುಲಪಂಚಾಯ್ತಿಯ ಮೂಲಕ ವ್ಯಾಜ್ಯ ಬಗೆಹರಿಸಿಕೊಳ್ಳಲು ವ್ಯಾಜ್ಯ ಹೂಡಿದವರೆ ಮುಂದಾಗಿ ಕುಲಸದಸ್ಯರನ್ನು ಸಭೆ ಸೇರಿಸಬೇಕು. ಆ ಮೂಲಕ ವ್ಯಾಜ್ಯ ಬಗೆಹರಿಸಿಕೊಳ್ಳಬೇಕು.

ಕರ್‌ಕರ್‌ಮುಂಡರು ಅಲೆಮಾರಿಗಳಾಗಿದ್ದ ಕಾರಣ ತಮ್ಮ ವ್ಯಾಜ್ಯಗಳನ್ನು ಬಗೆಹರಿಸಿಕೊಳ್ಳಲು ಹಬ್ಬ, ಜಾತ್ರೆ, ಮದುವೆ, ಇತರೆ ಸಮಾರಂಭಗಳು ನಡೆಯುವವರಿಗೆ ಕಾಯಬೇಕಿತ್ತು. ಇವರನ್ಯಾಯ ವ್ಯವಸ್ಥೆಯಲ್ಲಿ ಮೊದಲು ಕುಟುಂಬದ ಮುಖ್ಯಸ್ಥ ನಂತರದಲ್ಲಿ ಊರಿನ ಗುರಿಕಾರ, ಅಂತಿಮವಾಗಿ ಕುಲಸ್ತಡು ಈ ರೀತಿಯ ಶ್ರೇಣಿಕರಣವನ್ನು ಕಾಣಬಹುದಾಗಿದೆ.

ಆಧುನಿಕ ಸಮಾಜ ಸಂಕೀರ್ಣವಾಗಿರುವುದರಿಂದ ಈ ರೀತಿಯ ಕುಲಪಂಚಾಯ್ತಿಗಳು ನಶಿಸುತ್ತಿವೆ. ಬದಲಿಗೆ ಅನೌಪಚಾರಿಕ ಸಾಮಾಜಿಕ ನಿಯಂತ್ರಣ

ಸಂಸ್ಥೆಗಳು ಇತರ ಸಮುದಾಯಗಳಲ್ಲಿ ಪ್ರವೇಶಿಸಿರುವಂತೆ ಈ ಸಮುದಾಯದಲ್ಲಿ ಸ್ಥಾನ ಪಡೆದಿವೆ. ಇಂದು ಕುಲಸ್ತಡು ಗುರಿಕಾರ ಕೇವಲ ಆಚರಣೆಗಳಲ್ಲಿನ ಕ್ರಿಯಾ ವಿಧಿಗಳಲ್ಲಿ ತಮ್ಮ ಸ್ಥಾನ ಉಳಿಸಿಕೊಂಡಿವೆ. ವಿಜಯಪುರದ ಬಾಬಾನಗರ ಹಳ್ಯಾಳಗಳಲ್ಲಿ ಜಂಗಮರು ಆ ಸ್ಥಾನಗಳನ್ನು ಕಸಿದುಕೊಂಡಿದ್ದಾರೆ. ಪ್ರಸ್ತುತದಲ್ಲಿ ಈ ಸಮುದಾಯದ ಅನೇಕ ಅವನತಿಯ ಹಾದಿ ತುಳಿಯುತ್ತಿದ್ದು. ಜನರು ಇದರ ಮಹತ್ವ ಸಹಬಾಳ್ವೆ ಜೀವನದತ್ತ ಸಾಗಲು ಅಸ್ಮಿತೆಯನ್ನು ಉಳಿಸಿಕೊಳ್ಳಲು ಸಂಘಟಕರಾಗಬೇಕಿದೆ.

**ದೈವಾರಾಧನೆ**

ಅಲೆಮಾರಿಯಾಗಿದ್ದ ಆದಿಮಾನವ ಗೆಡ್ಡೆಗೆಣಸುಗಳನ್ನು ತಿನ್ನುತ್ತಾ ಅವುಗಳ ಅಭಾವ ಉಂಟಾದಾಗ ಬೇಟೆಯಾಡಿ ಮಾಂಸ ತಿನ್ನುವುದನ್ನು ಕಲಿತ. ನಂತರ ಒಂದೆಡೆ ನೆಲೆಸಿ ಗುಂಪು ಜೀವನಕ್ಕೆ ಕಾಲಿಟ್ಟಾಗ ಕೃಷಿಯ ಕಡೆ ಮುಖಮಾಡಿ ಅನೇಕ ರೀತಿಯ ಬೆಳೆ ಬೆಳೆಯಲಾರಂಭಿಸಿದನು. ಅಂತಹ ಸಂದರ್ಭದಲ್ಲಿ ಪ್ರಕೃತಿಯ ಗಾಳಿ, ಚಳಿ, ಬಿಸಿಲು, ಗುಡುಗು, ಮಿಂಚು, ಸಿಡಿಲು, ಭೂಕಂಪ, ಬೆಂಕಿ, ಬಿರುಗಾಳಿ, ಸುಂಟರಗಾಳಿ, ಪ್ರವಾಹಗಳು ಇವನಲ್ಲಿ ಹೆದರಿಕೆಯನ್ನುಂಟು ಮಾಡಿದವು. ಭಯ ಭೀತನಾದ ಮಾನವ ಭಯ ಭಕ್ತಿಯಿಂದ ಹೆದರಿಕೆಯುಂಟುಮಾಡುವ ಪ್ರಕೃತಿ ಶಕ್ತಿಗೆ ಶರಣಾಗತನಾಗಿ ಅವುಗಳನ್ನು ಆರಾಧನೆ ಮಾಡಲು ತೊಡಗಿದನು. ಆಚರಣೆಗೆ ಬಂದ ಆರಾಧನೆ ಕುಟುಂಬದಿಂದ ಸಮುದಾಯಗಳಿಗೆ ಅನ್ವಯವಾಯಿತು. ಪ್ರಕೃತಿಯ ಆರಾಧನೆಯು ಮುಂದೆ ಆಚರಣೆಗಳಾಗಿ ನಿರಂತರವಾದವು. ನಾಗರಿಕತೆಯ ಬೆಳವಣಿಗೆಯಿಂದ ಅವುಗಳು ಮೂರ್ತಿ ಸ್ವರೂಪ ಪಡೆದು ಗ್ರಾಮ, ಪಟ್ಟಣಗಳಲ್ಲಿ ಆರಾಧಿಸಲ್ಪಟ್ಟವು. ಗ್ರಾಮಗಳಲ್ಲಿ ಆರಾಧಿಸಲ್ಪಟ್ಟ ದೇವರು ಗ್ರಾಮದೇವತೆಗಳಾದವು. ಆದರೆ ನಾಡಿನ ಸಂಪರ್ಕದಿಂದ ದೂರ ಉಳಿದ ಬುಡಕಟ್ಟುಗಳು ಗೆಡ್ಡೆ ಗೆಣಸು ಸಂಗ್ರಹಿಸುವಾಗ, ಮೀನು ಹಿಡಿಯುವಾಗ, ಬೇಟೆಯಾಡುವಾಗ ತಮಗೆ ಎದುರಾದ ಪ್ರಕೃತಿ ಶಕ್ತಿಗಳಾದ ಗಾಳಿ, ಬೆಳಕು, ನೀರುಗಳ ಶಕ್ತಿಯನ್ನು ಗ್ರಹಿಸಿ, ಅವುಗಳಿಗೆ ಭಯ-ಭಕ್ತಿ ತೋರಿಸಿದರು. ಇದಕ್ಕಾಗಿ ಮರ, ಹುತ್ತ ಕಲ್ಲುಗಳನ್ನು ಅವುಗಳ ಪ್ರತಿರೂಪವಾಗಿ ಪೂಜಿಸುತ್ತಿದ್ದರು. ಕ್ರಮೇಣ ಗಾಳಿ ನೀರಿನ ಜೊತೆಗೆ ಭೂಮಿ ಆಕಾಶಗಳನ್ನು ಸೇರಿಸಿ ವೈದಿಕರು ಪಂಚಭೂತಗಳೆಂದು ಕರೆದರು.

ಬುಡಕಟ್ಟುಗಳು ನಗರದಿಂದ ದೂರ ಉಳಿದು ಕಾಡುಗಳಲ್ಲಿಯೇ ನೆಲೆಸಿದವು. ಬುಡಕಟ್ಟು ಜನರು ಅವರ ಪೂರ್ವಜರ ಆತ್ಮಗಳನ್ನೇ ಪೂಜಿಸುತ್ತಿದ್ದರು. ಈ ಆತ್ಮಗಳ ಪೂಜಾವಿಧಾನವನ್ನೇ ಇ.ಬಿ.ಟೇಲರ್‌ರವರು ಅನಿಮಿಸಂ (ಬುಡಕಟ್ಟು ಧರ್ಮ)ಎಂದು ಹೇಳುವರು. ಮಾನವನ ಆಚರಣೆಗಳಲ್ಲಿ ಅನಿಮಿಸಂ ಪುರಾತನವಾಗಿದ್ದು ಮೊದಲನೇಯ

ಆಚರಣೆ ಅಥವಾ ಆರಾಧನೆ ಎಂದಿದ್ದಾರೆ. ಇವನು ಆತ್ಮಗಳನ್ನು ಈಡಿಜಜ ಖಠಣಟ ಮತ್ತು ಃಠಜಥಿ ,ಠಣಟ ಎಂದು ವಿಂಗಡಿಸಿ ಈಡಿಜಜ ಖಠಣಟ ಅಂದರೆ ಸತ್ತ ವ್ಯಕ್ತಿಯ ಆತ್ಮ ದೇಹದಿಂದ ದೂರವಾದರೂ ಇದ್ದು ವ್ಯಕ್ತಿಗಳ ಮಧ್ಯೆ ಜೀವಂತವಾಗಿರುತ್ತವೆ ಎಂದು ನಿದರ್ಶನಗಳ ಮೂಲಕ ಸಾಬೀತುಪಡಿಸುತ್ತಾರೆ. ಇಂತಹ ಅನಿಮಸಂನ್ನು ನಾವು ಇಂದು ಹಿರಿಯರ ಹಬ್ಬ ಕಾತ್‌ಕರಿಗಳ ಸಿಗ್ಮಾದ ಹಬ್ಬಗಳಲ್ಲಿ ಇಂದಿಗೂ ಕಾಣಬಹುದಾಗಿದೆ. ಸಮಾಜದ ವಿಕಾಸವು ಮುಂದುವರೆದು ಬುಡಕಟ್ಟುಗಳು ಸಾಂಸ್ಕೃತಿಕ ಪ್ರಭುತ್ವಕ್ಕೆ ಒಳಗಾಗಬೇಕಾಯಿತು. ಕಾಡುನಾಡಾದಾಗ ಶೈವೀಕರಣ, ವೈಷ್ಣವೀಕರಣ ಪ್ರಕ್ರಿಯೆಗಳು ಬುಡಕಟ್ಟುಗಳ ಮೇಲೆ ಪ್ರಭಾವ ಬೀರಿ ದೇವ–ದೇವತೆಗಳ ಆರಾಧನೆಗೆ ಒಳಗಾಗಬೇಕಾಯಿತು. ಪ್ರಕೃತಿ ಆರಾಧನೆ ಮೂರ್ತಿ ರೂಪ ಪಡೆದಾಗ ಪುರುಷ–ಸ್ತ್ರೀ ದೈವಗಳು ಅಸ್ತಿತ್ವಕ್ಕೆ ಬಂದವು. ಈ ಪಲ್ಲಟದಿಂದ ಬುಡಕಟ್ಟುಗಳು ತಮ್ಮ ಪಾರಂಪರಿಕ ನಂಬಿಕೆ ಆಚರಣೆಗಳನ್ನು ಬದಿಗೊತ್ತಿ ಮೂರ್ತ ಸಂಸ್ಕೃತಿಗೆಒಳಗಾಗಬೇಕಾಯಿತು. ಅದರಲ್ಲಿ ಉಗ್ರರೂಪದ ಶಕ್ತಿ ದೇವತೆಗಳ ಆರಾಧನೆ ತಳವರ್ಗದವರ ಪಾಲಾಗಿ ಸೌಮ್ಯ ದೈವಗಳ ಆರಾಧನೆ ವೈದಿಕರದ್ದಾಯಿತು. ಇಂತಹ ಮಾತೃ ದೇವತೆಗಳ ಕಲ್ಪನೆ ನದಿ, ಭೂಮಿ, ಕಾಡುಗಳು ಬಂದಿದ್ದು ಆರಾಧನೆಗೆ ಒಳಗಾದವು. ಮಾತೃದೇವತೆಗಳ ಆರಾಧನೆಯನ್ನು ಇಂದಿಗೂ ದುಡಿಯುವ ವರ್ಗಗಳು, ಕುಶಲಕರ್ಮಿ ವರ್ಗಗಳು ಮತ್ತು ತಳಸಮುದಾಯಗಳೇ ಮಾಡುತ್ತಾ ಬಂದಿದ್ದು, ಅದರಲ್ಲಿ ಕರ್‌ಕರ್ ಮುಂಡ ಸಮುದಾಯ ಒಂದಾಗಿದೆ.

**ಕರ್‌ಕರ್‌ಮುಂಡರ ದೈವಾರಾಧನೆ**

ಪ್ರತಿ ಸಮುದಾಯಗಳು ನಂಬಿರುವಂತೆ ಇವರು ಸಹ ಶಿಷ್ಠ ಮತ್ತು ದುಷ್ಠ ಶಕ್ತಿಗಳನ್ನು ಆರಾಧಿಸುವರು. ಸ್ವರ್ಗ ನರಕ ಆತ್ಮ ಪ್ರೇತಾತ್ಮದ ನಂಬಿಕೆಗಳು ಇವರಲ್ಲಿ ಬೇರೂರಿವೆ. ಶಿಷ್ಠ ಶಕ್ತಿಗಳನ್ನು ಭಕ್ತಿಯಿಂದ ದುಷ್ಠ ಶಕ್ತಿಗಳನ್ನು ಭಯದಿಂದ ಆರಾಧಿಸುವರು. ಮಾರಮ್ಮ, ಕೊಲ್ಲಾಪುರದಮ್ಮ, ಕಾಳಮ್ಮ, ಕೊಲ್ಲಾಪುರದ ಲಕ್ಷ್ಮೀ, ಗೂಗಲಮಾರಿದುರ್ಗಮ್ಮ, ಮುತ್ಯಾಲಮಾರಿದುರ್ಗಮ್ಮ, ಅಂಕಮ್ಮ, ಸುಂಕಲಮ್ಮ ಎಲ್ಲಮ್ಮ, ಚೌಡಮ್ಮ ಇತ್ಯಾದಿ ಮಾತೃದೇವತೆಗಳನ್ನು ಕುಲದೇವತೆಗಳನ್ನಾಗಿಸಿಕೊಂಡು ಪೂಜಿಸುವರು. ಈ ಮಾತೃದೇವತೆಗಳ ಜೊತೆಗೆ ಅರಕೇರಿ ಅಮೋಘಸಿದ್ದ, ತಿರುಪತಿ ವೆಂಕಟೇಶ್ವರ, ಆಂಜನೇಯ, ಅಜ್ಜಯ್ಯ ಇತ್ಯಾದಿ ಪುರುಷ ದೈವಗಳನ್ನು ಆರಾಧಿಸುವರು. ಇವುಗಳನ್ನು ನಮ್ಮ ಮನೆ ದೇವರುಗಳು ಎಂದು ಪೂಜಿಸುವರು. ಆದರೆ ಇವುಗಳು ಮನೆದೇವರುಗಳಂತೆ ಕಾಣುತ್ತಿಲ್ಲ. ನಾವು ಅಲೆಮಾರಿಗಳು ಊರೂರು ತಿರುಗುತ್ತಾ ಜೀವಿಸುವಾಗ ನಮಗೆ

ಯಾವ ದೇವರುಗಳು ಒಳ್ಳೆಯದನ್ನು ಮಾಡುತ್ತವೋ ಅವುಗಳನ್ನೇ ಆರಾಧಿಸುತ್ತಾ ಬಂದಿದ್ದೇವೆ. ಇವು ನಮ್ಮ ಮೂಲ ದೇವರಲ್ಲ ಎಂದು ಸಮುದಾಯದ ತಿಳುವಳಿಕೆದಾರರು ಅಭಿಪ್ರಾಯ ಪಡುವರು. ಸಿಂಗ್ ಕೆ.ಸ್ ಮತ್ತು ಅನಂತಕೃಷ್ಣ ಅಯ್ಯರ್ ಹಾಗೂ ನಂಜುಂಡಯ್ಯ ಅವರು ಕರ್‌ಕರ್ ಮುಂಡರು ಗುರುಮೂರ್ತಿ ಎಂಬ ದೇವರನ್ನು ಪೂಜಿಸುವರು. ಈ ದೇವರಿಗೆ ಆಷಾಢ ಮಾಸದ ಹನ್ನೊಂದನೆಯ ದಿನದಂದು ವಿಶೇಷಪೂಜೆ ಸಲ್ಲಿಸುವರು ಎಂದು ತಿಳಿಸಿದ್ದಾರೆ. ಆದರೆ ಈ ಗುರುಮೂರ್ತಿ ದೇವರ ಬಗ್ಗೆ ತಿಳುವಳಿಕೆದಾರರಿಂದ ಯಾವುದೇ ಮಾಹಿತಿ ತಿಳಿದು ಬಂದಿಲ್ಲ. ಆದರೆ ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಹಂಪಿಯ ವಿರೂಪಾಕ್ಷನನ್ನು ಕಾವ್ಯದ ಆರಂಭಿಕ ಸಾಲುಗಳಲ್ಲಿ "ಶ್ರೀಪತಿಗೆ ಸೊಬಗನುಡುಪತಿಗೆ ಶಾಂತಿಯನು ವಾ ಣೀಪತಿಗೆ ಚಾತುರ್ಯಮಂ ದಿವಸ್ಪತಿಗೆ ಪ್ರ ತಾಪಮಂ ಸುರಪತಿಗೆ ಭೋಗಮಂ ರತಿಪತಿಗೆ ಮೂಲೋಕವಾವರಿಸುವ ರೂಪಂ ಸರಿತ್ಪತಿಗೆ ಗಂಭೀರತೆಯನು ಸ್ವಾ ಹಾಪತಿಗೆ ತೇಜಮಂ ಕೊಟ್ಟ **ಗುರುಮೂರ್ತಿ ಪಂಪಾಪತಿ ವಿರೂಪಾಕ್ಷ** ನೆಮಗಿಷ್ಟ ಸಿದ್ಧಿಯಂ ಮಾಳ್ಕೆ ಸಂತೋಷದಿಂದ (ರಾಘವಾಂಕನ ಹರಿಶ್ಚಂದ್ರ ಕಾವ್ಯ !! ೧ !! )" (ವಿರೂಪಾಕ್ಷಿ ಪೂಜಾರಹಳ್ಳಿ:೨೦೧೫:೫) ಹಂಪಿ ವಿರೂಪಾಕ್ಷನನ್ನು ಬೇಡರು ಗುರೂಮೂರ್ತಿ ವಿರೂಪಾಕ್ಷ ಎಂದು ಕರೆಯುವರು. ಹಾಗಾಗಿ ಬೇಡರ ಒಳಪಂಗಡವಾದ ಈ ಸಮುದಾಯವು ವಿರೂಪಾಕ್ಷನನ್ನೇ ಸಮುದಾಯದ ಮೂಲ ದೈವವಾಗಿ ಸ್ವೀಕರಿಸಿ ಆರಾಧಿಸಿದೆ ಎಂದು ಹೇಳಬಹುದು. ಬಹುಶಃ ಗುರುಮೂರ್ತಿಯೇ ಈ ಸಮುದಾಯದ ಮೂಲದೈವವಾಗಿರಬಹುದು. ಆಷಾಢ ಮಾಸದಲ್ಲಿ ಅಕಾಲಿಕ ಮರಣಕ್ಕೆ ತುತ್ತಾಗಿ ಆತ್ಮ ದೆವ್ವವಾಗುತ್ತದೆ ಎಂಬ ನಂಬಿಕೆ ಇದೆ. ಈ ಆತ್ಮಗಳು ಮೂರು ಅಥವಾ ಐದು ದಾರಿಕೂಡುವ ಸ್ಥಳದಲ್ಲಿರುತ್ತವೆ. ಅವುಗಳನ್ನು ಪ್ರೇತಾತ್ಮವಾಗಿಸದೇ ಸ್ವರ್ಗಕ್ಕೆ ಕಳುಹಿಸಲು ಪೂಜೆ ಸಲ್ಲಿಸಲಾಗುವುದು. ಆ ಸಂದರ್ಭದಲ್ಲಿ ಈ ಗುರುಮೂರ್ತಿ ದೇವರು ಪ್ರಮುಖವಾಗಿರುತ್ತದೆ. ಕರ್‌ಕರ್‌ಮುಂಡರ ಸಾಂಸ್ಕೃತಿಕ ನಾಯಕ ಮಂದಲತಾತ ನಾಗಿದ್ದನು ಎಂದು ಪೂಜಾರಹಳ್ಳಿ ವಿರೂಪಾಕ್ಷಿಯವರು ಗುರುತಿಸಿದ್ದಾರೆ. ಅದರ ವಿವರಗಳು ಲಭ್ಯವಾಗಿಲ್ಲ.

ಕರ್‌ಕರ್ ಮುಂಡರ ಮೂಲ ದೈವಗಳ ಬದಲಿಗೆ ಸ್ಥಳೀಯ ಆರಾಧನಾ ದೈವಗಳೇ ಇಂದು ಪೂಜಿಸಲ್ಪಡುತ್ತಿವೆ. ಇವರು ಮಾತೃದೇವತೆಗಳ ಆರಾಧಕರಾಗಿದ್ದಾರೆ. ಪ್ರತಿವರ್ಷಕೆಲವೊಮ್ಮೆ ಮೂರರಿಂದ ಐದು ವರ್ಷಗಳವರೆಗೆ ಮಂಗಳವಾರ ಮತ್ತು ಶುಕ್ರವಾರ ಇವರು ಬೇವಿನಮರದ ಕೆಳಗೆ ಕಲ್ಲುಗಳನ್ನಿಟ್ಟು, ಶಕ್ತಿದೇವತೆಗಳ ಹೆಸರಿನಲ್ಲಿ ಹಬ್ಬ ಜಾತ್ರೆ ಮಾಡುವರು. ಆ ದಿನದಂದು ಹಂದಿಯನ್ನು ಬಲಿ ನೀಡಿ ದೇವರಿಗೆ

ಸಂತೃಪ್ತಿಗೊಳಿಸಲಾಗುತ್ತಿತ್ತು. ಇಂದು ಕೋಳಿ, ಕುರಿ, ಮೇಕೆಗಳು ಹಂದಿಯ ಸ್ಥಾನವನ್ನು ಪಡೆದುಕೊಂಡಿವೆ. ಇವರು ದುಷ್ಟಶಕ್ತಿಗಳಿಂದ ಭಯ ಭೀತರಾಗಿ ಸಂತೃಪ್ತಿಗಾಗಿ ಹುಣ್ಣಿಮೆ, ಅಮವಾಸ್ಯೆ ದಿನಗಳಲ್ಲಿ ಜಾತ್ರೆ ಮಾಡುವರು. ದೆವ್ವಗಳು ಮರದ ಮೇಲೆ ಮೂರುಹಾದಿ ಕೂಡುವ ಸ್ಥಳದಲ್ಲಿ ಇರುತ್ತವೆ. ಸತ್ತ ವ್ಯಕ್ತಿಯ ಆತ್ಮ ಪ್ರೇತಾತ್ಮವಾಗಿ ಅಂದರೆ ಪುರುಷನ ಆತ್ಮ ಮಹಿಳೆಯರ ದೇಹದೊಳಗೆ, ಮಹಿಳೆಯರ ಆತ್ಮ ಪುರುಷನ ದೇಹದೊಳಗೆ ಪರಕಾಯ ಪ್ರವೇಶ ಮಾಡುತ್ತವೆ. ಇಂತಹ ಸಂದರ್ಭದಲ್ಲಿ ಮಾಟ-ಮಂತ್ರವಿದ್ಯೆಯನ್ನು ಕಲಿತ ವ್ಯಕ್ತಿಯಿಂದ ದೆವ್ವ ಬಿಡಿಸುವರು. ಮತ್ತು ದೇವರುಗಳ ಮೊರೆ ಹೋಗಿ ಹರಕೆ ಹೊತ್ತು ನಂತರ ಜಾತ್ರೆ ಮಾಡಿ ಆತ್ಮಗಳನ್ನು ಸಂತೈಸುವರು. ಇಂತಹ ಹರಕೆ ಸಲ್ಲಿಸುವ ಜಾತ್ರೆಗಳಲ್ಲಿ ಗೂಗಲಮರಿ ದುರ್ಗಮ್ಮನ ಜಾತ್ರೆಯು ಒಂದಾಗಿದೆ. ಅದರಲ್ಲಿ ಪಾಲ್ಗೊಂಡಾಗ ಅಲ್ಲಿ ವಿಶೇಷವಾದ ಆಚರಣೆಗಳು ನಡೆಯುವುದನ್ನು ಕಾಣುತ್ತೇವೆ.

**ಗೂಗಲಮಾರಿ ದುರ್ಗಮ್ಮನ ಜಾತ್ರೆ**

ಗೂಗಲಮಾರಿ ಗ್ರಾಮವು ಹುನಗುಂದ ತಾಲ್ಲೂಕಿನ ಬಾಗಲಕೋಟೆ ಜಿಲ್ಲೆಯಲ್ಲಿದೆ. ಇಲ್ಲಿನ ದುರ್ಗಮ್ಮ ಕುರಿತಾದ ಉಲ್ಲೇಖವನ್ನು ಕೇವಲ ಜನಪದರಿಂದ ಹುಟ್ಟಿಕೊಂಡ ಮೌಖಿಕ ಐತಿಹ್ಯಗಳಿಂದ ಮಾತ್ರ ತಿಳಿಯಲು ಸಾಧ್ಯವಿದೆ. ಗ್ರಾಮದ ಅಧಿದೇವತೆಯಾದ ದುರ್ಗಮ್ಮನಿಂದಾಗಿ ಗೂಗಲಮಾರಿದುರ್ಗಮ್ಮ ಎಂದೇ ಖ್ಯಾತವಾಗಿದೆ. ಎರಡು ಹೆಬ್ಬಂಡೆಗಳ ನಡುವಿನ ಗುಹೆಯಲ್ಲಿರುವ ದುರ್ಗಮ್ಮನಮೂರ್ತಿ ಜನಪದರ ನಂಬಿಕೆಯಲ್ಲಿ ಉದ್ಭವ ಮೂರ್ತಿಯಾಗಿ ಆರಾಧನೆಗೊಳ್ಳುತ್ತಿದೆ. ಆದರೆ ಇಂದು ವೈದಿಕೀಕರಣದ ಪ್ರಭಾವದಿಂದ ಚಾಮುಂಡಿಯ ರೂಪವನ್ನು ನೀಡಲಾಗಿದೆ. ತಳಸಮುದಾಯಗಳ ಅಧಿದೇವತೆಗಳನ್ನು ಕಾಲಾಂತರದಲ್ಲಿ ಹೇಗೆಲ್ಲಾ ವೈದೀಕರಣಗೊಳಿಸುತ್ತಾರೆಂಬುದು ಇಲ್ಲಿ ವೇದ್ಯವಾಗಿದೆ. ಅದರ ಅರಿವಿಲ್ಲದೇ ಎಷ್ಟೋ ತಳಸಮುದಾಯಗಳು ಅದರೊಟ್ಟಿಗೆ ಇಂದಿಗೂ ತಮ್ಮ ಆಚರಣೆ ಸಂಪ್ರದಾಯಗಳ ಮೂಲಕ ಮುಖಾಮುಖಿಯಾಗುತ್ತಿದ್ದಾರೆ. ಈ ದೇವಿಯನ್ನು ಸ್ಥಳೀಯ ಬೇಡ ಸಮುದಾಯದವರು ಪೂಜಿಸುತ್ತಿದ್ದಾರೆ. ಇದು ಕರ್‌ಕರ್‌ಮುಂಡರ ಗುಂಜಿಲೋಳ್, ಶರಕಲೋಳ್ ಬೆಡಗಿನವರ ಕುಲದೇವತೆಯಾಗಿದೆ. ಈ ಜಾತ್ರೆಯು ಮೂರು ವರ್ಷ, ಕೆಲವೊಂದು ಸಲ ಐದು ವರ್ಷಗಳಲ್ಲಿ ಹರಕೆದಾರರ ಆರ್ಥಿಕತೆಯ ಆಧಾರದ ಮೇಲೆ ನಡೆಯುವುದು. ಈ ಸಮುದಾಯದವರು ಅಲೆಮಾರಿಗಳಾಗಿದ್ದ ಸಂದರ್ಭದಲ್ಲಿ ಈ ದೇವಿಯ ಆರಾಧನೆಯ ಪರಂಪರಾಗತವಾಯಿತು. ಇವರು ಈ ಸ್ಥಳದಿಂದ ಸುರಪುರ, ಕೋಡೆಕಲ್ಲು, ರಾಜನಕೋಳೂರು ಮೊದಲಾದ ಭಾಗಗಳಿಗೆ ವಲಸೆ ಹೋಗಿದ್ದರೂ, ಇಂದಿಗೂ ಈ ದೇವಿಯ ಮೂಲಸ್ಥಾನಕ್ಕೆ ಬಂದು ಹರಕೆ

ತೀರಿಸಿ ಹೋಗುವುದು ನಿರಂತರವಾಗಿದೆ. ಕೇವಲ ಗುಂಜಿಲೋಳ್, ಶರಕಲೋಳ್ ಬೆಡಗಿನವರು ಅಲ್ಲದೆ ಇತರ ಸಮುದಾಯದವರ ಅಧಿದೇವತೆಯಾಗಿದ್ದಾಳೆ. ಈ ಜಾತ್ರೆಯ ಸಂದರ್ಭದಲ್ಲಿ ಇಡೀ ಕರ್‌ಕರ್ ಮುಂಡ ಸಮುದಾಯದ ಬಂಧುಗಳು ಪಾಲ್ಗೊಂಡು ಮುಖಾಮುಖಿಯಾಗುವರು.

**ನಂಬಿಕೆ ಆಚರಣೆಗಳು**

ಆದಿಮಾನವ ಬೌದ್ಧಿಕವಾಗಿ ಮಾನವನಾದಾಗ ಅವನ ತಿಳುವಳಿಕೆಯಿಂದ ಗಣ ಸಮುದಾಯ, ಸಮೂಹ, ಸಮಾಜಗಳಾಗಿ ರೂಪಿತವಾದವು. ಮಾನವನ ಮೊದಲ ಹಂತದ ತಿಳುವಳಿಕೆ ಉನ್ನತೀಕರಣಗೊಂಡಾಗ ಹುಟ್ಟಿಕೊಂಡಿದ್ದೇ ಆಧ್ಯಾತ್ಮ. ಈ ಆಧ್ಯಾತ್ಮ(ಜ್ಞಾನ) ನಿರಂತರವಾಗಿ ಸಮಾಜದಲ್ಲಿ ಸಂಚರಿಸಲು ಮಾನವ ಕಂಡುಕೊಂಡ ಮಾರ್ಗ ದೇವರ ಕಲ್ಪನೆ. ಅದು ಪ್ರಕೃತಿ, ಮೂರ್ತಿ ಹಾಗೂ ವ್ಯಕ್ತಿಯ ಸ್ವರೂಪವು ಆಗಿರಬಹುದು. ಜ್ಞಾನ ದೇವರ ಸ್ವರೂಪದಲ್ಲಿ ಸಮಾಜದಲ್ಲಿ ಸಂಚರಿಸುತ್ತಿರುತ್ತದೆ. ಇದನ್ನು ಸಂವನಗೊಳಿಸಲು ಕಂಡುಕೊಂಡ ಮಾರ್ಗ ಆಚರಣೆ ಮತ್ತು ಸಂಪ್ರದಾಯಗಳು. ಇವುಗಳನ್ನು ಆಧುನಿಕತೆಗೆ ಮುಖಾಮುಖಿಯಾಗಿರುವ ಜನತೆ ಮೌಢ್ಯತೆ, ಕಂದಾಚಾರ ಎಂದು ಅನುಲಕ್ಷಿಸಿದರೂ ಸೂಕ್ಷ್ಮಮತಿಗಳಾಗಿ ಅವಲೋಕಿಸಿದಾಗ ಅದರ ಹಿಂದಿರುವ ವಿಶಿಷ್ಠ ಜ್ಞಾನ ತಿಳಿಯುತ್ತದೆ. ಹೀಗೆ ತಲೆಮಾರಿನಿಂದ ತಲೆಮಾರಿಗೆ ಜ್ಞಾನ ಅಥವಾ ಆಧ್ಯಾತ್ಮ ಪ್ರವಹಿಸಲು ಆಚರಣೆ ಮತ್ತು ಸಂಪ್ರದಾಯಗಳು ಮಧ್ಯವರ್ತಿಗಳಂತೆ ಕಾರ್ಯೋನ್ಮುಖವಾಗಿರುತ್ತವೆ. ಅಂತಹ ಕಾಲದಲ್ಲಿ ಹುಟ್ಟಿಕೊಂಡ ಹಬ್ಬ, ಜಾತ್ರೆ, ಜೀವನಾವರ್ತಕ ಆಚರಣೆಗಳು ತನ್ನದೇ ಆದ ವಿಧಿ-ನಿಷೇಧಗಳಿಂದ ಸಮುದಾಯದ ಜನರ ಬದುಕನ್ನು ನಿರಂತರ ಪುನರ್ ಅಭಿನಯಗೊಳ್ಳುವಂತೆ ಮಾಡುತ್ತವೆ. ಇಂತಹ ಸಂದರ್ಭದಲ್ಲಿ ಒಳಗೊಳ್ಳುವ ಮತ್ತು ಹೊರಗೊಳ್ಳುವ ಪ್ರಕ್ರಿಯೆಗಳು ನಡೆಯುತ್ತವೆ. ನಂಬಿಕೆ, ಆಚರಣೆಗಳು ದೈವತ್ವಕ್ಕೆ ಹರಕೆ ಸಲ್ಲಿಸುವುದರಿಂದ ಮೊದಲ್ಗೊಳ್ಳುತ್ತವೆ. ಹರಕೆಗಳಲ್ಲಿ ಅರಿಶಿಣ ಕುಂಕುಮದ ಹರಕೆ, ದೀಪದ ಹರಕೆ, ಮೀಸಲು ಕಟ್ಟುವ ಹರಕೆ, ಉಪ್ಪಿನ ಹರಕೆ, ಮುಡುಪು ಕಟ್ಟುವ ಹರಕೆ, ಶಿಕ್ಷಾಹರಕೆ, ಉರುಳುಸೇವೆ, ಪಾದಯಾತ್ರೆ, ಉಪವಾಸ, ಸಿಡಿಯಾಡುವುದು, ಕೆಂಡತುಳಿಯುವುದು, ಬೆತ್ತಲೆ ಸೇವೆ, ಮುತ್ತು ಕಟ್ಟಿಸುವುದು, ಬಲಿ ಅರ್ಪಣೆ, ಕೊಡದ ಪೂಜೆ ಇತ್ಯಾದಿ ವಿಧಗಳನ್ನು ಕಾಣಬಹುದು. ದೇವರನ್ನು ಸಂತೃಪ್ತಿಗೊಳಿಸಿ ತಾವು ಮಾಡಿದ ತಪ್ಪುಗಳಿಗೆ ಪ್ರಾಯಶ್ಚಿತ್ತವಾಗಿ ಹರಕೆಯ ಪೂಜೆಗಳು ಹುಟ್ಟಿಕೊಂಡವು. ಈ ರೀತಿಯ ಹರಕೆ ಪೂಜೆಗಳು ಗೂಗಲಮಾರಿದುರ್ಗಮ್ಮನ ಜಾತ್ರೆಗಳಲ್ಲಿಯೂ ಸಹ ಕಂಡುಬರುತ್ತವೆ.

ಹರಕೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಆಚರಣೆ ಮತ್ತು ಸಂಪ್ರದಾಯಗಳು ದೇವರ ಕುರಿತಾದ ಭಯ ಭಕ್ತಿಯ ರೂಪಕಗಳಾಗಿರುತ್ತವೆ. ಮೇಲೆ ಸೂಚಿಸಿದ ಹರಕೆಗಳಲ್ಲಿ ಕೊಡದ ಪೂಜೆ, ಬಲಿಕೊಡುವುದು, ಉರುಳು ಸೇವೆ, ಪಾದಯಾತ್ರೆ, ಉಪವಾಸದ ಹರಕೆಗಳು ಈ ಜಾತ್ರೆಯಲ್ಲಿ ಕಂಡುಬರುತ್ತವೆ.

ಶಕ್ತಿ ದೇವತೆಗಳು ಪ್ರತಿ ಮಂಗಳವಾರ ಮತ್ತು ಶುಕ್ರವಾರ ಹುಣ್ಣಿಮೆ, ಅಮವಾಸ್ಯೆ ದಿನಗಳಲ್ಲಿ ಮಾತ್ರ ಆರಾಧನೆಗೆ ಒಳಪಡುತ್ತವೆ. ಹರಕೆಗಳನ್ನು ತೀರಿಸುವ ಸಂಧಿಗ್ಧ ಕಾಲವಾಗಿರುತ್ತದೆ. ಆ ಹಿನ್ನೆಲೆಯಲ್ಲಿ ಗೂಗಲುಮಾರಿದುರ್ಗಮ್ಮನ ಆರಾಧನೆಯು ಸಹ ಇದೇ ದಿನಗಳಲ್ಲಿ ನಡೆಯುತ್ತದೆ. ಈ ದೇವಿಗೆ ಹರಕೆ ಹೊತ್ತ ಕರ್‌ಕರ್ ಮುಂಡರು, ಪ್ರತಿ ಮೂರು ವರ್ಷ, ಕೆಲವೊಂದು ಸಂದರ್ಭದಲ್ಲಿ ಐದು ವರ್ಷಗಳಲ್ಲಿ ಹರಕೆ ತೀರಿಸುವ ಸಲುವಾಗಿ ಮೂಲನೆಲೆಗೆ ಬರುವರು. ಇಲ್ಲಿ ಬಲಿ ನೀಡುವುದು ವಿಳಂಬವಾದಲ್ಲಿ ತಪ್ಪು ದಂಡ ಕಟ್ಟಿಕೊಂಡು ಕುರಿ, ಓತ ಕುರಿಗಳನ್ನು ಅವರವರ ಆರ್ಥಿಕತೆಗೆ ತಕ್ಕಂತೆ ಹರಸಿಕೊಳ್ಳುವರು. ಈ ಜಾತ್ರೆಯಲ್ಲಿ ನಡೆಯುವ ಆಚರಣೆಗಳೆಂದರೆ

**ಗಂಗೆಪೂಜೆ ಅಥವಾ ಕುಂಭದ ಪೂಜೆ**

ಆದಿವಾಸಿಗಳು ಮಗುತಾಯಿಯ ಗರ್ಭದಿಂದ ಹುಟ್ಟುತ್ತದೆಂದು ಮನೆಗೊಂದು ಶಿಶು ಜನನದ ಕ್ಷೇತ್ರ ಗರ್ಭವನ್ನು ಪೂಜಿಸುತ್ತಿದ್ದರು. ಮುಂದೆ ಮಗು ಜನಿಸುವುದು ಹೆಣ್ಣಿನ ಯೋನಿಯಿಂದ ಎಂದು ತಿಳಿದ ಮೇಲೆ ಗರ್ಭಪೂಜೆಯಂತೆ ಯೋನಿಪೂಜೆಯೂ ಪ್ರಾರಂಭವಾಯಿತು. ಆದಿವಾಸಿಗಳ ಈ ಗರ್ಭಯೋನಿ ಪೂಜೆಗಳೇ ವೈದಿಕರಲ್ಲಿ ಕುಂಭ ಪೂಜೆಯ ಸ್ವರೂಪ ಪಡೆಯಿತು. ಜನಪದರು ಫಲೋತ್ಪತ್ತಿಯ ಸಂಕೇತವಾಗಿ ಕೊಡದ ಪೂಜೆಯನ್ನು ಇಂದಿಗೂ ಮುಂದುವರೆಸಿಕೊಂಡು ಬಂದಿದ್ದಾರೆ. ಇಂದಿಗೂ ಅಸ್ಸಾಂನ ಕಾಮಕ್ಯೆ ದೇವಾಲಯದಲ್ಲಿ ನಡೆಯುವ ಯೋನಿ ಪೂಜೆಯು ಇದಕ್ಕೆ ಸಾಕ್ಷಿಯಾಗಿದೆ. ಗಂಗೆ ಪೂಜೆಯಿಂದಲೇ ದುರ್ಗಮ್ಮನ ಜಾತ್ರೆಯನ್ನು ಈ ಸಮುದಾಯದವರು ಆರಂಭಿಸುವರು. ದೇವಾಲಯಕ್ಕೂ ಗಂಗೆ ಮೂಲಕ್ಕೂ ಅರ್ಧ ಕಿಲೋಮೀಟರ್ ಅಂತರವಿದೆ. ಅಲ್ಲಿನ ಬಾವಿಯ ನೀರಿನಲ್ಲಿ ಹರಕೆ ಹೊತ್ತವರು ಮೈ ತೊಳೆದು ಶುದ್ದಗೊಳ್ಳುವರು. ಆಗ ಇವರನ್ನು ದೇವರ ಪ್ರತಿನಿಧಿಗಳೆಂದು ಭಾವಿಸಲಾಗುತ್ತದೆ. ಬಾವಿಯ ಕಟ್ಟೆಯ ಮೇಲೆ ಕಂಬಳಿಯ ಗದ್ದುಗೆ ಹಾಕಲಾಗುತ್ತದೆ. ಹರಸಿಕೊಂಡ ಬಲಿಗಳ ಸಂಖ್ಯೆಗೆ ಅನುಗುಣವಾಗಿ ಬಾನತುಂಬಿದ ಮಣ್ಣಿನ ಕುಂಭಗಳನ್ನು ಇಟ್ಟು ಪಂಚಕಜ್ಜಾಯಗಳಾದ ನೆನೆಸಿದ ಕಡಲೆಕಾಳು ಬಾಳೆಹಣ್ಣು, ಎಲೆ, ಅಡಿಕೆ, ಉತ್ತತ್ತಿ, ಒಣ ಕೊಬ್ಬರಿಗಳನ್ನಿಟ್ಟು, ಪೂಜೆ ಮಾಡುವರು. ಹರಕೆ ಹೊತ್ತ ಕುಟುಂಬದ ಸದಸ್ಯರು ಆ

ಕುಂಭಗಳನ್ನು ಹೊತ್ತು ಸಾಗುವರು. ನೆರೆದ ಜನರೆಲ್ಲ ಹಣೆಗೆ ಅರಿಶಿಣ ಹಚ್ಚಿಕೊಂಡು ದುರುಗಮ್ಮನಿನ್ನಾಲ್ಕು ಉಧೋ ಉಧೋ ಎಂಬ ಉದ್ಘಾರದೊಂದಿಗೆ ದೇವಿಯನ್ನು ಸ್ಮರಿಸುತ್ತಾ ಸೋಬಾನೆ ಪದ ಹಾಡುತ್ತಾ ದೇವಾಲಯದತ್ತ ಸಾಗುವರು. ಹರಕೆದಾರರು ಗಂಗೆ ಮೂಲದಿಂದ ದೇವಾಲಯದವರೆಗೂ ದೀಡು ನಮಸ್ಕಾರ ಹಾಕುತ್ತಾ ಬರುವರು. ಕೈಯಲ್ಲಿ ಒಂದು ಬಿಳಿ ಜೋಳದ ದಂಟನ್ನು ಹಿಡಿದು ಅಡ್ಡಬಿದ್ದಾಗ ಆ ದಂಟಿನಿಂದ ಗೆರೆ ಕೊರೆಯುತ್ತಾ ಸಾಗುವರು. ಈ ಗೆರೆ ಕೊರೆಯುವ ಉದ್ದೇಶ ದೇವಿ ನಮಗೆ ಹಾಕಿದ ನಿರ್ಬಂಧಗಳನ್ನು ತೊರೆದು ಹಾಕುವ ಮತ್ತು ನಾವು ನಿನಗೆ ತಲೆಬಾಗಿದ್ದೇವೆ ಎಂಬ ನಂಬಿಕೆಯಾಗಿರುತ್ತದೆ. ಮಧ್ಯದಲ್ಲಿ ಹರಕೆ ಹೊತ್ತ ಮಹಿಳೆಯ ಮೈಯಲ್ಲಿ ದೇವಿಯು ಪರಕಾಯ ಪ್ರವೇಶ ಮಾಡಿ ಭಕ್ತರು ನಿರ್ವಹಿಸಿದ ಸೇವೆಗಳ ತೃಪ್ತಿ ಹಾಗೂ ತಪ್ಪುಗಳ ತಿಳುವಳಿಕೆ ನೀಡಿ ಬೇಡಿಕೆಗಳನ್ನು ಇಡುವಳು. ಆಗ ಜನರು ಅವಳ ತಲೆಯ ಮೇಲೆ ನಿಂಬೆ ಹಣ್ಣು ನಿವಾಳಿಸಿ ಕೊಯ್ದು ಶಾಂತಗೊಳಿಸುವರು. ಆ ತಪ್ಪಿಗೆ ನಾವು ತಲೆಬಾಗಿದ್ದೇವೆ ಮುಂದಿನ ದಿನಮಾನಗಳಲ್ಲಿ ಅದನ್ನು ಈಡೇರಿಸುತ್ತೇವೆ ಎಂದು ಮಾತು ಕೊಟ್ಟು ಮುಂದೆ ಸಾಗುವರು. ದೇವಾಲಯ ಸಮೀಪಿಸಿದಾಗ ಕುಂಭಗಳನ್ನು ಕಟ್ಟೆಯ ಮೇಲೆ ಕಂಬಳಿ ಗದ್ದುಗೆ ಹಾಸಿ ಕೂರಿಸುವರು. ದೀಡು ನಮಸ್ಕಾರ ಹಾಕುತ್ತಾ ಬಂದವರಿಗೆ ಪುನಃ ಸ್ನಾನಮಾಡಿಸಿ ಹೊಸ ಬಟ್ಟೆ ಹಾಕಿಸಿ ದೇವರ ಪಕ್ಕದಲ್ಲಿ ಕೂರಿಸುವರು. ಇವರಿಗೆ ಜಾತ್ರೆಗೆ ಬಂದ ಎಲ್ಲಾ ನೆಂಟರಿಷ್ಟರು ಬಟ್ಟೆ, ಹಣ ಇತರೆ ದಿನ ಬಳಕೆಯ ವಸ್ತುಗಳನ್ನು ಜನರ ಸಮ್ಮುಖದಲ್ಲಿ ಅವರ ಹೆಸರುಗಳನ್ನು ಜೋರಾಗಿ ಕೂಗಿ ಉಡುಗೊರೆ ನೀಡುವರು. ದಕ್ಷಿಣ ಕರ್ನಾಟಕದ ಋತುಮತಿ, ಮದುವೆ, ನಾಮಕರಣ ಸಮಯಗಳಲ್ಲಿ ಈ ರೀತಿಯ ಉಡುಗೊರೆ ನೀಡುವರು. ಉಡುಗೊರೆಗಳ ನೀಡುವಿಕೆ ಹರಕೆ ಹೊತ್ತವರು ಜಾತ್ರೆಗೆ ಮಾಡಿದ ಖರ್ಚನ್ನು ನಿಭಾಯಿಸಲು ಸಹಾಯಕವಾಗುತ್ತವೆ.

**ಬಲಿಕೊಡುವ ಆಚರಣೆ :**

ಕರ್‌ಕರ್ ಮುಂಡರು ಹರಸಿಕೊಂಡ ಹರಕೆಯಂತೆ ಎರಡು ಮೂರು ಬೇಟೆ ತಂದು ಬಲಿನೀಡುವರು. ಇದರ ಮೂಲಕ ದೇವಿಯು ಸಂತೃಪ್ತಳಾಗುವಳು ಎಂಬ ನಂಬಿಕೆಯಿಂದ ಬಲಿ ನೀಡುವರು. ಪ್ರತಿ ಸ್ತ್ರೀ ದೇವತೆಗಳಿಗೆ ಬಲಿ ನೀಡುವಂತೆ ದುರ್ಗಮ್ಮಗೂ ಬಲಿ ನೀಡಲಾಗುತ್ತದೆ. ಗಂಗೆಪೂಜೆ ಬಳಿಕ ದೇವಿಗೆ ಎದುರಾಗಿ ಕೋಳಿ, ಮೇಕೆ, ಓತಗಳನ್ನು ಬಲಿ ನೀಡುವರು. ಬಲಿಯು ಮುಸ್ಲಿಂರ ಕ್ರಿಯಾ ವಿಧಿಯ ಅಲಾಲು ರೀತಿ ಕುತ್ತಿಗೆ ಕೊಯ್ಯುತ್ತಾ ನಡೆಯುತ್ತದೆ. ಕುತ್ತಿಗೆ ಕೊಯ್ದು ನಂತರ ಬಲಗಾಲಿನ ಮುಂಗಾಲನ್ನು ಕತ್ತರಿಸಿ ಬೇಟೆಯ ಬಾಯಿಗೆ ಇಟ್ಟು, ಪೂಜಾರಿಯಿಂದ ಬಾಯಿಗೆ ನೀರು

ಬಿಟ್ಟು ದೇವಿಗೆ ಸಮರ್ಪಿಸುವರು. ಈ ಬಲಿಯಿಂದ ಆಹಾರ ತಯಾರಿಸಿ ದೇವಿಗೆ ಎಡೆ ನೀಡುವರು. ನಂತರ ನೆರೆದ ಎಲ್ಲಾ ಬಾಂಧವರು ದೇವಿಯ ಪ್ರಸಾದವೆಂದು ಭಾವಿಸಿ ಊಟ ಮಾಡುವರು. ಈ ಊಟದ ಜೊತೆಗೆ ಕುಂಭದಲ್ಲಿಯ ಬಾನದ ಒಂದೊಂದು ತುತ್ತುಗಳನ್ನು ಜನರಿಗೆ ನೀಡುವರು ಇಲ್ಲಿಗೆ ಹರಕೆ ತೀರಿತು ಎಂದು ದೇವತೆಗೆ ನಮಸ್ಕರಿಸಿ ತಮ್ಮ ತಮ್ಮ ಊರುಗಳಿಗೆ ತೆರಳುವರು. ಬರುವ ಮುಂದಿನ ವರ್ಷಕ್ಕೆ ಮತ್ತೊಬ್ಬರು ಹರಕೆ ಹೊತ್ತುಕೊಳ್ಳುವರು. ಜಾತ್ರೆಯ ಸಂದರ್ಭದಲ್ಲಿ ಅಲ್ಲದೆ ಜವುಳ ತೆಗೆಸುವ ಸಂದರ್ಭದಲ್ಲಿಯೂ ದೇವಿಯ ಮೂಲಸ್ಥಾನಕ್ಕೆ ಬಂದು ಹರಕೆ ಸಲ್ಲಿಸುವರು.

ಅಲೆಮಾರಿಗಳು ಜೀವನೋಪಾಯಕ್ಕಾಗಿ ಬಹುದೂರದ ಪ್ರದೇಶಗಳಲ್ಲಿ ಚದುರಿ ಹೋಗಿದ್ದಾರೆ. ಜನರನ್ನು ಒಟ್ಟುಗೂಡಿಸುವ, ಒಂದೆಡೆ ಸೇರುವ ಅವಕಾಶ ಬರುವುದು ಜಾತ್ರೆ, ಆಚರಣೆಗಳ ಸಂದರ್ಭದಲ್ಲಿ ಮಾತ್ರ.ಸಮುದಾಯದಲ್ಲಿನ ಒಳ ಜಗಳಗಳನ್ನು ಬಗೆಹರಿಸುವ ಸಂಬಂಧ ಕುಲಪಂಚಾಯ್ತಿ ಸೇರುವುದು ಸಹ ಜಾತ್ರೆ ಹಾಗೂ ಹಬ್ಬಗಳ ಸಂದರ್ಭದಲ್ಲಿ. ಜೊತೆಗೆ ಸಮುದಾಯದ ಅನನ್ಯತೆಯ ಪ್ರತೀಕವಾಗಿ ಜನರ ನಡುವೆ ಸಂಬಂಧ ಬೆಸೆಯುತ್ತಾ ದೇವರ ಭಕ್ತಿಯ ರೂಪದಲ್ಲಿ ತಪ್ಪುದಾರಿ ತುಳಿಯದಂತೆ ಸಮಾಜವನ್ನು ಎಚ್ಚರಿಸುತ್ತವೆ. ಸಮುದಾಯದಲ್ಲಿ ಕೊಡುಕೊಳ್ಳುವಿಕೆ ಹಾಗೂ ಅವರ ಪರಸ್ಪರ ಕಷ್ಟಸುಖಗಳು ಹಂಚಿಕೊಳ್ಳುವುದು ಇದೇ ಸಂದರ್ಭದಲ್ಲಿ ಎಂದು ಹೇಳಬಹುದು.

**ಜನಪದ ಸಾಹಿತ್ಯ**

ಸಮುದಾಯಗಳ ಅನನ್ಯತೆ ಉಳಿದಿರುವುದು ಮೌಖಿಕ ಸಾಹಿತ್ಯದಿಂದಲೇ. ನಂತರ ಅಧ್ಯಯನಕಾರರ ಲಿಪ್ಯಂತರದಿಂದಾಗಿ ಜಾನಪದ ಸಾಹಿತ್ಯ ಎಂಬ ಶೀರ್ಷಿಕೆ ಪಡೆಯಿತು. ಇನ್ನೂ ಲಿಪಿಕರಣಗೊಳ್ಳದ ಅನೇಕ ಸಮುದಾಯಗಳ ಜನಪದ ಸಾಹಿತ್ಯ ಅಪಾರವಾಗಿದೆ. ಇಂತಹ ಮೌಖಿಕ ಸಾಹಿತ್ಯವನ್ನು ಇಂದಿಗೂ ಮುಂದುವರೆಸುತ್ತಿರುವರು. ವೃತ್ತಿಗಾಯಕರು ಎಂದರೆ ತಪ್ಪಾಗಲಿಕ್ಕಿಲ್ಲ. ಶಿಷ್ಟ ಸಮುದಾಯಗಳ ಮೌಖಿಕ ಸಾಹಿತ್ಯವು ಈಗಾಗಲೇ ದಾಖಲಾಗಿದೆ. ಆದರೆ ಅಲೆಮಾರಿಗಳ ವೃತ್ತಿಯ ಜೊತೆ ಜೊತೆಯಲ್ಲಿ ಮುಂದುವರೆಯುತ್ತಿರುವ ಜನಪದ ಸಾಹಿತ್ಯ ದಾಖಲೆಗೊಳ್ಳುವ ಅಗತ್ಯವಿದೆ.

ಕರ್ನಾಟಕದಲ್ಲಿ ಅನೇಕ ಪರಂಪರೆಯ ವೃತ್ತಿಗಾಯಕರು, ವೈವಿಧ್ಯಮಯ ವೇಷ ಭೂಷಣಗಳಿಂದ ಅಲಂಕೃತರಾಗಿ ಹಲವು ವಾದ್ಯಗಳೊಂದಿಗೆ ಹಬ್ಬ, ಜಾತ್ರೆ, ಉತ್ಸವಗಳಲ್ಲಿ ಈ ಜನಪದ ಸಾಹಿತ್ಯವನ್ನು ಸಂವಹನಗೊಳಿಸುತ್ತಿರುವರು. ತಮ್ಮ ಆದಿದೈವದ ಮಹಿಮೆಗಳನ್ನು ಪ್ರಸಾರ ಮಾಡಿ ಜನತೆಯನ್ನು ದೈವಗಳೊಂದಿಗೆ ಅನುಸಂಧಾನ ಮಾಡುವ ಉದ್ದೇಶದೊಂದಿಗೆ ಕಾರ್ಯನಿರತರಾಗಿದ್ದಾರೆ. ಅವರ ನಂಬಿಕೆಯ ಕೇಂದ್ರಗಳಿಂದ

ಮತ್ತು ಕುಲದ ಕ್ರಿಯಾ ವಿಧಿಗಳ ಮೂಲಕ ದೀಕ್ಷೆ ಪಡೆದು ದೈವದ ಒಕ್ಕಲಿರುವ ಕಡೆಗಳಲ್ಲಿ ಧಾರ್ಮಿಕ ಆಚರಣೆಗಳ ನೇತೃತ್ವವಹಿಸಿ ನಡೆಸಿಕೊಡುವ ಹೊಣೆಗಾರಿಕೆಯನ್ನು ಹೊಂದಿರುವವರು. ಆಯಾ ದೈವದ ಒಕ್ಕಲು ಹೆಚ್ಚಾಗಿರುವ ಸ್ಥಳಗಳಲ್ಲಿ ಒಕ್ಕಲನ್ನು ಅಥವಾ ಊರುಗಳನ್ನು ಹಂಚಿಕೊಂಡು ದೈವ ಸಂಬಂಧಿ ಕಾರ್ಯಗಳನ್ನು ನಡೆಸುವರು. ಮೇಲು ನೋಟಕ್ಕೆ ಭಿಕ್ಷುಕರಂತೆ ಕಂಡು ಬರುವ ಇವರು, ಒಂದು ಕಾಲಕ್ಕೆ ಅತ್ಯಂತ ವೈಭವಯುತವಾಗಿ ಸಾಮಾಜಿಕ ಸ್ಥಾನಮಾನ ಹೊಂದಿದವರು. ಪ್ರಸ್ತುತ ದಿನಗಳಲ್ಲಿ ಭಿಕ್ಷುಕರು ಎಂಬ ಹಣೆ ಪಟ್ಟಿಯೊಂದಿಗೆ ಅಲೆಮಾರಿ ಬದುಕು ಸಾಗಿಸುತ್ತಿದ್ದರೆ, ಇಂತಹ ಸಮುದಾಯಗಳಲ್ಲಿ ಕರ್‌ಕರ್ ಮುಂಡ ಸಮುದಾಯವು ಒಂದಾಗಿದೆ.

ಕರ್‌ಕರ್‌ಮುಂಡ ಸಮುದಾಯದವರು ವಸ್ತ್ರ ಧರಿಸಿ ಮಕರಗ್ಯಾಲೋಗಳಾಗಿಯೇ ಭಿಕ್ಷೆ (ವರ್ತನೆ) ಬೇಡುವರು. ಮನೆ-ಮನೆಗೆ ಹೋಗಿ ಬೇಡುವ ಸಮಯದಲ್ಲಿ ಭಿಕ್ಷೆಗೆ ಪ್ರತಿಯಾಗಿ ಹಾಡಿನ ಚಿಕ್ಕ ಚಿಕ್ಕ ಸಂಗತಿಗಳ ಹಾಡುಗಳನ್ನು ಹಾಡುವರು. ಇಂತಹ ಹಾಡುಗಳು ಭಿಕ್ಷೆನೀಡಿದವರಿಗೆ ಒಳ್ಳೆಯದಾಗಲಿ ಎಂದು ಹಾರೈಸುವುದು, ಭವಿಷ್ಯದ ಕುರಿತಾದ ಜ್ಞಾನ ತನ್ನ ಸಮುದಾಯದ ಕುಲವೃತ್ತಿ ಇತ್ಯಾದಿ ವಸ್ತು ವಿಷಯಗಳನ್ನು ಒಳಗೊಂಡಿರುತ್ತವೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಲಭ್ಯವಾದ ಕೆಲವೊಂದು ಹಾಡುಗಳನ್ನು ಸಂಗ್ರಹಿಸಲಾಗಿದೆ.

'ತೂಗೋ ತೊಟ್ಟಿಲಾಗಲಿ ಬೆಳ್ಳಿ ಬಟ್ಟಲಾಗಲಿ, ಒಂದೇ ವಾರಿಗೆ ಎರಡಾಗಲಿ, ನಿಮ್ ಮುತ್ತೈದೀತನ, ನಿಮ್ ಮಕ್ಕಳ ಮುತ್ತೈದೀತನ, ದಾನದ ಕೈ ಎಕ್ಕಾಗಲಿ, ಮಹಾಲಕ್ಷ್ಮಿ ಜೀವಂತ ಸಂಪನ್ಮೂರ್ತಿನಾವಂತ ಕಣ್ಣಿಗೆ ಬಡಿಲಿ, ಆನಂದಾಗಲಿ ಹೋಗಿ ಬರ್‍ತಿನ್ರಿ ತಾಯೇರಾ..'

ಪ್ರಸ್ತುತದ ಹಾಡು ನಿಮ್ಮ ಜೀವನ ಸಂಮೃದ್ಧಿಯಿಂದ ಕೂಡಿರಲಿ ಎಂಬ ಆಶಯವನ್ನು ಹೊಂದಿದ್ದಾಗಿದೆ. ನಿಮ್ಮ ಮನೆಯಲ್ಲಿ ಫಲವಂತಿಕೆಯ ಸಂಕೇತವಾಗಿ ತೊಟ್ಟಿಲು ತೂಗಲಿ, ನಿಮ್ಮ ಮನೆ ಬೆಳ್ಳಿಯಂತೆ ಹೊಳೆಯುತ್ತಿರಲಿ, ಒಂದೇ ಬಾರಿಗೆ ಅವಳಿ ಜವಳಿ ಮಕ್ಕಳಾಗಲಿ, ಮಹಾಲಕ್ಷ್ಮಿಯ ದಯೆ ನಿಮ್ಮ ಮೇಲಿರಲಿ ಎಂದು ಮಕ್ಕಳಿಲ್ಲದ ಬಂಜೆತನದ ಸ್ತ್ರೀಯರಿಗೆ ಹಾರೈಸುವ ಹಾಡಾಗಿದೆ. ಇದು ಭೀಮರಾಯ ಕರ್‌ಕರ್‌ಮುಂಡಿ ಇಳಕಲ್ ಇವರು ಭಿಕ್ಷೆಬೇಡುವಾಗ ಹೇಳುವ ಹಾಡಾಗಿದ್ದು ಅವರಿಂದಲೇ ಸಂಗ್ರಹಿಸಿಲಾಗಿದೆ.

ಇಡೀ ಜಾತಿಲನೆ ಬಂಡಜಾತಿಗಾದೆ ನಾ ಜಾತಿ

ಇದಿ ಕುಲಮುಕಾದೆ ಮೊಂಡಿ ಕುಲಮು

ಕಾಡಾದ ಚೆಪ್ಪುದಾಮಂತೆ ಕಾಡಾಟಮು ೨ ಅಕ್ಕುಲ.... ಆ...

ವಿದ್ಯಾ ಬಾಲುಲಾ ಬಾಯನೇಯಮ್ಮ

ನೀಲಾರ್ ಕುಲನಾ ಪಯರುನಾ...।

ಪೂವ್ವಮ್ಮ.....

ಮಧ್ಯಬಾಲುಲತೋ ವಿದ್ಯಾಗುಡ್ಡೆ ಬಾಯಿಪೋಯೇ

ಓಯಮ್ಮೋ.....

ಕಾಪು ದೇವುತೋ ಮೊದಲ್ಯೆಯೆ ಓ ಅಕ್ಕಾ....

ಪೂವಮ್ಮ...

ಶಂಭಾದೇವ ದೇವುಡಿ ದಿನಮು ಮಾಯೆ ಮಾಯಮ್ಮ...

ಇಡೀ ಮನುಕುಲದಲ್ಲಿರುವ ಜಾತಿಗಲ್ಲಿ ಮೊಂಡ ಬಂಡ ಜಾತಿ ನನ್ನದು ಇದು ಒಂದು ಕುಲವಲ್ಲವೇ ಮೊಂಡ ಕುಲ ಬಂಡಕುಲ. ನಮಗೆ ಪೀಡೆಯಾಗಿ ಕಾಡುತ್ತಿದೆ. ಹೀಗೆ ಹಾಡಿನ ಮೂಲಕ ಜನತೆಗೆ ಜಾಗೃತಿ ಮೂಡಿಸುತ್ತಾ ಶಂಭಾದೇವರ ಮೊರೆಹೋಗಬೇಕು ಎಂದು ಭವಿಷ್ಯತ್ತಿನ ಸಂದೇಶವನ್ನು ಸೂಚಿಸುವ ಹಾಡಾಗಿದೆ. ಈ ಹಾಡನ್ನು ನಾಗೇಂದ್ರಪ್ಪ ಗಿಡ್ಡಾಪುರದಲ್ಲಿ(ನಾಯಕನಹಟ್ಟಿ ಸಮೀಪ) ಭಿಕ್ಷೆ ಬೇಡುವಾಗ ಸಂಗ್ರಹಿಸಿ ದಾಖಲಿಸಲಾಗಿದೆ.

ಲಡ

ಲಡ

ಲಡ

ಕುಡುಗೋಲು ಮೊಂಡು,

ಕುರುಪಿ ಮೊಂಡು

ಲೇಡಿದ್ದೇಲೆಡಿ

ನಾವಾಮೊಂಡು

ಜಗಮೊಂಡು

ಲಡ

ಲಡ

ಲಡ

ಕಸುಬದೊಳಗ ಜಗಮೊಂಡು

ದೈವಹಸಬದೊಳಗ ಕಸುಬು

ಕಸುಬದೊಳಗ ನನ್ನ ಕಸುಬೈತಿ ಯಮ್ಮ ತಗೊಂಡು ಬಾತಡ ಆಗತೈತಿ..

ಇದೇ ಹಾಡನ್ನು ಮಹಿಳೆಯರು ಹಾಡುವಾಗ

ಲಡ

ಲಡ

ಲಡ

ಕಸುಬದೊಳಗ ಜಗಮೊಂಡು

ದೈವ ಹಸಬದೊಳಗ ಕಸುಬು

ಕಸುಬದೊಳಗ ನನ್ನ ಕಸುಬೈತಿ ನಾ ನಿನ್ನ ಮಗಳಿದ್ದೀನಿಯಮ್ಮ ತಗೊಂಡು

ಬಾ ತಡ ಆಗುತೈತಿ ಎಂದು ಹೇಳುವರು.

ಜಗತ್ತಿನ ಕಸುಬುಗಳಲ್ಲಿ ನನ್ನದು ಜಗಮೊಂಡು ಕಸುಬು ನಾ ನಿನ್ನ ಮಗ ಅಥವಾ ಮಗಳು ಭಿಕ್ಷೆ ನೀಡಮ್ಮ ಎಂಬ ಅರ್ಥವಿವರಣೆ ಬರುತ್ತದೆ. ಈ ಹಾಡನ್ನು ಅಡಿವೆವ್ವ(ಹೊನ್ನಾರು, ವಿಜಯಪುರ ಜಿಲ್ಲೆ) ಎಂಬ ಮಾಹಿತಿದಾರರಿಂದ ಸಂಗ್ರಹಿಸಿ ದಾಖಲಿಸಲಾಗಿದೆ.

ಚಂದ್ರಪ್ಪ ಎನ್ ಇವರು ತೆಲುಗಿನ ಗೀತೆಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

**ಹರಹರ ಮೊಂಡಿ ಜಂಗಮನೆ**

"ಹರಹರ ಮೊಂಡಿ ಜಂಗಮನೆ

ಏಳು ವರ್ಷದ ಕ್ಷಾಮ ಬರಬಾರದೆ ಬಂದಿದೆಯಯ್ಯ

ಹೊಟ್ಟೆಕೂಳಿಗೆ ಕ್ಷಾಮ ಬಂದಿದೆಯಯ್ಯ

ಹಸಿವು ತಾಳಲಾರದೆ ಪಾತ್ರೆಗಳ ಮಾರಿಕೊಂಡವಯ್ಯ

ಹಸಿವು ತಾಳಲಾರದೆ ತಾಳಿ ಒಡವೆ ಮಾರಿಕೊಂಡವಯ್ಯ

ಹರಹರ ಮೊಂಡಿ ಜಂಗಮನೆ.

ಏಳು ವರ್ಷದ ಕ್ಷಾಮ ಬರಬಾರದೆ ಬಂದಿದೆಯಯ್ಯ

ಯಾವ ಮನೆಯ ಭಿಕ್ಷೆಯು ನಿಂತು ಹೋಯಿತಯ್ಯ

ನಿಮ್ಮ ಮನೆಯ ಭಿಕ್ಷೆಯು ನಿಂತು ಹೋಯಿತಯ್ಯ

ಹಟ್ಟಿಯವರಿಗೆ ಬುದ್ಧಿಹೇಳಲು ಬಂದೆಯಾ

ಹಸಿವು ತಾಳಲಾರದೆ ಹೆಂಡತಿಯ ಮಾರಿಕೊಂಡೆನಯ್ಯ

ಹಸಿವು ತಾಳಲಾರದೆ ಮಕ್ಕಳ ಮಾರಿಕೊಂಡೆನಯ್ಯ

ಹಸಿವು ತಾಳಲಾರದೆ ಗುಡಿಸಲು ಮಾರಿಕೊಂಡೆನಯ್ಯ

ಹಸಿವು ತಾಳಲಾರದೆ ತಿರುದು ತಿಂದೆನಯ್ಯ

ಹರಹರ ಮೊಂಡಿ ಜಂಗಮನೆ/ಹಸಿವು ತಾಳಲಾರದೆ ಮಗನ ಕೊಂದು ತಿಂದೆನೆಯ್ಯ"
(ಚಂದ್ರಪ್ಪ ಎನ್. ಮೊಂಡರ ಸಂಸ್ಕೃತಿ ೧೯೯೩ ಬೆಂಗಳೂರು ಪು.ಸ.೦ ೨೫೧-೫೨)

ಕರ್‌ಕರ್‌ಮುಂಡರು ಬೇಡುವಾಗ ಆ ಕಾಲಗಟ್ಟದಲ್ಲಿ ಸಂಭವಿಸಿದ ಪ್ರಕೃತಿ ವಿಕೋಪ ಅದರಿಂದಾಗಿ ಅವನು ಎದುರಿಸಿದ ಸಮಸ್ಯೆಗಳು ಇತ್ಯಾದಿಗಳನ್ನು ಸಮುದಾಯದ ಮುಂದೆ ತನ್ನ ಅಳಲನ್ನು ಹಾಡಿನ ಮೂಲಕ ತೋಡಿಕೊಳ್ಳುವ ಸಂದರ್ಭವನ್ನು ಈ ಹಾಡು ತಿಳಿಸುತ್ತದೆ ಎನ್ನಬಹುದು.

ಕರ್‌ಕರ್‌ಮುಂಡರ ಮಾತೃಭಾಷೆ ತೆಲುಗು ಆಗಿದೆ. ಇದರ ಜೊತೆಗೆ ಸ್ಥಳೀಯ ಕನ್ನಡ, ಮರಾಠಿ, ಹಿಂದಿ, ಭಾಷೆಗಳನ್ನು ಬಲ್ಲರು. ಮನೆ-ಮನೆಗೆ ಹೋಗಿ ಭಿಕ್ಷೆ ಬೇಡುವಾಗ ಆ ಸ್ಥಳದ ಭಾಷೆಗಳಲ್ಲಿಯೇ ತಮ್ಮ ಸಾಹಿತ್ಯವನ್ನು ತರ್ಜುಮೆ ಮಾಡಿ ಹಾಡು ಹೇಳುವರು. ನಿದರ್ಶನವೆಂಬಂತೆ ಚಿತ್ರದುರ್ಗ, ಕೋಲಾರ, ಬಳ್ಳಾರಿಯ ಮೊಂಡರು ಹಾಡುಗಳನ್ನು ತೆಲುಗಿನಲ್ಲಿಯೇ ಹೇಳುವರು. ಕಾರಣ ಸ್ಥಳೀಯವಾಗಿ ತೆಲುಗು ಪ್ರಾತಿನಿಧ್ಯ ಪಡೆಯುವುದಾಗಿದೆ. ತಮ್ಮ ಸಮುದಾಯದವರೊಂದಿಗೆ ತೆಲುಗು ಭಾಷೆ, ಇತರರೊಂದಿಗೆ ಅವರ ಭಾಷೆಯಲ್ಲಿ ಮಾತನಾಡುವರು. ತಮ್ಮ ಎಲ್ಲಾ ಆಚಾರ ವಿಚಾರಗಳ ಹೆಸರುಗಳು, ಬೆಡಗುಗಳು ತೆಲುಗು ಭಾಷೆಯಲ್ಲಿವೆ. ಅದರಂತೆ ಇವರ ಗಾದೆಗಳು ತೆಲುಗು ಭಾಷೆಯಲ್ಲಿ ಬಳಕೆಯಾಗುತ್ತದೆ.

ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬ ಸಾರ್ವತ್ರಿಕ ನುಡಿಯಂತೆ ಇವರು ಸಹ ಗಾದೆಗಳನ್ನು ನಂಬುವರು. ಕೆಲವೊಂದು ಗಾದೆಗಳು ಈ ಕೆಳಗಿನಂತೆ ಇರುತ್ತವೆ.

"ಮೊಂಡಿಕಿ ಸಿಗ್ಗುಲೇದು ಮೊರಡುಕುಗಾಲಿ ಲೇದು
ಮೊಂಡರಿಗೆ ನಾಚಿಕೆಯಿಲ್ಲ ಮರಳಿಗೆ ಗಾಳಿ ಇಲ್ಲ.
ಮೊಂಡಿವಾಡು ರಾಜುಕಂಟೆ ಬಲವಂತುಡು
ಮೊಂಡನು ರಾಜನಿಗಿಂತ ಬಲವಂತನು.
ಮೊಂಡಕಿ ಬಂಡಕಿ ನೂರೇಂಡ್ಲಾಯಸ್ಸು
ಮೊಂಡನಿಗೂ ಬಂಡೆಗೂ ನೂರು ವರ್ಷ ಆಯಸ್ಸು
ಮೊಂಡಿವಾನಿ ಹಿತುಡು ಬಂಡವಾಡು
ಮೊಂಡನಿಗೆ ಹಿತನಾದವನು ಬಂಡೆಯಂತಹವನು
ಮೊಂಡಿ ಗುರುವು ಬಂಡ ಶಿಷ್ಯಡು
ಮೊಂಡಿ ಗುರಿವಿಗೆ ಬಂಡೆಯಂತಹ ಶಿಷ್ಯನು
ಮೊಂಡಿವಾನಿಲಿಕೇಲ ಮುಂಚೇತಿ ಕಡಿಯಾಲು
ಮೊಂಡನಿಗೇಕೆ ಮುಂಗೈ ಕಡಗ
ಏರೂರಿ ಎಲ್ಲಟೋ ಮೊಂಡಿವೆಲಸಿನಟ್ಲು
ಏರೂರು ಎಲ್ಲೆಯಲ್ಲಿ ಮೊಂಡನು ಪ್ರಕಾಶಿಸಿದನಂತೆ
ಮೊಂಡಿಕೆತ್ತಿನಮ್ಮ ಮೊಗಡಿ ಪೆಳ್ಳಿ ಕೆಳ್ಳಿ ಅರ್ಥಗೊಂಡ ಪ್ರಕ್ಕನುಂಡಿ
ಆರ್ಥ ರೂಪಾಯಿ ಚದುವಿಂಚಿಂದಟ.

ಮೊಂಡು ಬಿದ್ದವಳು ಗಂಡನ ಮದುವೆಗೆ ಹೋಗಿ ಅಡ್ಡ ಗೋಡೆಯ ಪಕ್ಕದಿಂದ ಅರ್ಧ ರೂಪಾಯಿ ಓದಿಸಿದಳು.

ಎರುಕಲಮ್ಮ ಏರೂರಿಕಿ ಚುಟ್ಟಮಾ?
ಎರಕಲಮ್ಮ ಏಳೂರಿನ ನೆಂಟಳೆ?
ಏನುಗಲು ಮ್ರಿಂಗು ಎಲ್ಲಮ್ಮಕು ವಿನುಗುಲುವಿಪ್ಪಳ್ಳು
ಆನೆ ತಿನ್ನೊ ಎಲ್ಲಮ್ಮನಿಗೆ ಶವಗಳು ಪಲ್ಯಗಳು
ಎಲ್ಲಮ್ಮ ಬ್ರತುಕು ತೆಲ್ಲವಾರಿತೆ ತೆಲುಸ್ತುಂದಿ
ಎಲ್ಲಮ್ಮನ ಬದುಕು ಬೆಳಕರಿದಾಗ ತಿಳಿಯುತ್ತದೆ." (ಪು.ಸಂ. ೨೦೩-೦೪)

ಈ ರೀತಿಯ ಗಾದೆಗಳು ಕರ್‌ಕರ್‌ಮುಂಡ ಜನಪದ ಸಾಹಿತ್ಯದಲ್ಲಿ ಕಂಡುಬರುವುದನ್ನು ಕಾಣಬಹುದು. ಕರ್‌ಕರ್ ಮುಂಡ ಸಾಮಾಜಿಕ ಬದುಕು ಅಧ್ಯಾಯವು ಅವರ ಕಸುಬು, ಕುಟುಂಬ ವ್ಯವಸ್ಥೆ, ನ್ಯಾಯಪಂಚಾಯ್ತಿ, ಬಂಧುತ್ವ , ಆಹಾರ, ನೆಲೆ, ವಿಶೇಷವೆನ್ನಬಹುದಾದ ಮೊಂಡದೀಕ್ಷೆ, ಆರಾದ್ಯದೈವಗಳ ಕುರಿತು ಬೆಳಕು ಚೆಲ್ಲುವ ಮೂಲಕ ಅವರ ಸಾಮಾಜಿಕ ಬದುಕನ್ನು ತಿಳಿಯಲು ಸಹಾಯಕವಾಗಿದೆ.

# ಅಧ್ಯಾಯ ನಾಲ್ಕು

## ಕರ್‌ಕರ್‌ಮುಂಡರ ಜೀವನಾವರ್ತನ ಆಚರಣೆಗಳು

ಮಾನವನ ವಿಕಾಸದ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಸಂಶೋಧನೆಗಳು ನಡೆದಿವೆ ಹಾಗೂ ನಡೆಯುತ್ತಲಿವೆ. ಬಂದಂತಹ ಫಲಿತಗಳು ವಿಭಿನ್ನ. ಮಂಗನಿಂದ ಮಾನವ ಕಲ್ಪನೆಯಲ್ಲಿ ಮಾನವ ಹಲವಾರು ಕಾಲಘಟ್ಟಗಳಲ್ಲಿ ವಿಕಾಸ ಹೊಂದುತ್ತಾ ಸಾಗಿ ಬಂದಿದ್ದಾನೆ. ಈ ವಿಕಾಸನವನ್ನು ಕುರಿತಂತೆ ಕಾರ್ಲ್‌ಮಾರ್ಕ್ಸ್ ೧. ಆಹಾರ ಸಂಗ್ರಹಣೆ ಮತ್ತು ಬೇಟೆ, ೨. ಪುರಾತನ ಕಾಲ, ೩. ಬಂಡವಾಳ(ಫ್ಯೂಡಲ್ ಹಂತ), ೪. ಸಮಾಜವಾದಿ ಹಂತ ಎಂದು ತಿಳಿಸಿದ್ದಾರೆ. ಮಾನವನ ಮೂಲ ಮತ್ತು ಪ್ರಸಾರ (ವಲಸೆಯನ್ನು ಕುರಿತಂತೆ ರೋಮಿಲಾಥಾಪರ್ ಅವರು ಆಫ್ರಿಕಾ ಎಂದು ತಿಳಿಸಿದ್ದರೂ ನಿರಂತರವಾಗಿ ಸಂಶೋಧನೆ ನಡೆಯುತ್ತಿವೆ. ಮಾನವ 'ಹೋಮೋಸೆಫಿಯನ್ಸ್'(ಬೌದ್ಧಿಕ ಮಾನವ) ಆದಾಗ ಅವನ ತಿಳುವಳಿಕೆ, ಗಣ, ಸಮುದಾಯ, ಸಮೂಹ ಸಮಾಜಗಳಾಗಿ ರೂಪಿತವಾಗಿವೆ. ಮಾನವನ ಮೊದಲ ಹಂತದ ತಿಳುವಳಿಕೆ ಉನ್ನತೀಕರಣಗೊಂಡಾಗ ಹುಟ್ಟಿಕೊಂಡಿದ್ದೇ ಆಧ್ಯಾತ್ಮ. ಈ ಅಧ್ಯಾತ್ಮ(ಜ್ಞಾನ) ನಿರಂತರವಾಗಿ ಸಮಾಜದಲ್ಲಿ ಸಂಚರಿಸಲು ಮಾನವ ಕಂಡುಕೊಂಡ ಮಾರ್ಗ, ದೇವರ ಕಲ್ಪನೆ, ಅದು ಪ್ರಕೃತಿ, ಮೂರ್ತಿ, ವ್ಯಕ್ತಿ ಅಗಿರಬಹುದು. ಜ್ಞಾನ ಈ ದೇವರ ಸ್ವರೂಪದಲ್ಲಿ ಈ ಸಮಾಜವನ್ನು ಪ್ರತಿನಿಧಿಸುತ್ತಿರುತ್ತಾರೆ. ಇದನ್ನು ಸಂವಹನಗೊಳಿಸಲು ಕಂಡುಕೊಂಡ ಮಾರ್ಗ ಆಚರಣೆ ಮತ್ತು ಸಂಪ್ರದಾಯಗಳು. ಇವುಗಳನ್ನು ಪ್ರಸ್ತುತ ತಲೆಮಾರಿ ಜನತೆಯ ಮೌಢ್ಯತೆ, ಕಂದಾಚಾರ ಎಂದು ಪರಿಗಣಿಸಿದರೂ ಸೂಕ್ಷ್ಮ ಮತಿಗಳಾಗಿ ಅವಲೋಕಿಸಿದಾಗ ಅದರ ಒಂದಿರುವ ಜ್ಞಾನ ಅಥವಾ ಜಗತ್ತರಿಯದ ಭೂಗತ ಸತ್ಯ ತಿಳಿಯುತ್ತದೆ. ಹೀಗೆ ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಜ್ಞಾನ ಅಥವಾ ಆಧ್ಯಾತ್ಮವನ್ನು ಸ್ಥಳಾಂತರಿಸುವ ಮತ್ತು ಪ್ರವಹಿಸುವಂತೆ ಮಾಧ್ಯಮಗಳಾಗಿ ಆಚರಣೆ ಅಥವಾ ಸಂಪ್ರದಾಯಗಳು ಕಾರ್ಯನಿರ್ವಹಿಸುತ್ತವೆ. ಇಂತಹ ಸಂದರ್ಭದಲ್ಲಿ ಹುಟ್ಟಿಕೊಂಡ ಹಬ್ಬ, ಜಾತ್ರೆ,

ಜೀವನಾವರ್ತಕ ಆಚರಣೆಗಳು ತನ್ನದೇ ಆದ ವಿಧಿ-ನಿಷೇಧಗಳಿಂದ ಸಮುದಾಯದ ಜನರ ಬದುಕನ್ನು ನಿರಂತರ ಪುನರ್ ಅಭಿನಯಗೊಳ್ಳುವಂತೆ ಮಾಡುತ್ತವೆ. ಪುನರ್ ಅಭಿನಯಗೊಳ್ಳುವ ಸಂದರ್ಭದಲ್ಲಿ ಕೂಡಿಕೊಳ್ಳುವ ಮತ್ತು ಹೊರಗೊಳ್ಳುವ ಪ್ರಕ್ರಿಯೆಯನ್ನು ಕಾಣಬಹುದು.

ಮಾನವನ ವಿಕಾಸ ಸಾಗಿದಂತೆ ಬೇಟೆಯಿಂದ ಪಶುಪಾಲಕ ಹಂತಕ್ಕೆ ಕಾಲಿಟ್ಟಾಗ ಸಮುದಾಯಗಳು ತನ್ನದೇ ಆದಂತಹ ಚಹರೆಗಳನ್ನು ಕಂಡುಕೊಳ್ಳಲಾರಂಭಿಸಿದವು. ಈ ಹಂತದಲ್ಲಿ ರೂಪಗೊಂಡ ಗಣಗಳು ಉಳಿವಿಗಾಗಿ ಹೋರಾಟ ಎಂಬಂತೆ ಸ್ವ-ರಕ್ಷಣೆಗಾಗಿ ನಿರ್ಧಿಷ್ಠ ಭೂಪ್ರದೇಶ ಪ್ರತ್ಯೇಕ ಭಾಷೆ, ವಿಶಿಷ್ಟ ಸಂಸ್ಕೃತಿಯನ್ನು ರೂಪಿಸಿಕೊಂಡವು. ಇವುಗಳನ್ನು ರೂಪಿಸಿಕೊಳ್ಳುವಲ್ಲಿ ಸಮುದಾಯಗಳು ಸೌಮ್ಯವೂ ಆಗಿರುತ್ತವೆ. ತನಗರಿವಿಲ್ಲದೇ ತನ್ನೊಳಗಿನ ಫ್ಯೂಡಲ್ ಲಕ್ಷಣಗಳನ್ನು ಬೆಡಗು, ದೇವರು, ಗುಂಪು ಸಂಸ್ಕೃತಿ ಇತ್ಯಾದಿಗಳಲ್ಲಿ ಕಾಣಬಹುದಾಗಿದೆ. ಪ್ರಕೃತಿಯ ಜ್ಞಾನವನ್ನು ಆಚರಣೆ ಸಂಪ್ರದಾಯಗಳ ಮೂಲಕ ನಿರಂತರವಾಗಿ ಮುಂದುವರೆಸಿಕೊಂಡು ಬರುವ ನಿಟ್ಟಿನಲ್ಲಿ ಸಮುದಾಯಗಳು ವಿಭಿನ್ನ ರೀತಿಯ ಮಾರ್ಗಗಳನ್ನು ಕಂಡುಕೊಂಡಿವೆ. ಅವುಗಳು ಸಮುದಾಯದಿಂದ ಸಮುದಾಯಕ್ಕೆ ಸ್ವರೂಪದಲ್ಲಿ ಬದಲಾವಣೆಯನ್ನು ರೂಪಿಸಿಕೊಂಡಿವೆ. ಆ ಹಿನ್ನೆಲೆಯಲ್ಲಿ ಭಾರತ ಬಹು ಸಂಸ್ಕೃತಿಯ ದೇಶವಾಗಿ ರೂಪಿತವಾಗಲು ಕಾರಣವಾಯಿತು. ಇದರಲ್ಲಿ ಅಗ್ರಗಣ್ಯ ಸ್ಥಾನ ಬುಡಕಟ್ಟುಗಳದ್ದಾಗಿದೆ. ಮೂಲ ನಿವಾಸಿಗಳಾಗಿರುವ ಬುಡಕಟ್ಟುಗಳು ಆರ್ಯ, ಪರ್ಶಿಯನ್ನರಂತಹ ವಿದೇಶಿ ದಾಳಿಗಳ ಪರಿಣಾಮವಾಗಿಯೂ ತನ್ನ ಸಾಂಸ್ಕೃತಿಕ ಶ್ರೀಮಂತಿಕೆ ಮತ್ತು ಪಾರಂಪರಿಕ ಜ್ಞಾನವನ್ನು ಇಂದಿಗೂ ಉಳಿಸಿಕೊಂಡು ಬಂದಿವೆ. ಅವುಗಳನ್ನು ನಾವು ಸಂಪ್ರದಾಯ ಮತ್ತು ಆಚರಣೆಗಳಲ್ಲಿ ಕಾಣಬಹುದಾಗಿದೆ.

ಸಂಪ್ರದಾಯ ಮತ್ತು ಆಚರಣೆಗಳು ಸಮಾನ ಅರ್ಥ ಹೊಂದಿದ್ದರೂ ಸಹ ವಿರಳ ಅಂಶಗಳಲ್ಲಿ ವರ್ಗೀಕರಿಸಲ್ಪಡುತ್ತವೆ. ಸಂಪ್ರದಾಯ ಜ್ಞಾನದ ಒಂದು ಗುಚ್ಛವಾಗಿದ್ದು ಅದರಲ್ಲಿಯ ಉಪಭಾಗಗಳು ಆಚರಣೆಗಳಾಗಿವೆ. ಸಂಪ್ರದಾಯ ತಲೆಮಾರಿನಿಂದ ತಲೆಮಾರಿ ವರ್ಗಾವಣೆಯಲ್ಲಿ ಕಟ್ಟು ನಿಟ್ಟಾಗಿದ್ದು, ಆಚರಣೆ ಸಂದರ್ಭಾನುಸಾರ ತನ್ನ ಸ್ವರೂಪದಲ್ಲಿ ಬದಲಾವಣೆ ಹೊಂದುತ್ತದೆ. ಇಂತಹ ಆಚರಣೆಗಳು ಶೀಘ್ರಗತಿಯಲ್ಲಿ ಪರಿವರ್ತನೆಗೊಂಡಾಗ ವ್ಯವಸ್ಥೆಯ(ಸಂಸ್ಕೃತಿಯ) ಭಾಗವಾದ ಸಂಪ್ರದಾಯ ಮಂದಗತಿಯಲ್ಲಿ ಬದಲಾವಣೆ ಹೊಂದುತ್ತದೆ. ಇದನ್ನು ನಾವು ಆರ್ಗಬಾನ್ ಅವರ ಸಾಂಸ್ಕೃತಿಕ ಓಂಬೀಳಿಕೆಯ ಭಾಗವಾಗಿ ಗುರುತಿಸಬಹುದಾಗಿದೆ. ಇಂತಹ ಆಚರಣೆ ಮತ್ತು ಸಂಪ್ರದಾಯಗಳು ಸಂಸ್ಕೃತಿಯ ಪ್ರತೀಕವಾಗಿ ಕಾರ್ಯನಿರತವಾದಾಗ ಸ್ಥಳ ಮತ್ತು ಸಂದರ್ಭದ ಹಿನ್ನೆಲೆಯಲ್ಲಿ ಮತ್ತು ಬಾಹ್ಯ ಮತ್ತು ಆಂತರಿಕ ಒತ್ತಡಗಳಿಂದ

ಪರಿವರ್ತಿತವಾಗುತ್ತವೆ. ಈ ಪರಿವರ್ತನೆ ವ್ಯಕ್ತಿಯ ಅಥವಾ ಸಮುದಾಯದ ಉಪ ಉತ್ಪನ್ನಗಳ ಆಧಾರಿತವಾಗಿ ಬದಲಾವಣೆಯನ್ನು ಹೊಂದುತ್ತವೆ. ಉಪ ಉತ್ಪನ್ನಗಳಿಂದ ಅಧಿಕಾರ, ಅಂತಸ್ತು, ಶಿಕ್ಷಣ, ಸಾಮಾಜಿಕ ಸ್ಥಾನಮಾನ, ಆರ್ಥಿಕತೆ ಇತ್ಯಾದಿ ಅಂಶಗಳು ಆಚರಣೆ ಮತ್ತು ಸಂಪ್ರದಾಯಗಳಲ್ಲಿ ಬದಲಾವಣೆ ತರುತ್ತವೆ.

ಜೊತೆಗೆ ನಂಬಿಕೆ, ನಿಷೇಧಗಳಿಂದ ಕೂಡಿರುವ ಆಚರಣೆ ಮತ್ತು ಸಂಪ್ರದಾಯಗಳು ಸಾಮಾಜಿಕ ಸಂಬಂಧಗಳ ಗಟ್ಟಿತನಕ್ಕೆ ಮತ್ತು ವಿಘಟನೆಗೆ ಕಾರಣವಾಗುತ್ತವೆ. ಸಂಸ್ಕೃತಿಯ ಪ್ರತೀಕವಾಗಿರುವ ಆಚರಣೆ ಮತ್ತು ಸಂಪ್ರದಾಯಗಳು ಸಮುದಾಯಗಳ ಸಾಮಾಜಿಕ ಸಂಚಲನಗಳು ನಿರಂತರವಾದಾಗ ಹುಟ್ಟು, ಋತುಮತಿ, ವಿವಾಹ, ಶವಸಂಸ್ಕಾರ, ಹಬ್ಬ, ಜಾತ್ರೆ ಇತ್ಯಾದಿಗಳಲ್ಲಿ ಸ್ಥಿತ್ಯಂತರಗಳಾಗುತ್ತವೆ. ಈ ಆಚರಣೆ ಮತ್ತು ಸಂಪ್ರದಾಯಗಳು ಸಮುದಾಯದಿಂದ ಸಮುದಾಯಕ್ಕೆ ಭಿನ್ನತೆ ಹೊಂದಿರುವುದರ ಜೊತೆಗೆ ಸಮುದಾಯದ ಒಳಗೆ ಲಿಂಗ, ವಯಸ್ಸು, ಪ್ರದೇಶ, ಋತುಮಾನ ಆಧಾರಿತವಾಗಿ ವರ್ಗೀಕರಣಗೊಂಡು ನಿರಂತರವಾಗಿ ಕಾರ್ಯನಿರತವಾಗಿರುತ್ತವೆ. ಮಾನವನ ವಿಕಾಸದ ಬಂಡವಾಳಶಾಹಿ ಮತ್ತು ಪುರೋಹಿತಶಾಯಿ ಹಂತದಲ್ಲಿ ಬಹುಸಂಸ್ಕೃತಿಯ ಚಿಕ್ಕ ಚಿಕ್ಕ ಸಮುದಾಯಗಳು ತನ್ನ ಸಂಸ್ಕೃತಿಯ (ಪಾರಂಪರಿಕ ಜ್ಞಾನ) ಬಿಂಬಿಕಗಳಾಗಿದ್ದು, ಆಚರಣೆ, ಸಂಪ್ರದಾಯ, ಮೂಢನಂಬಿಕೆಗಳು ಎಂಬ ಕಳಂಕಿತ ಹಣೆ ಪಟ್ಟಿ ಅಡಿಯಲ್ಲಿ ಒಂದು ಕಡೆ ಹೊರಗಿನ ಎಥ್ನೋಸೆಂಟ್ರಿಸಮ್ ಪರಿಕಲ್ಪನೆ, ಮತ್ತೊಂದೆಡೆ ಸಮುದಾಯದ ಒಳಗಡೆ ಜೀನೋಸೆಂಟ್ರಿಸಮ್‌ಗೆ ಒಳಗಾಗಿವೆ. ಅತಂತ್ರ ಸ್ಥಿತಿಯಲ್ಲಿ ಸಂಸ್ಕೃತಿ ಸ್ವಾಂಗೀಕರಣ ಪ್ರಕ್ರಿಯೆಗೆ ಅನೇಕ ಸಮುದಾಯಗಳು ಒಳಗಾಗಿ ಬಹುತೇಕ ಬುಡಕಟ್ಟು ಸಮುದಾಯಗಳು ಇವುಗಳೆಲ್ಲದರ ಮಧ್ಯೆಯು ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಉಳಿಸಿಕೊಂಡು ಮುಂದುವರೆಸುತ್ತಿವೆ. ಇಂತಹ ಸಂಸ್ಕೃತಿ ಅಥವಾ ಪಾರಂಪರಿಕ ಜ್ಞಾನವನ್ನು ಅವರ ಆಚರಣೆ ಮತ್ತು ಸಂಪ್ರದಾಯಗಳಲ್ಲಿ ಕಾಣಬಹುದು. ಅಂತಹ ಸಮುದಾಯಗಳಲ್ಲಿ ಕರ್‌ಕರ್ ಮುಂಡ ಸಮುದಾಯವು ಒಂದಾಗಿದೆ. ಈ ಸಮುದಾಯದ ಸಂಸ್ಕೃತಿಯ ಜೀವನಾವರ್ತಕ ಆಚರಣೆ ಹಬ್ಬ ಹರಿದಿನಗಳಲ್ಲಿ ಹೇಗೆ ಮುಂದುವರೆದು ಉಳಿದುಕೊಂಡು ಬಂದಿವೆ ಎಂದು ತಿಳಿಯುವುದು ಅಗತ್ಯವಾಗಿದೆ.

**ಜೀವನಾವರ್ತಕ ಆಚರಣೆಗಳ ಹಿನ್ನೆಲೆ**

ಭಾರತೀಯ ಸಮಾಜ ಪಾಶಿಮಾತ್ಯ ಸಮಾಜಗಳ ವರ್ಗವ್ಯವಸ್ಥೆಯಂತಿರದೆ ವರ್ಣವ್ಯವಸ್ಥೆಯನ್ನು ಹೊಂದಿತ್ತು. ಅದು ಮುಂದುವರೆದು ಗುಪ್ತರ ಕಾಲಾವಧಿಯಲ್ಲಿ ಜಾತಿ ವ್ಯವಸ್ಥೆಯಾಗಿ ಕಟ್ಟುನಿಟ್ಟಾಯಿತು. ಇಂತಹ ಜಟಿಲ ವ್ಯವಸ್ಥೆಯಾದ ಜಾತಿ

ಮುಚ್ಚಿದ ವ್ಯವಸ್ಥೆಯಾಗಿದೆ. ಭಾರತೀಯ ಸಮಾಜ ಮಹಮ್ಮದೀಯರು ಹಾಗೂ ಹಿಂದೂಗಳ ನಡುವೆ ಅಷ್ಟೇ ಅಲ್ಲ ಕುಲಕಸುಬುಗಳ ನಡುವೆ, ಜಾತಿ–ಜಾತಿಗಳ ನಡುವೆ ವಿಭಜಿತವಾದ ದೇಶ ಎಲ್ಲಾ ಸದಸ್ಯ ಘಟಕಗಳ ನಡುವೆಯೂ ಸಾಮಾನ್ಯವಾಗಿ ಕಂಡುಬರುವ ಪರಸ್ಪರ ತಿರಸ್ಕಾರ ಭಾವನೆ ಮತ್ತು ಸ್ವಭಾವ ಜನ್ಯವಾದ ಪ್ರತ್ಯೇಕತೆಗಳ ಒಟ್ಟು ಪರಿಣಾಮವಾಗಿ ಮೂಡಿಬರುವ ಅನಿರ್ಧಿಷ್ಠ ಅಸಮತೋಲನದ ಚೌಕಟ್ಟಿನ ಆಧಾರದ ಮೇಲೆ ನಿಂತಿರುವ ಸಮಾಜ ಎಂದು ಕಾರ್ಲ್‌ಮಾರ್ಕ್ ಅಭಿಪ್ರಾಯ ಪಟ್ಟಿದ್ದಾರೆ. ಇದು ಭಾರತೀಯ ಸಮಾಜದಲ್ಲಿನ ಶ್ರೀಶರಣರ ಶಿಷ್ಟ–ಪರಿಶಿಷ್ಟರ ಕಲ್ಪನೆಯನ್ನು ಬಿಂಬಿಸುತ್ತದೆ. ಇಂತಹ ಜಾತಿವ್ಯವಸ್ಥೆಯ ಕಪಿಮುಷ್ಠಿಯಲ್ಲಿರುವ ಭಾರತೀಯ ಸಮಾಜ ತನ್ನೊಳಗಿನ ಸಾಂಸ್ಕೃತಿಕ ವಿಶೇಷಗಳಿಂದ ಐಕ್ಯಗೊಂಡು ವಿಶಿಷ್ಠವೆನಿಸಿದೆ.

ಸಮಾಜ ಯಾವುದೇ ಇರಲಿ ತನ್ನೊಳಗಿನ ಸದಸ್ಯರಿಗೆ ಹುಟ್ಟಿನಿಂದ ಸಾಯುವವರೆಗೆ ವಿವಿಧ ಹಂತಗಳಲ್ಲಿ ಕ್ರಿಯಾವಿಧಿಗಳ ಮೂಲಕ ಸಾಮಾಜಿಕ ಸ್ಥಾನಮಾನ ನೀಡುತ್ತದೆ. ಅವುಗಳನ್ನು ಜೀವನಾವರ್ತಕ ಆಚರಣೆಗಳು ಎಂದು ಕರೆಯಲಾಗುತ್ತದೆ. ಪ್ರಪಂಚದ ಬಹುತೇಕ ಎಲ್ಲಾ ಪ್ರದೇಶದ ಜಾತಿ ಜನಾಂಗಗಳಲ್ಲಿ ವ್ಯಕ್ತಿಯು ಹುಟ್ಟಿದಂದಿನಿಂದ ತೊಡಗಿ ಮರಣ ಹೊಂದುವವರೆಗೆ ಬದುಕಿನ ಬೇರೆ ಬೇರೆ ಹಂತಗಳಲ್ಲಿ ರೂಢಿಗತವಾಗಿ ಆಚರಿಸಲ್ಪಡುವ ವಿಧಿ ವಿಧಾನಗಳನ್ನು ಜೀವನಾವರ್ತನ ಆಚರಣೆಗಳು ಎನ್ನಬಹುದು.

ಸಮಾಜದಲ್ಲಿ ಒಬ್ಬ ಸದಸ್ಯನು ಒಂದು ಕಣವಿದ್ದಂತೆ. ಆ ಕಣಕ್ಕೆ ಒಂದು ಜೀವನ ಇರುತ್ತದೆ. ಇದನ್ನು ಅಂತ್ಯದವರೆಗೂ ನಿರಂತರವಾಗಿ ನೆರಳಿನ ರೂಪದಲ್ಲಿ ಆವರಿಸಿಕೊಂಡು ಹಿಂಬಾಲಿಸುವ ಆಚರಣೆಗಳು ಸಮಾಜದಿಂದ ಪರಂಪರಾಗತವಾಗಿ ಬಂದಂತಹವುಗಳು ಜೀವನಾವರ್ತಕ ಆಚರಣೆಗಳಾಗಿರುತ್ತವೆ. ತಾಯಿಯ ಹೊಟ್ಟೆಯಲ್ಲಿರುವ ಮಾಂಸದ ಮುದ್ದೆಯಂತಿರುವ ಜೀವ(ಪಿಂಡ) ಮಾನವನ ಆಕಾರ ಪಡೆದು ಜನಿಸಿದಾಗ ಲಿಂಗಾಧಾರಿತ ವಿಂಗಡಣೆಯ ಆಧಾರದ ಮೇಲೆ ಬಾಣಂತಿತನ(ಹುಟ್ಟು) ಋತುಮತಿ, ವಿವಾಹ, ಸಾವು, ಎಂಬ ಹಂತಗಳಲ್ಲಿ ಸಾಮಾಜೀಕರಣಗೊಂಡು ಸಮಾಜದ ಕೊಂಡಿಯನ್ನು ಕಳಚಿಕೊಳ್ಳುವವರೆಗಿನ ಆಚರಣೆಗಳು ವ್ಯಕ್ತಿಯ ಜೀವನಾವರ್ತಕ ಆಚರಣೆಗಳಾಗಿವೆ. ಈ ಜೀವನಾವರ್ತಕ ಆಚರಣೆಗಳು ಸಮುದಾಯ, ಧರ್ಮ, ಲಿಂಗಾಧಾರಿತವಾಗಿ ಸ್ವರೂಪದಲ್ಲಿ ಬದಲಾವಣೆ ಹೊಂದುತ್ತವೆ.

ಮಾನವ ಇತರ ಪ್ರಾಣಿಗಳಿಗಿಂತ ಭಿನ್ನವಾಗಿದ್ದು, ತನ್ನ ಜೀವನಾವರ್ತನೆಯಲ್ಲಿ ಕೆಲವೊಂದು ಮಾನ್ಯತೆಗಳನ್ನು ಸಮಾಜ ನೀಡುತ್ತದೆ. ಅವುಗಳೇ ಜೀವನಾವರ್ತಕ ಆಚರಣೆಗಳು ಎಂದು ಕರೆಯಬಹುದಾಗಿದೆ. ಪ್ರತಿ ಸಮುದಾಯದಲ್ಲಿಯೂ ಮಡಿ–

ಮೈಲಿಗೆಯು ಮಾನವನ ಜೀವನಾವರ್ತಕ ಆಚರಣೆಗಳೊಂದಿಗೆ ಬೆಸೆದುಕೊಂಡಿವೆ. ಮಡಿ ಮೈಲಿಗೆ ಮೇಲ್ನೋಟಕ್ಕೆ ಒಂದೇ ಎನಿಸಿದರೂ ಮಾನವನ ಸಂತೋಷದ ಸಂದರ್ಭಗಳಾದ ಹುಟ್ಟು, ಋತುಮತಿ, ಸೂತಕಗಳನ್ನು ಮೈಲಿಗೆ ಎಂದು; ಮರಣ ಸಂದರ್ಭವನ್ನು ದುಃಖದ ಹಿನ್ನೆಲೆಯಲ್ಲಿ ಮಡಿ ಎಂದು ವರ್ಗೀಕರಿಸಲಾಗಿದೆ. ಇಂತಹ ಮಡಿ–ಮೈಲಿಗೆಯ ಆಚರಣೆಯನ್ನು ಪ್ರತಿ ಸಮುದಾಯದ ಜೀವನಾವರ್ತಕ ಆಚರಣೆಗಳಲ್ಲಿ ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಇಂತಹ ಜೀವನಾವರ್ತಕ ಆಚರಣೆಗಳು ಕರ್‌ಕರ್ ಮುಂಡ ಸಮುದಾಯದಲ್ಲಿ ಹೇಗೆ ಸಾಂಸ್ಕೃತಿಕ ಅನನ್ಯತೆಯಿಂದ ಕೂಡಿವೆ ಎಂಬುದನ್ನು ತಿಳಿಯುವುದು ಪ್ರಮುಖವೆನಿಸುತ್ತದೆ.

**ಜನನ ಸಂಬಂಧಿ ಆಚರಣೆಗಳು**

ಮಾನವನ ಜೀವನವನ್ನು ಹುಟ್ಟು, ಹರೆಯ, ಮರಣ ಎಂಬ ಮೂರು ಆಯಾಮಗಳಿಂದ ನೋಡಿದಾಗ, ಹುಟ್ಟು ಮೊದಲನೆ ಸ್ಥಾನ ಪಡೆಯುತ್ತದೆ. ಜನನ ಸಮಾಜಕ್ಕೆ ನೂತನ ಸದಸ್ಯನನ್ನು ನೊಂದಾಯಿಸುತ್ತದೆ. ಇಂತಹ ಜನನ ಸಂದರ್ಭದಲ್ಲಿ ಗರ್ಭಧಾರಣೆಯಿಂದ ಮಾಂಸದ ಮುದ್ದೆಯಾಗಿರುವ ಜೀವ ಮಾನವನ ರೂಪ ಪಡೆದು ಜನ್ಮತಾಳುತ್ತದೆ. ಆ ಮೂಲಕ ಗರ್ಭದ ಸಂಕೋಲೆಯಿಂದ ಆಹಾರ, ಗಾಳಿ, ನೀರನ್ನು ಪರೋಕ್ಷವಾಗಿ ತಾಯಿಯ ಮೂಲಕ ಪಡೆಯುತ್ತಿರುತ್ತದೆ. ಗರ್ಭದಿಂದ ಹೊರಬಂದ ತರುವಾಯ ಪ್ರತ್ಯಕ್ಷವಾಗಿ ಮತ್ತು ಪ್ರಕೃತಿ ಸಹಜವಾಗಿ ಪಡೆಯುತ್ತದೆ. ಹೆರಿಗೆಯಾದ ನಂತರ ಮಗುವನ್ನು ಸಾಮಾಜೀಕರಣಗೊಳಿಸುವ ನಿಟ್ಟಿನಲ್ಲಿ ಆಚರಣೆ ಮತ್ತು ಸಂಪ್ರದಾಯಗಳು ಮಹತ್ವದ ಪಾತ್ರವಹಿಸುತ್ತವೆ. ಇವು ಸಹ ಸಮಾಜದ ಒಳಗಡೆ ಸಮುದಾಯದಿಂದ ಸಮುದಾಯಕ್ಕೆ ಭಿನ್ನತೆಯಿಂದ ಕೂಡಿರುತ್ತವೆ. ಜನನ ಸಂದರ್ಭದ ಆಚರಣೆಗಳನ್ನು ಮುಖ್ಯವಾಗಿ ತಾಯಿ(ಬಾಣಂತಿ) ಮಗುವಿಗೆ ಸಂಬಂಧಿಸಿದ ಆಚರಣೆಗಳೆಂದು ವರ್ಗೀಕರಣ ಮಾಡಬಹುದಾಗಿದೆ. ಇಂತಹ ಆಚರಣೆಗಳು ತಾಯಿ ಮಗುವಿಗೆ ಅಲ್ಲದೆ ಕುಲ, ಬೆಡಗುಗಳನ್ನು ಆವರಿಸಿಕೊಂಡು ನಡೆಸಲ್ಪಡುತ್ತವೆ. ಈ ರೀತಿಯಾಗಿ ಮಗುವನ್ನು ಸಾಮಾಜೀಕರಣಗೊಳಿಸುವ ಮತ್ತು ತಾಯಿಯ ಫಲವಂತಿಕೆಯನ್ನು ಪ್ರತಿನಿಧಿಸುತ್ತಾ ಕುಲದ ಹೊಲಿ ಅಥವಾ ಸೂತಕವನ್ನು ಈ ಜನನ ಸಂಬಂಧಿ ಆಚರಣೆಗಳಿಂದ ತಿಳಿಯಬಹುದಾಗಿರುತ್ತದೆ.

ಸಾಂಸ್ಕೃತಿಕ ವೈವಿಧ್ಯತೆ ಮತ್ತು ಸಾಮಾಜಿಕ ಸ್ತರವಿನ್ಯಾಸದಿಂದಾಗಿ ಆಚರಣೆಗಳು ತಲೆಮಾರಿನಿಂದ ತಲೆಮಾರಿಗೆ, ಸಮುದಾಯದಿಂದ ಸಮುದಾಯಕ್ಕೆ ಭಿನ್ನತೆಯನ್ನು ಪಡೆದಿರುತ್ತವೆ. ಅದರಂತೆ ದೇಶದ ಮೂಲ ಸಂಸ್ಕೃತಿಯ ಹಕ್ಕುದಾರರು ಎಂದು

ತಿಳಿಸುವ ಬುಡಕಟ್ಟುಗಳು. ಪಾರಂಪರಿಕ ಆಚರಣೆಗಳನ್ನು ಮುಂದುವರೆಸಿಕೊಂಡು ಬಂದಿರುವುದು ಗಮನಾರ್ಹ. ಇಂತಹ ವಿಶೇಷ ಆಚರಣೆಗಳಿಗೆ ಕರ್‌ಕರ್‌ಮುಂಡ ಸಮುದಾಯ ಹೊರತಾಗಿಲ್ಲ.

ಕರ್‌ಕರ್ ಮುಂಡ ಸಮುದಾಯದಲ್ಲಿ ವಿವಾಹದ ನಂತರ ಚೊಚ್ಚಲ ಹೆರಿಗೆಗೆಂದು ಗರ್ಭವತಿಯಾದ ಸ್ತ್ರೀಯನ್ನು ಗರ್ಭಧರಿಸಿದ ೮-೯ ತಿಂಗಳಲ್ಲಿ ಕರೆತರುವರು. ತವರು ಮನೆ ಹೆರಿಗೆ ಮಾಡಿಸಲು ಶಕ್ತವಿಲ್ಲದಿದ್ದಾಗ ಕೆಲವೊಂದು ಸಮಯದಲ್ಲಿ ಗಂಡನ ಮನೆಯಲ್ಲಿ ಚೊಚ್ಚಲ ಪ್ರಸೂತಿಕಾರ್ಯ ನಡೆಸುವರು. ಇವರ ಪೂರ್ವಿಕರು ಅಲೆಮಾರಿಗಳಾಗಿ ಊರೂರು ಅಲೆಯುತ್ತಾ ಜೀವನ ಕಳೆಯುವ ಪರಿಸ್ಥಿತಿಯಲ್ಲಿ ಊರ ಹೊರಗೆ ಒಂದು ಡೇರೆ (ಗುಡಾರ) ನಿರ್ಮಿಸಿಕೊಳ್ಳುತ್ತಿದ್ದರು. ಇವರಲ್ಲಿ ಮಹಿಳೆಯರ ಧೈರ್ಯವನ್ನು ಶ್ಲಾಘಿಸಲೇಬೇಕಾಗುತ್ತದೆ. ಯಾವುದೇ ಆಸ್ಪತ್ರೆ ಸೌಲಭ್ಯ ಇಲ್ಲದೆ ಮತ್ತು ಸೂಲಗಿತ್ತಿಯ ಸಹಾಯವಿಲ್ಲದೆ ತಾವೇ ಹೆರಿಗೆ ಮಾಡಿಕೊಳ್ಳುತ್ತಿದ್ದರು. ಹೆರಿಗೆ ಸಮಯದಲ್ಲಿ ಮನೆ ದೇವರೆ ಕಾಪಾಡಬೇಕೆಂದು ಅಗೋಚರಶಕ್ತಿಯನ್ನು ನೆಚ್ಚಿಕೊಂಡು ಹರಕೆ ಹೊತ್ತುಕೊಳ್ಳುತ್ತಾ ಅದು ನಮ್ಮನ್ನು ಕಾಪಾಡುತ್ತದೆ ಎಂಬ ದೃಢವಾದ ನಂಬಿಕೆ ಇವರದಾಗಿತ್ತು. ಇದು ತಾಯಿ ಮತ್ತು ಮಗುವಿಗೆ ಗಂಡಾಂತರ ಕಾಲವದು. ಎಷ್ಟೋ ಸಂದರ್ಭದಲ್ಲಿ ತಾಯಿ, ಮಗು, ಮರಣ ಹೊಂದಿ ಸಂದರ್ಭಗಳಿವೆ. ನಂತರ ೩-೫ದಿನಗಳಲ್ಲಿ ಹೆಸರಿಡಲಾಗುತ್ತಿತ್ತು.

ಅಲೆಮಾರಿತನ ಕ್ರಮೇಣ ಮರೆಯಾಗಿ ನೆಲೆ ನಿಲ್ಲುವಂತಾಗಬೇಕಾಯಿತು. ಗರ್ಭಿಣಿಗೆ ಹೆರಿಗೆ ನೋವು ಕಾಣಿಸಿಕೊಂಡಾಗ ತಮ್ಮದೇ ಸಮುದಾಯದ ಇಬ್ಬರು ಸೂಲಗಿತ್ತಿಯವರನ್ನು ಕರೆತಂದು ಮನೆಯ ಹೊರಗಡೆ ಪ್ರತ್ಯೇಕ ಗುಡಿಸಲಿನಲ್ಲಿ ಹೆರಿಗೆ ಮಾಡಿಸುವರು. ಕೆಲವೊಂದು ಸಮಯದಲ್ಲಿ ಮನೆಯ ಒಳಗಡೆ ಹೆರಿಗೆ ಮಾಡಿಸುವರು. ಚೊಚ್ಚಲ ಹೆರಿಗೆ ತಡವಾದರೆ ಬಸರಿಯ ಬಯಕೆ ಇನ್ನೂ ಇಂಗಿಲ್ಲವೆಂಬ ನಂಬಿಕೆ ಇವರಲ್ಲಿ ಇರುವುದರಿಂದ ಆದಷ್ಟು ಅವಳ ಬಯಕೆಗಳನ್ನು ಕಷ್ಟವಾದರೂ ತೀರಿಸುವ ಪರಿಪಾಠ ಇವರಲ್ಲಿದೆ. ಸೂಲಗಿತ್ತಿಯರು ತಾಯಿ ಮತ್ತು ಮಗುವಿನ ಹಣೆ ಬರಹ ಬರೆಯುವವರು ಎಂದು, ಅವರನ್ನು ದೇವರು ಸ್ವರೂಪದಂತೆ ಕಾಣುವರು.

ಮಗು ತಾಯಿಯ ಗರ್ಭದಿಂದ ಹೊರಬಂದ ನಂತರ ಕಾಲುಗಳನ್ನು ಹಿಡಿದು ತಲೆಕೆಳಗೆ ಮಾಡಿ ಮಗುವಿನ ಬೆನ್ನಿಗೆ ಸಣ್ಣಗೆ ಹೊಡೆಯುವರು. ಆಗ ಮಗು ಕಿರುಚುತ್ತದೆ. ಇದಕ್ಕಿಂತ ಮುಂಚಿತವಾಗಿ ಹೆರಿಗೆಯ ದಿನಗಳು ಸಮೀಪಿಸಿದಂತೆ ಬೇವಿನ ಅಥವಾ ಲಕ್ಕಲಿ ಗಿಡದ ರೆಂಬೆಯೊಂದನ್ನು ದೇವರ ಸಂಕೇತವೆಂದು ಮನೆ ಅಥವಾ ಗುಡಿಸಲಿನಲ್ಲಿ ತಪ್ಪದೆ ಇರಿಸುವರು. ಹೆರಿಗೆಗೆ ಬೇಕಾದ ಹರಳೆಣ್ಣೆ, ಮೊರ, ಪೊರಕೆ, ಹಳದಿಯ

ಚಿಂದಿಬಟ್ಟೆ, ಕತ್ತಿ, ಸೂಜಿ ಮೊದಲಾದ ಸಾಮಗ್ರಿಗಳನ್ನು ಸಿದ್ಧವಾಗಿಟ್ಟುಕೊಂಡಿರುತ್ತಾರೆ. ಹೆರಿಗೆ ನೋವು ಕಾಣಿಸಿದ ತಕ್ಷಣ ಹರಳೆಣ್ಣೆಯನ್ನು ಉಗುರು ಬೆಚ್ಚಗೆ ದೀಪದ ಶಾಖದಿಂದ ಕಾಯಿಸಿ ಕಿಬ್ಬೊಟ್ಟೆಗೆ ಮುಖ್ಯವಾಗಿ ಮರ್ಮಸ್ಥಾನಕ್ಕೆ ಸವರುವರು. ಹೊಟ್ಟೆ ಮತ್ತು ಬೆನ್ನುಗಳಿಗೆ ಎಣ್ಣೆ ಹಚ್ಚಿ ಮೈಯನ್ನು ಮೃದುಗೊಳಿಸಲು ತೀಡುವರು. ಇದನ್ನು ಸುಳು ಮಾಡುವುದು ಎನ್ನುವರು. ಸರಿಯಾಗಿ ಸುಳುವಾಗದೆ ಹೆರಿಗೆ ತ್ರಾಸದಾಯಕವಾದರೆ ಸೂಲಗಿತ್ತಿ ಹರಳೆಣ್ಣೆಯನ್ನು ತನ್ನ ಎರಡು ಕೈಗಳಿಗೆ ಹಚ್ಚಿಕೊಂಡು ಹೊರಬರುತ್ತಿರುವ ಮಗುವಿನ ತಲೆ ಅಥವಾ ಕಾಲುಗಳನ್ನು ಮೃಧುವಾಗಿ ಹಿಡಿದು ಎಳೆಯವಳು. ಪ್ರಸ್ತುತ ಸಂದರ್ಭದ ಆಸ್ಪತ್ರೆಯ ಹೆರಿಗೆಗಳಿಗೆ ಹೋಲಿಸಿದರೆ ಆರ್ಥಿಕವಾಗಿ ಶಕ್ತವಾಗಿಲ್ಲದ ಕೆಳವರ್ಗದ ಜನರ ಹೆರಿಗೆಗಳು ಇಷ್ಟು ಸರಳವೇ ಎಂದು ಆಶ್ಚರ್ಯಪಡಬೇಕಾಗಿದೆ. ಹೆರಿಗೆ ಬಹಳ ತಡವಾದಾಗ ಸೂಲಗಿತ್ತಿ ಗರ್ಭಕ್ಕೆ ಕೈ ಹಾಕಿ ಮಗುವನ್ನು ಹೊರತರುವ ಸಂದರ್ಭಗಳುಂಟು. ಇದಕ್ಕೆ ಪೂರ್ವದಲ್ಲಿ ಬಿಸಿ ನೀರಾಗಲಿ, ಕಾಫಿಯಾಗಲಿ ಕುಡಿಸಿ ಹೊಟ್ಟೆಯಲ್ಲಿ ಬಿಸಿ ದ್ರವಸೇರಿಸಿ ಹೆರಿಗೆ ಸುಲಭವಾಗುವಂತೆ ಮುಂಜಾಗ್ರತ ಕ್ರಮ ಕೈಗೊಳ್ಳುವರು. ಹೆರಿಗೆಯ ಸಂದರ್ಭದಲ್ಲಿ ಗರ್ಭವತಿಗೆ ನೋವನ್ನು ತಡೆದುಕೊಳ್ಳಲು ಹೆಂಡ, ಸರಾಯಿ ಕುಡಿಸುವರು. ದೂಲಕ್ಕೆ ಒಂದು ಹಗ್ಗ ಕಟ್ಟಿ ತುದಿಯನ್ನು ಬಸುರಿಯ ಕೈಗೆ ಕೊಟ್ಟು ನಿಲ್ಲುವಂತೆ ಸೂಚಿಸಲಾಗುತ್ತದೆ. ದೂಲಕ್ಕೆ ಹಗ್ಗವನ್ನಿಡಿದು ಓಡಾಡುವುದರಿಂದ ಹೆರಿಗೆ ಸುಲಭವಾಗಿ ಆಗುತ್ತದೆ ಎಂಬುದು ಸೂಲಗಿತ್ತಿಯ ನಂಬಿಕೆ. ಹೆರಿಗೆ ಸುಸೂತ್ರವಾಗಿ ಆಯಿತೆಂದರೆ ತಾಯಿ ಮೊದಲು ಗಂಡಾಂತರದಿಂದ ಪಾರಾದಳು ಎಂದು ಸೂಲಗಿತ್ತಿಯ ನಿಟ್ಟುಸಿರು ಬಿಡುವಳು. ತಾಯಿ ನೋವಿನಿಂದ ನರಳಾಡುತ್ತಿರುವಾಗ ಕತ್ತಿ ಅಥವಾ ಕುಡುಗೋಲಿನಿಂದ ಕರುಳ ಬಳ್ಳಿಯನ್ನು ಕತ್ತರಿಸಿ ಮಗುವನ್ನು ಬೇರ್ಪಡಿಸುವಳು. ಈ ಕರುಳ ಬಳ್ಳಿ ಕತ್ತರಿಸುವ ಕಾರ್ಯವನ್ನು ಸೂಲಗಿತ್ತಿ ಬಹಳ ಜಾಗರೂಕತೆಯಿಂದ ನಿರ್ವಹಿಸಬೇಕಾಗುತ್ತದೆ. ಸ್ವಲ್ಪ ಅಜಾಗರೂಕತೆ ಆದರೂ ಮಗುವಿನ ಜೀವಕ್ಕೆ ಕುತ್ತು ಬರುತ್ತದೆ. ಸುಮಾರು ೪–೫ ಅಂಗುಲದಷ್ಟು ಕರುಳನ್ನು ಮಗುವಿನ ಕಡೆ ಉಳಿಸಿ ತಾಯಿ ಕರುಳಿನ್ನು ಭದ್ರವಾಗಿ ಹಿಡಿದುಕೊಂಡು ರಕ್ತಸ್ರಾವ ಆಗದಂತೆ ಕತ್ತರಿಸಲಾಗುತ್ತದೆ. ಕತ್ತರಿಸಲ್ಪಟ್ಟ ಕರುಳಿನ ತುದಿಗಳನ್ನು ಹೊಂಗೆ ಎಣ್ಣೆಯಿಂದ ಸುಟ್ಟು, ಸುಟ್ಟ ಬೂದಿಯನ್ನು ಕರುಳಿಗೆ ನಂಜಾಗಬಾರದೆಂದು ಹಚ್ಚುವರು. ಮಗುವಿಗೆ ೪–೫ ಅಂಗುಲದ ಕರುಳು ೫–೬ ದಿನಗಳಲ್ಲಿ ಹೊಕ್ಕಳಿನಿಂದ ಕಳಚಿಕೊಳ್ಳುತ್ತದೆ. ಅದನ್ನು ಬಟ್ಟೆಯಲ್ಲಿ ಕಟ್ಟಿ ಸೂತಕ ತೀರುವವರೆಗೆ ತೊಟ್ಟಿಲಿಗೆ ಕಟ್ಟುವರು. ಮಗುವಿಗೆ ಯಾವುದೇ ಪೀಡೆ ಪಿಶಾಚಿಗಳ

ನೆರಳು ಬೀಳಬಾರದು ಎಂದು ಈ ರೀತಿ ಮಾಡುವರು. ಹೀಗೆ ಜನ್ಮ ಪಡೆದ ಮಗುವನ್ನು ಉಗುರು ಬೆಚ್ಚಗಿನ ಬಿಸಿ ನೀರಿನಲ್ಲಿ ತೊಳೆದು ಹಳೆಯ ಮೊರದಲ್ಲಿ ಚಿಂದಿ ಬಟ್ಟೆಗಳ ಮೇಲೆ ಹಾಕುವರು.

ಹೊಕ್ಕಳದ ಎರಡೂ ಬದಿಗೆ ಸೂಜಿ ಅಥವಾ ಸಣ್ಣ ಸಲಾಕೆಯಿಂದ ಚೌಕಾಕಾರವಾಗಿ ಬರೆ ಹಾಕುವರು. ಇದು ಮಗುವಿಗೆ ದಡಾರ, ಕಾಮಾಲೆ, ವಾಯುಸಂಬಂಧಿ ರೋಗಗಳು ಬರದಂತೆ ತಡೆಯುವ ಜ್ಞಾನವಾಗಿದೆ.

ಹೆರಿಗೆ ನೋವಿನಿಂದ ಬಳಲಿದ ತಾಯಿಗೆ ಆ ನೋವನ್ನು ತಡೆದುಕೊಳ್ಳಲು ಸರಾಯಿ, ಬ್ರಾಂದಿ ಕುಡಿಸುವರು. ಗರ್ಭಕೋಶದಿಂದ ಕಸ (ಮಾಸ) ಹೊರಬಂದಾಗ ಅದನ್ನು ಒಂದು ಹೊಸ ಕುಂಭದಲ್ಲಿ ಹಾಕುವರು. ಆ ಕುಂಭದಲ್ಲಿ ಸ್ವಲ್ಪ ಜೋಳದ ಕಾಳು ಹಾಕಿ ಬಚ್ಚಲು ಮನೆ ಪಕ್ಕದಲ್ಲಿ ಗುಂಡಿ ತೋಡಿ ಮುಚ್ಚಿ, ಅದರ ಮೇಲೆ ಒಂದು ಕಲ್ಲು ಚಪ್ಪಡಿ ಹೇರುವರು. ಹೆರಿಗೆಯಾಗಿ ಮೂರು ದಿನದ ನಂತರ ಬಾಣಂತಿಗೆ ನೀರು ಹಾಕಿ ಶುಚಿಗೊಳಿಸುವರು.

ಹೆರಿಗೆ ಸಮಯದಲ್ಲಿ ಹೆಚ್ಚು ರಕ್ತಸ್ರಾವದಿಂದ ಬಳಲಿದ ಬಾಣಂತಿಯ ಶಕ್ತಿ ವರ್ಧಕವಾಗಲು ಉತ್ತುತ್ತಿ, ಒಣಕೊಬ್ಬರಿ, ಒಣದ್ರಾಕ್ಷಿ, ಗೋಡಂಬಿ ಇತ್ಯಾದಿಗಳಿಂದ ತಯಾರಿಸಿದ ಪದಾರ್ಥಗಳನ್ನು ಹೆಚ್ಚಾಗಿ ನೀಡುವರು. ಜೊತೆಗೆ ಭಜ್ಜಿಬೇರು ಕಟ್ಟುಮಾಡಿ ದಾರದಲ್ಲಿ ಪೋಣಿಸಿ ತಾಯಿ ಮತ್ತು ಮಗುವಿನ ಕೊರಳಿಗೆ ಅಥವಾ ಕೈಗೆ ಕಟ್ಟುವರು. ಮೂರು ದಿನಗಳ ವರೆಗೆ ಮಗುವಿಗೆ ಶ್ಯಾವೆ ಎಣ್ಣೆ ಕುಡಿಸುವ ಶಾಸ್ತ್ರವನ್ನು ಮಾಡುವರು. ಇದನ್ನು ಸೋದರಮಾವ/ಅತ್ತೆಯುವರು ಕುಡಿಸಬೇಕು. ಅವರು ಇಲ್ಲದಿದ್ದಾಗ ಬುದ್ಧಿವಂತರೆನಿಸಿಕೊಂಡವರನ್ನು ಹುಡುಕಿ ಶ್ಯಾವೆ ಎಣ್ಣೆಯನ್ನು ಕುಡಿಸುವರು. ಇದರಿಂದ ಮಗು ಚುರುಕಾಗಿ ತುಂಟತನದಿಂದರುತ್ತದೆ ಎಂಬ ನಂಬಿಕೆ ಇವರದ್ದಾಗಿದೆ. ಮೂರು ದಿನಗಳ ನಂತರ ತಾಯಿಯು ಮೊಲೆಹಾಲು ಉಣಿಸುವಳು. ಹಾಲು ಬರದಿದ್ದಾಗ ಮೇಕೆ ಹಸುಗಳ ಹಾಲನ್ನು ಕುಡಿಸುವಳು.

ಹೆರಿಗೆಯಾದ ಮೂರನೆ ದಿನದಲ್ಲಿ ಬಚ್ಚಲು ಪೂಜೆ ಮಾಡುವರು. ಬಚ್ಚಲು ಪಕ್ಕದ ಕುಳಿಯಲ್ಲಿ ಹೂಳಿದ್ದ ಮಾಸದ ಕುಡಿಕೆಗೆ ಪೂಜೆಮಾಡಿ ಕೋಳಿಯನ್ನು ಬಲಿಕೊಡುವರು. ಅದರ ತಲೆ ಮತ್ತು ಕಾಲುಗಳನ್ನು ಕತ್ತರಿಸಿ ಆ ಕುಡಿಕೆಯೊಂದಿಗೆ ಮುಚ್ಚುವರು. ಮುಚ್ಚುವುದಕ್ಕಿಂತ ಮುಂಚಿತವಾಗಿ ಆ ಮಾಸದ ಮಡಿಕೆಗೆ ಮುತ್ತೈದೆಯವರಿಂದ ಪೂಜೆ ನಡೆಯುವಾಗ ಅದರ ಮುಂದೆ ತಾಯಿಯನ್ನು ಕೂರಿಸಿ ತಮ್ಮ ಜಾತಿಯಲ್ಲಿನ ದೈವದವರನ್ನು ಕರೆಸಿ ಪೂಜೆ ಮಾಡಿಸುವರು. ಕೊಯ್ದ ಕೋಳಿಯಿಂದ

ಅಡುಗೆ ಮಾಡಿ ಎಲ್ಲರೂ ಊಟ ಮಾಡುವರು. ಆ ದಿನದಂದು ಹೆರಿಗೆ ಮಾಡಿಸಿದ ಸೂಲಗಿತ್ತಿಗೆ ಎಲೆ ಅಡಿಕೆ, ಕೊಬ್ಬರಿಬಟ್ಲು ಇಟ್ಟು ತಮ್ಮ ಕೈಲಾದಷ್ಟು ಹಣ ಕೊಡುವರು. ಮಗು ಹುಟ್ಟಿದ ಸಂದರ್ಭದಲ್ಲಿ ದೈವದವರನ್ನು ಕರೆದು ಊಟ ಹಾಕುವುದರಿಂದ ಹುಟ್ಟಿದ ಮಗುವಿಗೆ ಮುಂದೆ ಸಾಲ ಸೂಲ ಇನ್ನಿತರೆ ಯಾವುದೇ ತೊಂದರೆಗಳು ಬರುವುದಿಲ್ಲ ಎಂಬ ನಂಬಿಕೆ ಇವರದ್ದಾಗಿದೆ. ಹೀಗೆ ಮೂರು ದಿನದ ಕಾರ್ಯಮಾಡಿ ಮೈಲಿಗೆ ಕಳೆದುಕೊಳ್ಳುವರು.

ಬಾಣಂತಿಗೆ ಮೂರು ದಿನಗಳವರೆಗೆ ಸಪ್ಪೆ ಅನ್ನ, ನೀರುಗಡುಬು(ಗೋದಿಹಿಟ್ಟಿನಿಂದ ತಯಾರಿಸಿದ ಚಪಾತಿಗಳನ್ನು ನಾಲ್ಕು ಭಾಗ ಮಾಡಿ ನೀರಲ್ಲಿ ಕುದಿಸಿ ನಂತರ ಅದಕ್ಕೆ ಬೆಲ್ಲ ಗಾಣದೆಣ್ಣೆ ಅಥವಾ ತುಪ್ಪವನ್ನು ಹಾಕಿ ತಯಾರಿಸಿದ ಆಹಾರ) ಚಕೋರಿ, ಬಾರ್ಲಕ್ಕಿ ಗಂಜಿ, ತಂಬಿಟ್ಟು ನೀಡುವರು. ಬಾಣಂತಿಯು ಕನಿಷ್ಠ ೩ ತಿಂಗಳು ತಣ್ಣೀರು ಕುಡಿಯುವುದಾಗಲಿ ಅಥವಾ ಮುಟ್ಟುವುದಾಗಲಿ ಮಾಡಬಾರದು. ಇದನ್ನು ಬಾಣಂತಿ ಪತ್ತೇವು ಎನ್ನುವರು. ಇವರಿಗೆ ವಾಯುಗಂಟು ನಿಲ್ಲೋವರೆಗೂ ಸರಾಯಿ ಕುಡಿಸುವರು. ದವಾಖಾನೆ ಇಲ್ಲದಿದ್ದರಿಂದ ಆರೋಗ್ಯ ಕಾಪಾಡಿಕೊಳ್ಳಲು ಕರುಳಬಳ್ಳಿ ಕತ್ತರಿಸಿದ ಮೇಲೆ ನಂಜು ಆಗದಿರಲಿ ಮತ್ತು ಹೊಟ್ಟೆಯೊಳಗೆ ವಾಯುಗಂಟು ಸಂಚರಿಸಿದಾಗ ಆಗುವ ನೋವನ್ನು ತಡೆದುಕೊಳ್ಳಲು ಸರಾಯಿ ಕುಡಿಸುವರು. ನಿಶೆಯಲ್ಲಿ ನಿದ್ರೆ ಮಾಡುವಳು ನಿಶೆ ಇಳಿದ ಮೇಲೆ ಮತ್ತೆ ಚಡಪಡಿಸುವಳು ಮತ್ತೆ ಸರಾಯಿ ಕೊಡುವರು ಜೊತೆಗೆ ಅವಳ ಹೊಟ್ಟೆಗೆ ಬಟ್ಟೆಯಿಂದ ಬಿಗಿಯಾಗಿ ಕಟ್ಟಲಾಗಿರುತ್ತದೆ. ಬಾಣಂತಿಗೆ ಸ್ನಾನಕ್ಕೆ ಸಿದ್ಧಪಡಿಸಿದ ಬಿಸಿ ನೀರಿನಲ್ಲಿ ಲಕ್ಕಲಿ, ಬೇವು ನಿಂಬೆ, ಬಿಲ್ವಪತ್ರೆ, ದಾಳಿಂಬೆ, ಮಾವಿನ ಎಲೆ ಬೆರೆಸಿ ಕುದಿಸಿ ಸ್ನಾನ ಮಾಡಿಸುವರು. ಹೆರಿಗೆಯಾಗಿ ಐದನೇ ದಿನದಂದು ಮಗುವಿಗೆ ನಾಮಕರಣ ಶಾಸ್ತ್ರವನ್ನು ಮಾಡುವರು. ಇದನ್ನು ಪೆರುಪೆಟ್ಟೋದು(ಹೆಸರಿಡೋದು) ಮತ್ತು ತೊಟ್ಟಿಲಿಗೆ ಹಾಕೋಶಾಸ್ತ್ರ ಎನ್ನುವರು. ಆ ದಿನದಂದು ಮತ್ತು ಐದರಿಂದ ಹನ್ನೊಂದು ಮುತ್ತೈದೆಯರನ್ನು, ನೆರೆಹೊರೆ ನೆಂಟರಿಷ್ಟರನ್ನು ಕರೆದು ತೊಟ್ಟಿಲಶಾಸ್ತ್ರ ಮಾಡುವರು. ಆ ದಿನದ ಕಾರ್ಯದಲ್ಲಿ ಸೋದರ ಮಾವ/ ಅತ್ತೆಯ ಪಾತ್ರ ಬಹು ಮುಖ್ಯವಾಗಿರುತ್ತದೆ. ಆ ಮಗುವಿನ ನಾಮಕರಣಶಾಸ್ತ್ರದ ಎಲ್ಲಾ ಖರ್ಚು ವೆಚ್ಚದ ಹೊಣೆಗಾರಿಕೆ ಅವರ ಮೇಲಿರುತ್ತದೆ. ಸೂಲಗಿತ್ತಿ ಹೆಸರು ಕಟ್ಟಲು ಮಗು ಹುಟ್ಟಿದ ಗಳಿಗೆ, ನಕ್ಷತ್ರ, ಅಮವಾಸ್ಯೆ, ಹುಣ್ಣಿಮೆ, ಚುಕ್ಕಿ ಯಾವ ಕಡೆ ಮೂಡಿತ್ತು ಇತ್ಯಾದಿಗಳನ್ನು ಪರಿಶೀಲಿಸಿಕೊಂಡು ಆ ಮಗುವಿನ ಬಲತ್ಕಾರ ನೋಡಿ ಹೆಸರನ್ನು ಸೂಚಿಸುವರು. ಹೆಸರನ್ನು ಸೋದರ ಮಾವ/ಅತ್ತೆಯವರು ಮೂರು ಚುರುಮುರಿ

ಗಂಟಿನೊಂದಿಗೆ ಮೂರು ಬಾರಿ ಕಿವಿಯಲ್ಲಿ ಹೇಳುವುದರ ಮೂಲಕ ಹೆಸರು ಕಟ್ಟುವರು. ಕರ್‌ಕರ್ ಮುಂಡರಲ್ಲಿ ಐದನೆ ದಿನದಲ್ಲಿ ತಾಯಿಗೆ ಸೀರೆ, ತಂದೆಗೆ ಧೋತ್ರ ತಂದು ಚುರುಮರಿ ಚಹಾ ಮಾಡಿ ಹಂಚಲಾಗುತ್ತದೆ. ಗಂಡುಮಗು ಹುಟ್ಟಿದರೆ ಹೆಚ್ಚು ಖುಷಿ ಪಡುವರು. ಖುಷಿಗಾಗಿ ಕೋಳಿ, ಕುರಿ, ಹಂದಿ ಮಾಂಸದ ಅಡುಗೆ ಮತ್ತು ಹೆಂಡ ಕುಡಿಯೋರಿಗೆ ಹೆಂಡ ಎಲ್ಲವನ್ನು ಸೋದರಮಾವ ಅಥವಾ ಅಳಿಯ ಕೊಡಿಸಬೇಕು. ಆರ್ಥಿಕವಾಗಿ ದುಸ್ಥಿತಿಯಲ್ಲಿದ್ದಾಗ ಸಿಹಿ ಅಡುಗೆ ಮಾಡಿ ಎಲ್ಲರಿಗೂ ಬಡಿಸಿ ಸೀರೆಯಲ್ಲಿ ತಯಾರಿಸಿದ ತೊಟ್ಟಿಲಿಗೆ ಮಗು ಹಾಕಿ ಕಾರ್ಯವನ್ನು ಮುಗಿಸುವರು. ಕರ್‌ಕರ್ ಮುಂಡರಲ್ಲಿ ಹೆಣ್ಣುಮಗುವಿಗೆ ಗಂಗಮ್ಮ, ದುರುಗಮ್ಮ, ಲಕ್ಷ್ಮವ್ವ, ತಂಗ್ಯವ್ವ, ದುರುಗವ್ವ, ನಾಗವ್ವ ಎಂಬ ಹೆಸರು ಇಡುವುದು ಕಂಡುಬರುತ್ತದೆ. ಹೆಸರು ಕರೆಯುವಾಗ ಮೊದಲಿಗೆ ಗಂಡನ ಮನೆಯ ದೇವರ ಹೆಸರು ಕರೆದು ನಂತರ ತವರು ಮನೆಯವರ ಹೆಸರನ್ನು ಕರೆಯುವರು. ಮತ್ತೊಂದು ವಿಶೇಷವೆಂದರೆ ಏಳು ತರಹದ ಕಾಳು ಹಾಕಿ ಕುದಿಸಿ ಗುಗ್ಗರಿ ತಯಾರಿಸಿ ಹಂಚಿ ಸಂತೋಷಪಡುವುದು ಇವರ ವಾಡಿಕೆಯಾಗಿದೆ.

ಪೆರುಪೆಟ್ಟೋದು(ಹೆಸರಿಡೋದು) ಮುಗಿದು ಆರರಿಂದ ಹನ್ನೆರಡು ತಿಂಗಳ ಒಳಗಡೆ ಗಂಡನ ಮನೆಗೆ ಕಳುಹಿಸಲಾಗುತ್ತದೆ. ಅಲ್ಲಿಯವರೆಗೂ ಮಗು ಸೀರೆ ತೊಟ್ಟಿಲಿನಲ್ಲಿ ಬೆಳೆಯುತ್ತದೆ. ಗಂಡನ ಮನೆಗೆ ಕಳುಹಿಸುವಾಗ ಒಂಭತ್ತು ತಿಂಗಳು ತುಂಬುವುದರೊಳಗೆ ಸೋದರಮಾವ ಮತ್ತು ಅಳಿಯ ಕಿವಿಗೆ ಮುರ ಹಾಕುವನು. ಮಗು ಮತ್ತು ತಾಯಿಗೆ ಹೊಸಬಟ್ಟೆ ತಂದು ಕುಂಕುಮ, ಬಳೆ, ಒಡಲಕ್ಕಿ ಹಾಕಿ ತೊಟ್ಟಿಲು ಕಳುಹಿಸೋ ಶಾಸ್ತ್ರಮಾಡುವರು.

ತಾಯಿಯು ಹೆರಿಗೆಯ ಸಂದರ್ಭದಲ್ಲಿ ಅಂದುಕೊಂಡ ಹರಕೆಯಲ್ಲಿ ಮಗುವಿನ ಜವುಳ ತೆಗೆಸೋದು ಒಂದಾಗಿದೆ. ಮಗುವಿಗೆ ಐದರಿಂದ ಏಳು ವರ್ಷ ವಯಸ್ಸಿನ ಸಮಯದಲ್ಲಿ ತಲೆಕೂದಲು ತೆಗೆಯುವ ಶಾಸ್ತ್ರ ಮಾಡುವರು. ತಾವು ಹರಕೆ ಕಟ್ಟಿಕೊಂಡ ದೇವರ ಸನ್ನಿಧಾನದಲ್ಲಿ ಈ ಕಾರ್ಯಮಾಡುವರು. ಆ ಸಂದರ್ಭದಲ್ಲಿ ಸೋದರಮಾವ ಅಥವಾ ಅಳಿಯ ತಲೆಕೂದಲು ಕತ್ತರಿಸಬೇಕು. ಹೆಣ್ಣುಮಗುವಾದರೆ ಮಗುವಿಗೆ ಕಾಲುಚೈನು, ಕಡಗ, ಬಂಗಾರದ ಓಲೆಗಳನ್ನು ಮುತ್ತೈದೆಯರ ಸಮ್ಮುಖದಲ್ಲಿ ತೊಡಿಸುವನು. ಹಿಂದೆ ಆ ಹೆಣ್ಣು ನಮ್ಮ ಮನೆಯ ಸೊಸೆ ಎಂದು ಮೊದಲೇ ನಿಶ್ಚಿಯಿಸಿಕೊಳ್ಳುತ್ತಿದ್ದರಂತೆ ತೊಟ್ಟಿಲು ವಿವಾಹಗಳು ಹಿಂದೆ ನಡೆಯುತ್ತಿದ್ದವು. ಸೋದರ ಮಾವ ಓಲೆ ಕೊಟ್ಟರೆ ಅದನ್ನು ಹೆಣ್ಣಿನ ಕಡೆಯವರು ತೆಗೆದುಕೊಂಡರೆ ಹೆಣ್ಣುಕೊಟ್ಟಂತೆ. ಅದನ್ನು ನಿರಾಕರಿಸಿದರೆ ಮಗಳನ್ನು ಕೊಡುವುದಿಲ್ಲ ಎಂಬ ಸೂಚನೆ ಅವರಿಗೆ ತಿಳಿಯುತ್ತಿತ್ತು. ಸೋದರ ಮಾವ

ತಲೆಯ ಮೇಲೆ ಮೂರು ಕತ್ತರಿ ಹಾಕಿ ಕಾರ್ಯ ಮುಗಿಸುವನು. ನೆಂಟರಿಷ್ಟರಿಗೆಲ್ಲ ಸಂತೃಪ್ತಿ ಊಟ ಹಾಕುವುದು ಗಂಡನ ಕರ್ತವ್ಯವಾಗಿದೆ.

ಈ ರೀತಿಯಾಗಿ ಕರ್‌ಕರ್ ಮುಂಡರು ಹೆರಿಗೆ, ಬಾಣಂತಿತನ, ಮಗುವಿನ ಪೆರುಪೆಟ್ಟೋದು, ಜವುಗಳ ತೆಗೆಸೋದು ಎಂಬ ಪಾರಂಪರಿಕ ಆಚರಣೆಗಳನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಇವುಗಳು ಮೌಢ್ಯತೆಗಿಂತ ಭಿನ್ನವಾಗಿ ವೈಜ್ಞಾನಿಕ ವಿಧಾನದ ಮೂಲಕ ಎರಡು ಜೀವಗಳ ರಕ್ಷಣಾ ಕ್ರಮಗಳಾಗಿವೆ ಎಂದರೂ ತಪ್ಪಾಗಲಿಕ್ಕಿಲ್ಲ. ಕರ್‌ಕರ್ ಮುಂಡರು ಮಾತ್ರವಲ್ಲದೇ ಎಲ್ಲಾ ಬುಡಕಟ್ಟುಗಳು ತಮ್ಮ ಪಾರಂಪರಿಕ ಜ್ಞಾನದ ಮೂಲಕ ಇಂತಹ ಸಂದರ್ಭಗಳಲ್ಲಿ ಜೀವ ರಕ್ಷಿಸಿಕೊಳ್ಳುವ ಕಲೆಯನ್ನು ಮೈಗೂಡಿಸಿಕೊಂಡಿರುತ್ತಾರೆ. ಆದರೆ ಆಧುನಿಕ ಸಮಾಜದ ಶೀಘ್ರ ಸ್ಥಿತ್ಯಂತರಗಳು ತಮ್ಮ ಪಾರಂಪರಿಕ ಆಚಾರ-ವಿಚಾರಗಳನ್ನು ಕಳೆದುಕೊಂಡು ಶಿಷ್ಟ ಸಂಸ್ಕಾರಗಳೆಡೆಗೆ ಸಾಗುತ್ತಿರುವುದು ವಿಪರ್ಯಾಸವೇ ಸರಿ. ಇವುಗಳನ್ನು ಪುನರ್ ರಚನೆಗೆ ಒಳಪಡಿಸಿ ಮುಂದುವರೆಯುವಂತೆ ನೋಡಿಕೊಳ್ಳುವ ಅಗತ್ಯತೆ ಇದೆ.

**ಪೆದ್ದಮನಿಷಿ ಶಾಸ್ತ್ರಮು (ಋತುಮತಿ ಅಥವಾ ಹೆಣ್ಣು ಮೈ ನೆರೆದ ಶಾಸ್ತ್ರ)**

ಸೃಷ್ಟಿಯ ನಿಯಮದಂತೆ ನಿಸರ್ಗದಲ್ಲಿನ ಜೀವಸಂಕುಲ ದೈಹಿಕ ಬದಲಾವಣೆ ಹೊಂದುವುದು ಸಹಜ. ಇದಕ್ಕೆ ಮನುಷ್ಯ ಜೀವಿ ಹೊರತಾಗಿಲ್ಲ. ಹೆಣ್ಣು ಪ್ರೌಢಾವಸ್ಥೆಗೆ ತಲುಪಿ ಋತುಮತಿಯಾಗುವುದು ನಿಸರ್ಗದತ್ತವಾದದ್ದು. ಋತುಮತಿಯಾಗುವುದರ ಮೂಲಕ ದೈಹಿಕ ಬದಲಾವಣೆಯನ್ನು ಹೊಂದುವಳು ಇದನ್ನು ಮೈನೆರೆಯುವುದು, ಪುಷ್ಪವತಿಯಾಗುವುದು, ದೊಡ್ಡವಳಾಗುವುದು ಎಂದು ಪ್ರಾದೇಶಿಕ ರೂಢಿ ಭಾಷೆಯಲ್ಲಿ ಕರೆಯಲಾಗುತ್ತದೆ. ಕರ್‌ಕರ್ ಮುಂಡರು ಇದನ್ನು ಪೆದ್ದಮನಿಷಿ ಅಯ್ಯಿಂದಿ ಎಂದು ಕರೆಯುವರು.

ಪ್ರತಿಯೊಂದು ಆದಿವಾಸಿ ಸಮುದಾಯಗಳು ಹೆಣ್ಣುಮಗಳು ಋತುಮತಿಯಾದ ಸಂದರ್ಭವನ್ನು ಮೈಲಿಗೆ ಎಂದು ಭಾವಿಸುವರು. ಋತುಮತಿಯಾದ ಹೆಣ್ಣಿಗೆ ಅವರವರ ಆರ್ಥಿಕ ಸ್ಥಿತಿಗತಿಯ ಮೇಲೆ ಕೆಲ ಆಚರಣೆಗಳನ್ನು ಮಾಡುವರು. ತೀರ ಬಡತನದಲ್ಲಿರುವವರು ತಮ್ಮ ಪರಂಪರೆಯಿಂದ ಬಂದ ಆಚರಣೆ ಸಂಪ್ರದಾಯಗಳನ್ನು ಸರಳವಾಗಿ ಆಚರಿಸುವರು.

ಹೆಣ್ಣು ಋತುಮತಿಯಾದ ಮೇಲೆ ಮಧ್ಯವಯಸ್ಸಿನಲ್ಲಿ ಆಕೆಯ ಋತುಚಕ್ರ ಸ್ಥಗಿತಗೊಳ್ಳುವವರೆಗಿನ ಘಟ್ಟವನ್ನು ಫಲವಂತಿಕೆಯ ಕಾಲ ಎಂದು ಗುರುತಿಸಲಾಗುವುದು.

ಹೆಣ್ಣು ಋತುಮತಿಯಾದಾಗ ತನ್ನ ಬದುಕಿನಲ್ಲಿ ಮೊಟ್ಟಮೊದಲ ಬಾರಿಗೆ ಜೈವಿಕ ಬದಲಾವಣೆ ಆಗುತ್ತಿರುವುದನ್ನು ಅನುಭವಿಸುತ್ತಾಳೆ. ಋತುಮತಿಯಾರೆ ಹೆಣ್ಣು ಸಂಸಾರಸ್ಥಳಾಗಿ ತಾಯ್ತನದ ಸುಖವನ್ನು ಅನುಭವಿಸಲು ಅರ್ಹತೆ ಹೊಂದಿದಳೆಂದು ತಂದೆ-ತಾಯಿ, ಬಂಧು-ಬಳಗ, ಸೋದರ ಮಾವಂದಿರು; ಬಾಲ್ಯದಲ್ಲಿಯೇ ಮದುವೆಯಾಗಿದ್ದರೆ ಅವಳ ಅತ್ತೆ ಮಾವ, ಗಂಡ, ಕೇರಿಯವರೆಲ್ಲ ಸಂತೋಷ ಪಡುವರು. ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಹುಡುಗಿ ಸ್ತ್ರೀಯಾಗುವುದನ್ನು ಹದಿಹರೆಯ ವಯಸ್ಸು ಎನ್ನಲಾಗುತ್ತದೆ. ಹುಡುಗಿ ಸ್ತ್ರೀತನದ ಗುಣಲಕ್ಷಣಗಳನ್ನು ಪಡೆಯುವಳು. ಹೀಗೆ ಋತುಮತಿಯಿಂದ ಸ್ತ್ರೀಯು ಫಲವಂತಿಕೆಯ ಸಂಕೇತವಾಗಿ ಸಾಮಾಜಿಕ ಸ್ಥಾನಮಾನವನ್ನು ಪಡೆದುಕೊಳ್ಳುವಳು.

ಕರ್‌ಕರ್ ಮುಂಡರಲ್ಲಿ ಬಾಣಂತಿ ಸೂತಕದಂತೆ ಹೆಣ್ಣು ಪೆದ್ದಮನಿಸಿ ಅಯ್ಯಿಂದಿ ಅಥವಾ ಮೈ ನೆರೆದಿದ್ದಾಳೆ ಎಂಬ ಸೂತಕವನ್ನು ಶುಭ ಸಂಕೇತವೆಂದು ಸಂಭ್ರಮಿಸುವರು. ಹಿಂದೆ ತೊಟ್ಟಿಲು ವಿವಾಹಗಳು ನಡೆದಾಗ ಋತುಮತಿಯಾಗುವವರೆಗೆ ತವರು ಮನೆಯಲ್ಲಿಯೇ ಇರುತ್ತಿದ್ದಳು. ಇಂತಹ ಶುಭ ಸಮಯಕ್ಕಾಗಿ ಗಂಡನಾದವನು ಕಾಯುತ್ತಿರುತ್ತಿದ್ದನು. ತಂದೆ-ತಾಯಿಗಳು ಮಗಳು ಸಂಸಾರಸ್ಥಳಾಗಿ ಹೆಣ್ತನದ ಜವಾಬ್ದಾರಿ ಮತ್ತು ವಂಶ ಬೆಳೆಸಲು ಸಿದ್ಧಳೆಂದು ಸಂತೋಷ ವ್ಯಕ್ತಪಡಿಸುತ್ತಿದ್ದರು. ಲೈಂಗಿಕ ಶಿಕ್ಷಣದ ಅರಿವಿಲ್ಲದ ಹೆಣ್ಣು ಮೊದಲ ಬಾರಿಗೆ ಆದ ರಕ್ತಸ್ರಾವವನ್ನು ಕಂಡು ಭಯ ಮತ್ತು ಕೀಳರಿಮೆ ಮೂಡಿಸಿಕೊಳ್ಳುತ್ತಿದ್ದಳು.

ಮೊದಲ ಬಾರಿಗೆ ಮುಟ್ಟಾದವಳಿಗೆ ಮನೆಯ ಮೂಲೆ ಅಥವಾ ಮುಂದುಗಡೆ ಗುಡಿಸಲು ಹಾಕುವರು. ಈ ಗುಡಿಸಲನ್ನು ಸೋದರಮಾವನೆ ನಿರ್ಮಿಸಬೇಕು ಎಂಬ ನಿಯಮವಿದೆ. ಲಕ್ಕಿ, ಬೇವು ಮತ್ತು ಹೊಂಗೆ ಸೊಪ್ಪಿನಿಂದ ಗುಡಿಸಲು ನಿರ್ಮಿಸುವರು. ಇದನ್ನು ಸೂತಕದ ಗುಡ್ಲು ಎನ್ನುವರು. ಐದು ದಿನಗಳವರೆಗೆ ಅವಳನ್ನು ಯಾರೂ ಮುಟ್ಟುವಂತಿಲ್ಲ. ನೆರೆಮನೆಯವರು ಹುಡುಗಿಗೆ ವಿಶೇಷ ಅಡಿಗೆ ಮಾಡಿಕೊಡುವರು. ಮುತ್ತೈದೆಯರು ಅವಳಿಗೆ ಅರಿಶಿಣ ಎಣ್ಣೆ ಹಚ್ಚಿ ಸ್ನಾನ ಮಾಡಿಸುವರು. ಸಂಜೆಗೆ ಆರತಿ ಬೆಳಗಿ ಸೋಬಾನೆ ಪದವನ್ನು ಹೇಳುತ್ತಾ ಮನರಂಜನೆ ನೀಡುವರು. ಜೊತೆಗೆ ಜೀವನ ನಿರ್ವಹಣೆಯ ನಿರ್ದೇಶನಗಳನ್ನು ನೀಡುವ ಹಾಡುಗಳನ್ನು ಹಾಡುವರು. ಈ ಓಂದೆ ಪ್ರತಿದಿನ ಸ್ನಾನ ಮಾಡಿಸಿ ಬೇವಿನ ಸೊಪ್ಪಿನುಡಿಗೆಯನ್ನು ತೊಡಿಸುತ್ತಿದ್ದ ಪದ್ದತಿ ಇಂದು ಮರೆಯಾಗಿದೆ, ಐದರಿಂದ ಒಂಬತ್ತು ದಿನಗಳವರೆಗೆ ಈ ಮೈಲಿಗೆಯನ್ನು ಮುತ್ತೈದೆಯರು ಕಳೆಯುವರು.

ಒಂದುವೇಳೆ ತೊಟ್ಟಿಲು ವಿವಾಹವಾಗದ ಹೆಣ್ಣು ಮಗುವು ಮೈನೆರೆದರೆ ಎಲ್ಲಾ ನೆಂಟರಿಷ್ಟರು ಮತ್ತು ನೆರೆಹೊರೆಯವರನ್ನು ಕರೆದು ಈ ಮೈಲಿಗೆಯನ್ನು ಕಳೆಯುವರು. ಆ ದಿನದಂದು ಬೇವು, ಲಕ್ಕಿ, ನಿಂಬೆ, ತುಂಬೆ ಮೊದಲಾದ ಎಲೆಗಳನ್ನು ಬೆರೆಸಿ ಬಿಸಿನೀರಿನಲ್ಲಿ ಸ್ನಾನ ಮಾಡಿಸುವರು. ವಿವಾಹಿತಳಾಗಿದ್ದರೆ ಗಂಡನ ಮನೆಯವರು ತಂದ ಹೊಸ ಉಡುಗೆ–ತೊಡುಗೆ ತೊಡುವರು. ಇಲ್ಲದಿದ್ದರೆ ತವರ ಮನೆಯವರ ಉಡುಗೆ–ತೊಡುಗೆಗಳನ್ನು ಧರಿಸುವಳು. ಈ ಸಂದರ್ಭದಲ್ಲಿ ಸ್ತ್ರೀಯನ್ನು ಶೃಂಗಾರಗೊಳಿಸಿ, ಒಡಲಕ್ಕಿ ಹಾಕಿ, ಮುತ್ತೈದೆಯರು ನಿವಾಳಿಸಿ ನಂತರ ಮನೆ ತುಂಬಿಸಿಕೊಳ್ಳುವರು. ಮದುವೆ ಆಗಿದ್ದರೆ ಮಾರನೆಯ ದಿನ ಬಂಧು ಬಳಗಕ್ಕೆ ಗಂಡನ ಮನೆಯವರು ಊಟ ಹಾಕಿಸಿ ಅವಳನ್ನು ಕೆರೆದುಕೊಂಡು ಹೋಗುವರು.

ಬಾಲ್ಯವಿವಾಹ ಆಗಿದ್ದರೆ ಹುಡುಗಿಯ ಋತುಮತಿಯ ಕಾರ್ಯದ ಖರ್ಚನ್ನು ಗಂಡನ ಮನೆಯವರು ಭರಿಸಬೇಕು. ಆ ದಿನದಂದು ಹೋಳಿಗೆ ಮಾಡಿ ಅವಳಿಗೆ ನೀಡಿದ ನಂತರ ಎಲ್ಲರೂ ಸೇವಿಸುವರು. ಹಿಂದಿನ ಪೂರ್ವಿಕರು ಈ ಕಾರ್ಯಕ್ರಮದಂದು ಸ್ತ್ರೀಗೆ ಹಂದಿಯನ್ನು ಬಲಿಕೊಡುತ್ತಿದ್ದರು. ಬಲಿಕೊಟ್ಟ ಹಂದಿಯ ರಕ್ತವನ್ನು ಋತುಮತಿಯಾದ ಹೆಣ್ಣುಮಗಳು ಪ್ರತಿ ನಿತ್ಯ ಸ್ನಾನ ಮಾಡುತ್ತಿದ್ದ ಮೈಲಿಗೆಯ ಗುಂಡಿಯಲ್ಲಿ ಹಾಕಿ ಮುಚ್ಚುತ್ತಿದ್ದರು. ನಂತರ ಹಂದಿಯ ಮಾಂಸದ ಆಹಾರವನ್ನು ಅವಳಿಗೆ ನೀಡಿ ತೃಪ್ತಿಪಟ್ಟನಂತರ ಇತರರು ಸಾರಾಯಿಯೊಂದಿಗೆ ಸೇವಿಸಿ ಸಂತೋಷ ಹಂಚಿಕೊಳ್ಳುತ್ತಿದ್ದರು.

ಪ್ರಸ್ತುತ ಸಂದರ್ಭದಲ್ಲಿ ಇವರ ಆಚರಣೆಗಳು ಸ್ಥಿತ್ಯಂತರಗೊಳ್ಳುತ್ತಿರುವುದು ಮಾಹಿತಿದಾರರಿಂದ ತಿಳಿದುಬರುತ್ತದೆ. ತೊಟ್ಟಿಲು ವಿವಾಹ ಕಣ್ಮರೆಯಾಗಿದ್ದು ತವರು ಮನೆಯವರೇ ಈ ಕಾರ್ಯವನ್ನು ನೆರವೇರಿಸುವರು. ಹಂದಿಯ ಬಳಕೆ ಕ್ರಮೇಣ ಕಡಿಮೆಯಾಗಿ ಸಿಹಿ ಅಡುಗೆಗೆ ಬಂದು ನಿಂತಿದೆ. ಈ ರೀತಿಯಾಗಿ ಕರ್‌ಕರ್ ಮುಂಡರು ದೊಡ್ಡವಳಾದ (ಮೈ ನೆರೆದ)ಶಾಸ್ತ್ರವನ್ನು ನೆರವೇರಿಸುವರು.

**ವಿವಾಹ**

ಸಮಾಜಶಾಸ್ತ್ರಜ್ಞರ ಅಭಿಪ್ರಾಯದಂತೆ ವಿವಾಹ ಒಂದು ಸಂಸ್ಥೆ ಮತ್ತು ಸಂಘವು ಆಗಿದೆ. ಮಾನವ ಲೈಂಗಿಕ ಬಯಕೆಗಳನ್ನು ಪೂರೈಸುವ ಮತ್ತು ಆ ಮೂಲಕವಾಗಿ ಸಮಾಜದ ವಿಕಾಸಕ್ಕೆ ಮತ್ತು ಉಳುವಿಗೆ ಕಾರಣೀ ಭೂತವಾಗಿದೆ. ಸಮಾಜದ ಮುಂದುವರಿಕೆಗೆ ವಿವಾಹವು ವಧು–ವರರಿಗೆ ಜವಾಬ್ದಾರಿಯನ್ನು ಹೊರಿಸುತ್ತದೆ. ಸಂತಾನೋತ್ಪತ್ತಿಯನ್ನು ಬೆಳೆಸುತ್ತಾ ಕುಲ, ಜಾತಿ, ಸಮಾಜಿಕ ಸ್ಥಾನಮಾನಗಳನ್ನು ಮುಂದಿನ ತಲೆಮಾರಿಗೆ ಕೊಂಡೊಯ್ಯುತ್ತದೆ.

ಭಾರತದಲ್ಲಿ ಹುಟ್ಟಿಕೊಂಡಿರುವ ಬಹುತೇಕ ನಂಬಿಕೆಗಳಲ್ಲಿ ಮಾನವನ ಜೀವನವು ಧರ್ಮ, ಅರ್ಥ ಕಾಮ, ಮೋಕ್ಷ ಎಂಬ ಪರಿಕಲ್ಪನೆಗಳಿಂದ ಕೂಡಿದೆ. ಇವುಗಳಲ್ಲಿ ಕಾಮ ಎಂಬ ಬಯಕೆಯನ್ನು ವಿವಾಹದಿಂದ ತೀರಿಸಿಕೊಳ್ಳಲು ಸಾಮಾಜಿಕ ಮನ್ನಣೆ ಇದೆ. ಪುರಾತನ ಭಾರತೀಯ ಸಮಾಜದಲ್ಲಿ "ಬ್ರಹ್ಮ, ದೈವ, ಆರ್ಶ, ಪ್ರಜಾಪತ್ಯ, ಅಸುರ, ಗಾಂಧರ್ವ, ರಾಕ್ಷಸ, ಪೈಶಾಚಿಕ"(ಶಂಕರ್‌ರಾವ್.ಚ.ನ:೨೦೦೮:೨೩-೨೪)ಎಂಬಿತ್ಯಾದಿ ವಿವಾಹದ ಪ್ರಕಾರಗಳನ್ನು ಗುರುತಿಸಲಾಗಿತ್ತು. ಅದರಲ್ಲಿ ಸಮಾಜದ ಮನ್ನಣೆಯಿಂದ ನಡೆಯಲ್ಪಡುತ್ತಿದ್ದ ಬ್ರಹ್ಮವಿವಾಹವು ಶ್ರೇಷ್ಠ ಎಂಬ ಅಭಿಪ್ರಾಯವಿದೆ.

ಪ್ರಾಚೀನ ಕಾಲದ ಮಾನವ ಅಲೆಮಾರಿತನದಿಂದ ಗುಂಪು ಜೀವನಕ್ಕೆ ಕಾಲಿಟ್ಟು ಸಾಮೂಹಿಕವಾಗಿ ಜೀವನ ನಿರ್ವಹಣೆಯಲ್ಲಿ ತೊಡಗಿದ್ದ ಅವಧಿಯಲ್ಲಿ ಇತರೆ ಪ್ರಾಣಿಗಳಂತೆ ಮತ್ತು ಲೈಂಗಿಕ ಸಂಬಂಧ ಹೊಂದಿದ್ದನು. ಆ ಮೂಲಕ ಸೃಷ್ಟಿ ಕ್ರಿಯೆಯಲ್ಲಿ ತನಗರಿವಿಲ್ಲದಂತೆಯೇ ಭಾಗಿಯಾಗುತ್ತಿದ್ದನು. ತನ್ನ ಜೀವನ ವಿಧಾನದಲ್ಲಿ ಮಾರ್ಪಾಡುಗಳಾಗಿ ಅಲೆಮಾರಿತನಕ್ಕೆ ಕಡಿವಾಣ ಹಾಕಿ, ನಾವು-ನಮ್ಮವರು ಎಂಬ ಸೌಹಾರ್ಧ ಭಾವನೆಯಿಂದಾಗಿ ಮುಕ್ತ ಲೈಂಗಿಕತೆಗೆ ತೆರೆ ಎಳೆಯಲಾಯಿತು. ಇದು ಹೊಮೋಸೆಫಿಯನ್ಸ್ ಹಿಂದಿನ ಕಾಲಾವಧಿಯಲ್ಲಿ ಸನ್ನಿವೇಶವಾಗಿತ್ತು. ನಂತರದಲ್ಲಿ ಗಂಡು-ಹೆಣ್ಣುಗಳ ಸಂಬಂಧಗಳ ಬಗ್ಗೆ ಹೊಸ ರೂಪ ಪಡೆದು ವಿವಾಹದ ಮೂಲಕ ಕುಟುಂಬಗಳನ್ನು ಕಟ್ಟಿಕೊಳ್ಳುವ ಸಂಪ್ರದಾಯ ಬೆಳೆದು ಬಂದಿರುವ ಸಾಧ್ಯತೆ ಇದ್ದಿರಬಹುದು. ಪ್ರಾಚೀನ ಕಾಲದ ಸಮಾಜದಿಂದ ಹಿಡಿದು ಇಂದಿನ ಆಧುನಿಕ ಸಮಾಜದವರೆಗೆ ವಿವಾಹವು ವಿವಿಧ ಮಾದರಿಗಳಲ್ಲಿ ಬೆಳೆದು ಬಂದಿರುತ್ತದೆ. ಇಂತಹ ವಿವಾಹವು ಸಾಂಸ್ಕೃತಿಕ ಪಲ್ಲಟ ಹೊಂದಿದ ಮತ್ತು ಸಾಮಾಜಿಕ ಸ್ತರವಿನ್ಯಾಸ ಹೊಂದಿರುವ ಭಾರತದಲ್ಲಿ ವಿಶೇಷ ಸಂಸ್ಕಾರ ವಿಧಿಯಾಗಿ ಮುಂದುವರೆದುಕೊಂಡು ಬಂದಿರುವುದನ್ನು ಕಾಣಬಹುದು. ಬಹು ಸಂಸ್ಕೃತಿ ಹೊಂದಿದ ಭಾರತೀಯ ಸಮಾಜದಲ್ಲಿ ಬುಡಕಟ್ಟು ಸಮುದಾಯಗಳು ವಿಭಿನ್ನ ಆಚರಣೆ ಮತ್ತು ಸಂಪ್ರದಾಯಗಳನ್ನು ಮೈಗೂಡಿಸಿಕೊಂಡಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಪ್ರತಿಯೊಂದು ಬುಡಕಟ್ಟು ತನ್ನದೇ ಆದ ಸಂಪ್ರದಾಯ, ಆಚರಣೆಗಳನ್ನು ಹೊಂದಿವೆ. ಆ ಮೂಲಕ ವಿವಾಹ ಕಾರ್ಯಗಳು ನಡೆಯುತ್ತವೆ. ಪೂರ್ವಿಕರಲ್ಲಿನ ಸಂಪ್ರದಾಯ, ಆಚರಣೆಗಳು ಮರೆಯಾಗುತ್ತಾ ಸ್ವರೂಪದಲ್ಲಿ ಬದಲಾವಣೆ ಹೊಂದುತ್ತಿವೆ. ಕೆಲವೊಂದು ಮಾಯವಾಗಿ ಮತ್ತೆ ಕೆಲವು ಸೇರಿಕೊಂಡಿವೆ. ಇಂತಹ ವಿವಾಹ ಸ್ಥಿತ್ಯಂತರಗಳಿಗೆ ಕರ್‌ಕರ್ ಮುಂಡ ಸಮುದಾಯವು ಹೊರತಾಗಿಲ್ಲ. ಕರ್‌ಕರ್ ಮುಂಡರಲ್ಲಿ ಹೆಚ್ಚಾಗಿ ಒಳಬಾಂಧವ್ಯ ವಿವಾಹಗಳು ನಡೆಯುತ್ತವೆ.

ಸೋದರ ಮಾವ, ಅತ್ತೆ, ಅಕ್ಕನ ಮಗಳನ್ನು ವಿವಾಹವಾಗಬೇಕು ಎಂಬ ವಿಧಿಗಳಿವೆ. ಇವರ ವಿವಾಹ ಕಾರ್ಯಗಳು ಹಲವು ಹಂತಗಳಲ್ಲಿ ನಡೆಯುವುದನ್ನು ಹೀಗೆ ಗುರುತಿಸಬಹುದಾಗಿದೆ.

**ಕನ್ಯೆಯ ನಿಶ್ಚಿಯ:** ಕರ್‌ಕರ್ ಮುಂಡ ಸಮುದಾಯದಲ್ಲಿ ಸಾಮಾನ್ಯವಾಗಿ ಹೆಣ್ಣು ಮಗು ಹುಟ್ಟಿದಾಗ ನಡೆಯುವ ಪೆರುಪೆಟ್ಟೋದು(ನಾಮಕರಣ) ಸಂದರ್ಭದಲ್ಲಿಯೇ ಕನ್ಯೆಯ ನಿಶ್ಚಯ ಕಾರ್ಯ ನಡೆಯುತ್ತಿದ್ದವು. ಸೀಮಿತ ಪ್ರದೇಶ ಮತ್ತು ಕಡಿಮೆ ಜನಸಂಖ್ಯೆಯ ಕಾರಣದಿಂದಾಗಿ ಮದುವೆಗಳು ಹತ್ತಿರದ ಸಂಬಂಧದಲ್ಲೇ ತಳುಕು ಹಾಕಿಕೊಂಡಿವೆ. ಹಿಂದೆ ನಾಮಕರಣ ಮಾಡುವ ಸಂದರ್ಭದಲ್ಲಿಯೇ ಸೋದರ ಮಾವ, ಅತ್ತೆ, ಅಕ್ಕನ ಮಗನಿಗೆ ಕನ್ಯೆಯನ್ನು ನಿಶ್ಚಯಿಸಿಕೊಳ್ಳುತ್ತಿದ್ದರು. ವಯಸ್ಕ ವಿವಾಹ ಪದ್ಧತಿ ಬಂದಾಗಿನಿಂದ ಸ್ವಲ್ಪ ಬದಲಾವಣೆಗಳನ್ನು ಕಾಣುತ್ತೇವೆ. ಕನ್ಯೆಯ ನಿಶ್ಚಿಯ ಕಾರ್ಯದಲ್ಲಿ ವರನ ಕಡೆಯವರು ಕನ್ಯೆಯ ಮನೆಗೆ ಮೊದಲು ಹೋಗುವುದು ಸಂಪ್ರದಾಯ. ವರನ ತಂದೆಯು ತನ್ನ ಸಮುದಾಯದ ಹಿರಿಯರೊಂದಿಗೆ ಕನ್ಯೆಯ ಮನೆಗೆ ಹೋಗುವರು. ಕನ್ಯೆಯನ್ನು ನೋಡಿ ಅವರ ಕುಲ, ಬೆಡಗುಗಳ ಅನ್ವೇಷಣೆಯ ಕಾರ್ಯ ನಡೆಸುವರು. ಇದನ್ನು ಕುಡಿ ಅಥವಾ ಸಾಲಾವಳಿ ಎನ್ನುವರು. ಇಲ್ಲಿ ಗುರಿಕಾರನ ಪಾತ್ರ ಪ್ರಮುಖವಾಗಿರುತ್ತದೆ. ಸಂಬಂಧ ಬೆಳೆಸಬಹುದೋ? ಬೇಡವೋ? ಎಂಬ ತೀರ್ಮಾನಕ್ಕೆ ಬಂದನಂತರ ಹುಡುಗಿ ಒಪ್ಪಿಗೆಯಾದರೆ ಕುಲದ ಮುಖ್ಯಸ್ಥರ ಸಮ್ಮುಖದಲ್ಲಿ ವರನ ಮನೆಯವರು ಎಲೆ, ಅಡಿಕೆ ಮತ್ತು ನಾಲ್ಕು ರೂಪಾಯಿ ಕಾಣಿಕೆ ಇಟ್ಟು ಕನ್ಯೆ ನಿಶ್ಚಯ ಮಾಡಿಕೊಳ್ಳುವರು. ಇಷ್ಟೇ ಅಲ್ಲದೇ ಕುಲಕ್ಕೆ ಕಾಣಿಕೆಯಾಗಿ ನಾಲ್ಕು ರೂಪಾಯಿ ನೀಡುವರು. ಇಂದು ಕಾಣಿಕೆಯ ಪ್ರಮಾಣ ಶಾಸ್ತ್ರಕ್ಕೆ ಮಾತ್ರ ಸೀಮಿತವಾಗಿದೆ. ಇವುಗಳ ಮಧ್ಯದಲ್ಲಿ ಸೋದರ ಮಾವನ ಒಪ್ಪಿಗೆ ಪ್ರಮುಖವಾಗಿರುತ್ತದೆ. ಅವನು ಒಪ್ಪಿಗೆ ಸೂಚಿಸಿದ ನಂತರವೇ ಕನ್ಯೆಯ ನಿಶ್ಚಯವಾಗುವುದು.

**ವಿವಾಹವನ್ನು ನಿಶ್ಚಿಯಿಸುವುದು ಅಥವಾ ನಿಶ್ಚಿತಾರ್ಥ :**

ಕನ್ಯೆಯನ್ನು ನಿಶ್ಚಯಿಸಿದ ನಂತರ ವಿವಾಹ ನಿಶ್ಚಿಯಿಸುವುದನ್ನು ಕರ್‌ಕರ್ ಮುಂಡರಲ್ಲಿ ಬಾಟ್ಗೀ ಶಾಸ್ತ್ರ ಎನ್ನುವರು. (ಎಲೆ ಅಡಿಕೆ ಶಾಸ್ತ್ರ, ಕುಂಕುಮಶಾಸ್ತ್ರ, ವೀಳ್ಯಾಶಾಸ್ತ್ರ) ಗುರಿಕಾರನು ಪರಸ್ಪರ ಎರಡು ಕಡೆಯವರಿಂದ ಮತ್ತು ಸೋದರ ಮಾವನ ಒಪ್ಪಿಗೆ ಪಡೆದ ನಂತರ ಎಲೆ ಅಡಿಕೆಯನ್ನು ವಿನಿಮಯ ಮಾಡಿಸುವನು. ಇದಾದನಂತರ ವರನ ಕಡೆಯವರು ಸೋದರ ಮಾವನಿಗೆ ನೆಂಟರಿಷ್ಟರು ಮತ್ತು ಸಮುದಾಯದ ಮುಖಂಡರ ಸಮ್ಮುಖದಲ್ಲಿ ಕನ್ಯಾಶುಲ್ಕವನ್ನು ಕಟ್ಟುವರು. ಬಡವರಾಗಲಿ, ಶ್ರೀಮಂತರಾಗಲಿ

ಈ ಕನ್ಯಾಶುಲ್ಕವನ್ನು ಕಟ್ಟಲೇಬೇಕು. ಇದು ಹಿಂದಿನಿಂದಲೂ ಅನುಸರಿಸಿಕೊಂಡು ಬಂದಿದ್ದು, ಇಂದಿಗೂ ಆಚರಣೆಯಲ್ಲಿದೆ. ಕನ್ಯಾಶುಲ್ಕ ಪದ್ದತಿಯಿಂದಾಗಿ ಈ ಸಮುದಾಯದಲ್ಲಿ ಸ್ತ್ರೀಗೆ ಹೆಚ್ಚಿನ ಪ್ರಾಧಾನ್ಯತೆ ಇರುವುದು ತಿಳಿದುಬರುತ್ತದೆ. ಸ್ತ್ರೀಯರ ಸಂಖ್ಯೆ ಕಡಿಮೆ ಪ್ರಮಾಣದಲ್ಲಿರುವ ಕಾರಣದಿಂದಾಗಿ ಕನ್ಯಾಶುಲ್ಕ ಪದ್ದತಿ ಪ್ರಾಮುಖ್ಯತೆ ಪಡೆದುಕೊಂಡಿರಬಹುದು. ಇಂದು ವಧು ದಕ್ಷಣೆಯ ಬದಲಿಗೆ ವರದಕ್ಷಣೆ ಜಾರಿಯಲ್ಲಿದೆ. ಕನ್ಯಾಶುಲ್ಕವನ್ನು ನೀಡಿ ಮಾತುಕತೆ ಆಡಿದ ನಂತರ ವಿವಾಹದ ದಿನವನ್ನು ಖಚಿತಪಡಿಸಿಕೊಳ್ಳುವರು. ಉತ್ತರ ಕರ್ನಾಟಕದಲ್ಲಿ ಈ ಸಮುದಾಯದವರು ನಿಶ್ಚಿತಾರ್ಥ ಕಾರ್ಯವನ್ನು ಮದುವೆಯ ದಿನದಂದೇ ಮದುವೆ ಮಂಟಪದ ಚಪ್ಪರದಡಿಯಲ್ಲಿ ನಿಶ್ಚಿತಾರ್ಥ ಕಾರ್ಯವನ್ನು ಮುಗಿಸುವರು. ಈ ಶಾಸ್ತ್ರದ ದಿನದಂದು ಕನ್ಯೆಗೆ ವರನ ಕಡೆಯವರು ಸೀರೆ, ಕುಪ್ಪಸ, ಬಾಚಣಿಕೆ, ಕನ್ನಡಿ, ಉಂಗುರ ನೀಡುವರು. ನಿಶ್ಚಿತಾರ್ಥ ದಿನದಂದು ನೀಡಿದ ಸೀರೆ, ರವಿಕೆಯನ್ನು ತೊಟ್ಟು ಹೆಣ್ಣು ಹಸಿ ಮಣೆ ಮೇಲೆ ಕುಳಿತುಕೊಳ್ಳಬೇಕು.

**ಮದುವೆ ದಿನದ ಕಾರ್ಯಗಳು ಮತ್ತು ಮಾಂಗಲ್ಯಧಾರಣೆ:**

ಮದುವೆ ಹಿಂದಿನ ದಿನದ ಕಾರ್ಯದಲ್ಲಿ ಮೊದಲನೆಯದು ಹಂದರ ಹಾಕುವುದು. ಐದರಿಂದ ಒಂಬತ್ತು ಕಂಬಗಳನ್ನು ನೆಡುವರು. ಅದರಲ್ಲಿನ ಒಂದು ಕಂಬಕ್ಕೆ ವಿಶೇಷ ಪೂಜೆಮಾಡುವರು. ಹಂದ್ರಕ್ಕೆ ತೆಂಗಿನಕಾಯಿ ಮತ್ತು ಒಂದು ಗಡಿಗೆಯನ್ನು ಕಟ್ಟಲಾಗಿರುತ್ತದೆ. ಅದನ್ನು ಮದುವೆಯಾದ ಮರು ದಿವಸ ಕಾರದ ಊಟ (ಮಾಂಸದೂಟ) ಮಾಡಿಸಿ ಬಿಚ್ಚಲಾಗುವುದು.

ಹಿಂದೆ ಚಪ್ಪರವನ್ನು ಬೇವು, ಲಕ್ಕಿ, ಸೊಪ್ಪು ಬಳಸಿ ನಿರ್ಮಿಸುತ್ತಿದ್ದರು. ಇಂದು ಯಾವುದಾದರೂ ಹಸಿರುಸೊಪ್ಪು, ತೆಂಗಿನ ಗರಿಗಳನ್ನು ಬಳಸಿ ನಿರ್ಮಿಸುತ್ತಿರುವರು. ಜೊತೆಗೆ ಶಾಮಿಯಾನ, ವಿದ್ಯುತ್ ದೀಪಾಲಂಕಾರ, ಮೈಕ್‌ಸೆಟ್‌ಗಳ ಬಳಕೆಯನ್ನು ಕಾಣಬಹುದು. ಆದರೆ ಶಾಸ್ತ್ರಕ್ಕಾದರೂ ಚಿಕ್ಕದಾಗಿ ಹಸಿರುಸೊಪ್ಪು ಅಥವಾ ತೆಂಗಿನ ಗರಿಯ ಹಂದರವನ್ನು ಹಾಕುವರು.

ಉತ್ತರ ಕರ್ನಾಟಕದ ಕರ್‌ಕರ್ ಮುಂಡರು ಹಂದರಕ್ಕೆ ಹುಣಸೆಸೊಪ್ಪು ಬಳಸುತ್ತಿರುವುದು ವಿಶೇಷವಾಗಿ ಕಂಡುಬರುತ್ತದೆ. ಆದರೆ ಹಂದರಕ್ಕೆ ತೆಂಗಿನಗರಿ, ಹೊಂಗೆ, ಮಾವಿನ ಸೊಪ್ಪನ್ನು ಬಳಸುತ್ತಿಲ್ಲ. ಪ್ರಾದೇಶಿಕವಾಗಿ ಸಿಗುವ ಪರಿಕರಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡಿರುವುದು ಇಲ್ಲಿ ಕಂಡುಬರುತ್ತದೆ. ಐದರಿಂದ ಒಂಭತ್ತು ಕಂಬಗಳನ್ನು ನೆಡುವುದರ ಮೂಲಕ ಹಂದರ ನಿರ್ಮಿಸಿ. ಪ್ರತಿ ನಾಲ್ಕು ದಿಕ್ಕಿನ ಮೂಲೆಗಂಭಗಳಿಗೆ

ತೆಂಗಿನ ಕಾಯಿಯನ್ನು ಕಟ್ಟುವರು. ಕಾರಣ ತೆಂಗಿನಕಾಯಿ ಕಾಮಧೇನು ಕಲ್ಪವೃಕ್ಷವಾಗಿದ್ದು, ನವ ವಧುವರರಿಗೆ ಸಮೃದ್ಧಿ ಜೀವನ ನೀಡುತ್ತದೆ ಎಂಬ ನಂಬಿಕೆ ಇವರದ್ದಾಗಿದೆ.

ಮದುವೆಯ ದಿನದ ನಂತರ ಬಾಟ್ಗೀ(ನಿಶ್ಚಿತಾರ್ಥ) ಮಾಡಿ, ಸಂಬಂಧಿಕರು ಮತ್ತು ಗುರು–ಹಿರಿಯರ ಒಪ್ಪಿಗೆ ಪಡೆದು ಮಾಂಗಲ್ಯಧಾರಣೆಗೆ ಸೂಚಿಸುವರು. ಈ ಕಾರ್ಯಮುಗಿದ ಮೇಲೆ ಚಪ್ಪರದ ಮಧ್ಯಭಾಗದಲ್ಲಿ ಚೌಕಾಕಾರವಾಗಿ ನಾಲ್ಕು ಚರಿಗೆಗಳನ್ನಿಟ್ಟು(ಕುಂಭಗಳನ್ನು) ಅದಕ್ಕೆ ಮೂರು ದಿನಸಿಯ ದಾರವನ್ನು ಸುತ್ತಿ ಮಧ್ಯದಲ್ಲಿ ವಧುವರರನ್ನು ಒಂದು ಮಣೆಯ ಮೇಲೆ ಕೂರಿಸುವರು. ಇವರುಗಳಿಗೆ ಐದು ಜನ ಮುತ್ತೈದೆಯರು ಅರಿಶಿಣ ನೀರು ಹಾಕಿ ಸ್ನಾನ ಮಾಡಿಸುವರು. ಇದಕ್ಕೆ ಸುರಿಗೆ ಸುತ್ತುವುದು ಎಂದು ಕರೆಯುವರು.

ಪುರಾತನ ಕಾಲದಲ್ಲಿ ಮದುವೆಯ ದಿನದಂದು ಸ್ತ್ರೀಯರ ಅಪಹರಣಗಳು ಹೆಚ್ಚಾಗಿ ನಡೆಯುತ್ತಿದ್ದವಂತೆ. ಆ ಕಾರಣಕ್ಕಾಗಿ ಅದನ್ನು ತಡೆಯುವ ಸಂಕೇತವಾಗಿ ಇಂದು ಸುರಿಗೆ ಸುತ್ತುವ ಆಚರಣೆ ರೂಢಿಯಲ್ಲಿ ಬಂದಿರಬಹುದು.

**ಹಾಲುಗಂಭ ತರುವುದು ಮತ್ತು ಗಂಗೆಪೂಜೆ:**

ಮದುಮಕ್ಕಳಿಗೆ ಅರಿಶಿಣ ನೀರು ಹಾಕಿದ ಮೇಲೆ ಗಂಗೆ ಪೂಜೆಗೆಂದು ಬಾವಿ, ಹಳ್ಳ, ನದಿಗಳ ಕಡೆಗೆ ತೆರಳುವರು. ಈ ಪೂಜೆ ವರನ ಕಡೆಯವರಿಂದ ನಡೆಯುತ್ತದೆ. ವರನ ಮನೆಯ ಹೆಣ್ಣು ಮಗಳು ಈ ಗಂಗೆ ಪೂಜೆಯ ಕೇಂದ್ರ ಬಿಂದು ಆಗಿರುವಳು. ಮುತ್ತೈದೆಯರಿಂದ ಗಂಗಾ ದೇವಿಗೆ ಪೂಜೆ ಮಾಡುವರು. ಎರಡು ಕುಂಭಗಳಲ್ಲಿ ನೀರು ತುಂಬಿಸಿ, ಅವುಗಳಿಗೆ ಕಂಕಣ ಕಟ್ಟುವರು. ಕುಂಭಗಳ ಮುಂದೆ ಹುಲ್ಲು ಮತ್ತು ಸಗಣಿಯಲ್ಲಿ ಕಲ್ಲು ಇಟ್ಟು ಅವುಗಳನ್ನು ಬೆನಕ ಎಂಬ ನಂಬಿಕೆಯಿಂದ ಪೂಜೆಮಾಡುವರು. ಇದರ ನಂತರ ಕನ್ಯೆಯ ಸೋದರಮಾವ ಮತ್ತು ಅವನಿಗೆ ಅಣ್ಣ ತಮ್ಮಂದಿರು ಆಗುವವರು ಹಾಲುಗಂಭ ತರಲು ಹೋಗುವರು. ಪೂರ್ವಿಕರು ಆಲದ ಮರದ ರಂಭೆಯನ್ನು ಅದು ಸಿಗುವವರೆಗೂ ಹುಡುಕುತ್ತಾ ಹೋಗುತ್ತಿದ್ದರು. ಬರೀಕೈಲಿ ಮರಳಿ ಬರುವಂತಿರಲಿಲ್ಲ. ಅಲ್ಲಿಯವರೆಗೂ ಮಹಿಳೆಯರು ಗಂಗೆ ಮೂಲದಲ್ಲಿಯೇ ಕಾಯಬೇಕಿತ್ತು. ಇಂದು ಅದಕ್ಕೆ ಬದಲಾಗಿ ಬನ್ನಿಗಿಡದ ರೆಂಬೆಯನ್ನು ತರುವರು. ಇದು ವರನ ಕಡೆಯವರ ಹಕ್ಕು ಮತ್ತು ಅವರೆ ನಿಭಾಯಿಸಬೇಕು ಎಂಬ ನಿರ್ಬಂಧವಿದೆ. ಕಾರಣ ಕರ್‌ಕರ್ ಮುಂಡರ ಮದುವೆಗಳು ಬಹುತೇಕ ವರನ ಸ್ವಗೃಹದಲ್ಲಿ ನಡೆಯುತ್ತಿದ್ದರಿಂದ ಈ ನಿಷೇಧ ಬಂದಿರಬಹುದಾಗಿದೆ.

ಗಂಗೆ ಪೂಜೆ ಮುಗಿದ ಮೇಲೆ ಕುಂಭವನ್ನು ವರನ ಮನೆಯ ಹೆಣ್ಣುಮಗಳೂ ಮತ್ತು ಹಾಲುಕಂಬವನ್ನು ಕನ್ಯೆಯ ಸೋದರ ಮಾವ ಅಥವಾ ಅವನ ಅಣ್ಣತಮ್ಮಂದಿರು ಹೊರಬೇಕು. ಹೊರುವಾಗ ಹೆಗಲ ಮೇಲೆ ಒಂದು ಕಂಬಳಿ ಹಾಕಿಕೊಂಡು ಅದರ ಮೇಲೆ ಹಾಲುಗಂಭ, ಒಂದು ಕೈಯಲ್ಲಿ ಕತ್ತಿ ಹಿಡಿದುಕೊಂಡು ಮೆರವಣಿಗೆಯ ಮೂಲಕ ಮದುವೆ ಮಂಟಪಕ್ಕೆ ಬರುವಾಗ ಗಂಗೆ ಕುಂಭಾ ಮತ್ತು ಹಾಲುಗಂಭಕ್ಕೆ ರಕ್ಷಣೆಯ ರೂಪದಲ್ಲಿ ನಾಲ್ಕು ಕಡೆಗಳಲ್ಲಿ ಬಟ್ಟೆ ಹಿಡಿದು ನೆರಳು ಮಾಡಿಕೊಂಡು ತರುವರು. ಬಂದ ನಂತರದಲ್ಲಿ ಐದನೇ ವಿಶೇಷ ಕಂಭಕ್ಕೆ ಪೂಜೆ ಮಾಡಿಸಿ ಹಾಲುಗಂಭವನ್ನು ಧಾರೆ ಮಂಟಪಕ್ಕೆ ಎದುರಾಗಿ ನೆಡುವರು. ಗಂಗೆ ಕುಂಭಗಳನ್ನು ಮನೆಯೊಳಗೆ ಒಯ್ದು ಹೊಸಬಟ್ಟೆ ತೊಡಿಸಿ ಧಾನ್ಯಗಳ ರಾಶಿಯ ಮೇಲೆ ಕೂರಿಸುವರು. ಇದು ಹಿರಿಯರನ್ನು ನೆನಪಿಸಿಕೊಳ್ಳುವ ಕಾರ್ಯವೆಂದು ಹೇಳಬಹುದು. ಈ ಕಾರ್ಯವು ಗುರಿಕಾರ ಕುಲಸ್ಥಡು, ಬುದ್ಧಿವಂತ ಗೌಪ್ಯವಾಗಿ ವರನ ವಾರಸುದಾರರ ಮಧ್ಯದಲ್ಲಿ ನೆರವೇರಿಸುವನು. ಶೈವೀಕರಣದ ಪ್ರಭಾವದಿಂದಾಗಿ ಇಂದು ಜಂಗಮರು ಈ ಗುರಿಕಾರನ ಸ್ಥಾನವನ್ನು ಆಕ್ರಮಿಸಿ ಕಾರ್ಯ ನೆರವೇರಿಸುತ್ತಿದ್ದಾರೆ.

ಮದುವೆಗೆ ಬಂದಂತಹ ವಧುವಿನ ಕಡೆಯವರನ್ನು ಎದುರುಗೊಳ್ಳುವುದು ವಿಶೇಷ ಆಚರಣೆಯಾಗಿದೆ. ವಧು-ವರನ ಕಡೆಯವರು ಎದುರು ಬದುರಾಗಿ ನಿಂತು ಅಕ್ಕಿ ಕಾಳುಗಳನ್ನು ಹಾಕುವುದರ ಮೂಲಕ ಬಲಾಬಲ ಪ್ರದರ್ಶಿಸುವರು. ಅಂತಿಮವಾಗಿ ಪರಸ್ಪರ ಬಾಯಿಗೆ ಸಕ್ಕರೆ ಹಾಕಿ ಒಂದಾಗಿ ಕೂಡಿಕೊಳ್ಳುವರು. ನಂತರದಲ್ಲಿ ಅರಿಶಿಣ ನೀರು ಹಾಕಿಸಿಕೊಂಡು ಹೊಸ ಉಡುಪು ಧರಿಸಿದ ವಧು-ವರರನ್ನು ಧಾರೆ ಮಂಟಪಕ್ಕೆ ಕರೆತರಲಾಗುವುದು. ಧಾರೆ ಮಂಟಪಕ್ಕೆ ಬರುವ ಮೊದಲು ನವ ದಂಪತಿಗಳು ಈ ಹಾಲುಗಂಭಕ್ಕೆ ಪೂಜೆ ಮಾಡಿ ಪ್ರದಕ್ಷಣೆ ಮಾಡಿ ಬರಬೇಕು.

ಧಾರೆ ಮಂಟಪಕ್ಕೆ ಬಂದ ವಧುವರರಿಗೆ ಬಾಸಿಂಗವನ್ನು ಕುಲಗುರು, ಬುದವಂತ, ಗುರಿಕಾರನು ಸುತ್ತಿದ ನಂತರ ವಧುವರರನ್ನು ಹಸೆಮಣೆಯ ಮೆಲೆ ಕೂರಿಸುವರು. ಆ ಸ್ಥಳವನ್ನು ಸಗಣಿ ನೀರಿನಿಂದ ವರನ ಸಹೋದರಿಯರು ಸಾರಿಸಿ ಶುಭ್ರಗೊಳಿಸಿರಬೇಕು. ಸಾಯಂಕಾಲಕ್ಕೆ ಆ ಜಾಗದಲ್ಲಿ ಒಂದು ಚಾಪೆಯನ್ನು ಹಾಕಿ ವಧುವರರನ್ನು ಎದುರುಬದರಾಗಿ ಕುಳ್ಳಿರಿಸಿ ಕುಳಿತವರಿಗೆ ಹೆಣ್ಣಿನ ಎಡಗೈಗೆ ಮತ್ತು ಗಂಡಿನ ಬಲಗೈಗೆ ಸೋದರ ಮಾವ ಕಂಕಣ ಕಟ್ಟುವನು. ಇವರ ಮಧ್ಯದಲ್ಲಿ ಎರಡು ಕಳಸ, ಹರಿವಾಣವನ್ನಿಟ್ಟ ಅರಿಶಿಣ ಕೊಂಬಿನ ಕಂಕಣ ಕಟ್ಟುವರು. ಕಳಸ ಹಿಡಿದವಳಿಗೆ ಕಳಸಗತ್ತಿ ಎನ್ನುವರು.

ಆ ಕಳಸಗಳಿಗೆ ಕುಲಸ್ಥರು ಮೂರು ಸಾಲು ಸುರಿಗೆ ಸುತ್ತುವರು. ಇವರಲ್ಲಿನ ಸಕೆ ಬೆಡಗಿನ ಪುರುಷನು ವಧುವರರ ಬಟ್ಟೆಯ ತುದಿಗಳನ್ನು ಗಂಟು ಹಾಕುವನು. ಬಹುಶಃ ಸಕೆ ಬೆಡಗಿನವರು ಉನ್ನತ ಸ್ಥಾನಮಾನ ಹೊಂದಿದ ಸಮುದಾಯದ ಮುಖಂಡರಿರಬಹುದು. ಆದರೆ ಈ ಬೆಡಗು ಇಂದು ಕಂಡುಬರುವುದಿಲ್ಲ. ಬದಲಿಗೆ ಕುಲಸ್ಥರೇ ಈ ಕಾರ್ಯ ಮಾಡುವರು.

ಕರ್‌ಕರ್ ಮುಂಡರಲ್ಲಿ ಎರಡು ಬಾರಿ ಸುರಿಗೆ ಸುತ್ತುವುದನ್ನು ಕಾಣಬಹುದು. ಒಂದು ಅರಿಶಿಣ ನೀರು ಹಾಕುವಾಗ ಹಂದರದ ಸುರಿಗೆಯಾದರೆ, ಎರಡನೆಯದು ಅಕ್ಕಿಕಾಳಿನ ಸುರಿಗೆಯಾಗಿದೆ. ಮದುವೆಯ ಹೆಣ್ಣು ಮಾಂಗಲ್ಯಧಾರಣೆಯ ಸಮಯದಲ್ಲಿ ಬಿಳಿಸೀರೆ ಉಡುವಳು. ಅದನ್ನು ಧಾರೆ ಸೀರೆ ಎನ್ನುವರು. ಇದು ನಿಶ್ಚಿತಾರ್ಥದಲ್ಲಿ ನೀಡಿದ ಸೀರೆಯೂ ಆಗಿರಬಹುದು. ಮಾಂಗಲ್ಯಧಾರಣೆಯ ಸಮಯದಲ್ಲಿ ಗಂಡಿಗೆ ಬಾಸಿಂಗ, ಹೆಣ್ಣಿಗೆ ಮುತ್ತಿನ ದಂಡಿ ಕಂಕಣ ಕಟ್ಟಿದ ಮೇಲೆ ಎದುರು ಬದುರಾಗಿ ನಿಂತುಕೊಳ್ಳುವರು. ಆ ವೇಳೆಗಾಗಲೇ ಅಕ್ಕಿಕಾಳನ್ನು ಹಂಚಲಾಗಿರುತ್ತದೆ. ವರನು ನಿಂತು ತಾಳಿಯನ್ನು ಹಿಡಿದು ತನ್ನ ಬಲಗಾಲಿನ ಹೆಬ್ಬೆರಳನ್ನು ವಧುವಿನ ಎಡಗಾಲಿನ ಹೆಬ್ಬೆರಳಿಗೆ ಒತ್ತಿ, ಎಲ್ಲರಿಗೂ ತೋರಿಸಿ ತಾಳಿ ಕಟ್ಟುವನು. ಎಲ್ಲರೂ ಅಕ್ಕಿಕಾಳು ಹಾಕಿ ಆಶೀರ್ವಧಿಸುವರು. ಅಕ್ಷತೆಯ ನಂತರ ವಧುವಿನ ಕಡೆಯವರು ನವದಂಪತಿಗಳ ಜೀವನಕ್ಕೆ ಬೇಕಾದ ಅಗತ್ಯ ವಸ್ತುಗಳನ್ನು ಒಂದು ಪುಟ್ಟಿಯಲ್ಲಿ ಇಟ್ಟು ಮೆರವಣಿಗೆಯ ಮೂಲಕ ನೀಡುವರು. ಮದುವೆಗೆ ಬಂದವರು ವಧು-ವರರಿಗೆ ಉಡುಗೊರೆ ನೀಡಿದರೆ ಮತ್ತೆ ಕೆಲವರು ವಧು-ವರರ ತಂದೆತಾಯಿಗಳಿಗೆ ಬಟ್ಟೆಯನ್ನು ಉಡುಗೊರೆಯಾಗಿ ನೀಡುವರು. ಉತ್ತರ ಕರ್ನಾಟಕದಲ್ಲಿರುವ ಈ ಸಮುದಾಯದವರ ಮದುವೆಗಳಲ್ಲಿ ಮದುವೆಗೆ ಬಂದ ಎಲ್ಲಾ ಮಹಿಳೆಯರಿಗೂ ಹಸಿರು ಬಳೆಗಳನ್ನು ತೊಡಿಸುವುದು ವಿಶೇಷವಾಗಿದೆ. ಮದುವೆಗೆ ಬಂದ ಎಲ್ಲಾ ಮಹಿಳೆಯರಿಗೆ ಹಸಿರು ಬಳೆ ತೊಡಿಸಿದ ಬಳೆಗಾರನಿಗೆ ಅದರ ಎಲ್ಲಾ ಖರ್ಚನ್ನು ವರನೇ ಭರಿಸಬೇಕು. ಇದಾದ ಮೇಲೆ ದಂಪತಿಗಳಿಗೆ ಕುಲಸ್ಥ, ಗುರಿಕಾರ ಅಥವಾ ಜಂಗಮ ಒಂದು ಅರಿವಾಣ ಅಥವಾ ಪಾತ್ರೆಯಲ್ಲಿ ಹಾಲು ತುಪ್ಪವನ್ನು ಹಾಕಿ ಉಂಗುರ ಹುಡುಕುವ ಆಟ ಆಡಿಸುವನು. ನಂತರ ಬಂದವರೆಲ್ಲ ಮದುವೆ ಊಟ ಮಾಡುವರು.

ಮದುವೆಯ ದಿನ ಸಿಹಿ ಅಡುಗೆಯನ್ನು ಮಾಡಿಸಲಾಗುವುದು. ಕೆಲವೊಂದು ಕಡೆ ರೊಟ್ಟಿ, ಚಪಾತಿ, ಪಲ್ಯ, ಹುಗ್ಗಿ, ಲಾಡು ಮಾಡಿಸಲಾಗುತ್ತದೆ. ಮದುವೆಯ ಮಾರನೆಯ ದಿನ ಹಂದರಕ್ಕೆ ಕಟ್ಟಿದ ಗಡುಗೆಯನ್ನು ಬಿಚ್ಚುವಾಗ ಮಾಂಸದ ಅಡುಗೆಯನ್ನು

ಮಾಡಿಸಿ ಮದ್ಯ ಸೇವಿಸಿ ಆನಂದಿಸುವರು. ಮದುವೆಯಾಗಿ ಆರನೇ ದಿನ ವಧುವರರ ಬಾಸಿಂಗವನ್ನು ಗಂಗೆ ಮೂಲದಲ್ಲಿ ಬಿಟ್ಟು ಬರಲಾಗುತ್ತದೆ. ನಂತರ ಪಂಚಾಂಗದಿಂದ ಮಹೂರ್ತವನ್ನು ಕೇಳಿಸಿ ಶುಭ ದಿನದಂದು ಪ್ರಸ್ತದ ಕಾಯ ಮಾಡುವರು.

ಕರ್‌ಕರ್ ಮುಂಡರಲ್ಲಿ ಕೂಡಿಕೆ ಎಂದು ಕರೆಯುವ ಮರು ವಿವಾಹ ಪದ್ಧತಿಯನ್ನು ಕಾಣಬಹುದು. ಈ ಹೆಸರಿನಲ್ಲಿ ವಿಧವಾ ವಿವಾಹಗಳು, ಮಿಶ್ರ ಜಾತಿಯ ವಿವಾಹಗಳು, ವಿವಾಹ ವಿಚ್ಛೇದಿತ ಗಂಡು ಹೆಣ್ಣುಗಳು ತಮಗಿಷ್ಟ ಬಂದವರನ್ನು ಸಂಗಾತಿಗಳನ್ನಾಗಿ ಆಯ್ಕೆ ಮಾಡಿಕೊಳ್ಳುವ ಸಂದರ್ಭಗಳು ಮತ್ತು ಗಂಡ ಬಿಟ್ಟ ಹೆಣ್ಣು ಹೆಂಡತಿ ಬಿಟ್ಟ ಗಂಡ ಮೊದಲಾದವರ ವಿವಾಹಗಳು ನಡೆಯುವವು. ಈ ರೀತಿಯ ಕೂಡಿಕೆ ವಿವಾಹವು ರಾತ್ರಿಯ ವೇಳೆಯಲ್ಲಿ ನಡೆಯುತ್ತವೆ. ಕುಲಸ್ಥರ ನೇತೃತ್ವದಲ್ಲಿ ನಡೆಯುವ ಈ ವಿವಾಹದಲ್ಲಿ ಮುತ್ತೈದೆಯರು ಭಾಗವಹಿಸುವಂತಿಲ್ಲ. ಬದಲಾಗಿ ಕನ್ಯೆಯರು ಪಾಲ್ಗೊಂಡು ಶಾಸ್ತ್ರ ಮಾಡುವರು. ಇಂತಹ ಕೂಡಿಕೆಗಳಲ್ಲಿ ಕನ್ಯೆಯರು ಭಾಗವಹಿಸುವುದರಿಂದ ಕನ್ಯೆಗೆ ಬೇಗ ಮದುವೆ ಆಗುತ್ತದೆ ಎಂಬ ನಂಬಿಕೆಯಿಂದ ದೂರದ ಊರಿನ ಕನ್ಯೆಯರು ಬಂದು ಭಾಗವಹಿಸುವರು. ಹೆಚ್ಚಿನ ಶಾಸ್ತ್ರ ಸಂಪ್ರದಾಯಗಳು ನಡೆಯದೆ ಸರಳ ರೀತಿಯಲ್ಲಿ ಅರಿಶಿಣ ಕುಂಕುಮ ಹಚ್ಚಿ, ಹೂ ಮುಡಿಸಿ, ಮುತ್ತೈದೆಯನ್ನಾಗಿ ಮಾಡಿ ಪರಸ್ಪರ ಒಪ್ಪಿಗೆಯ ನಂತರ ವಿವಾಹ ಜರುಗುತ್ತದೆ. ಒಂದು ವೇಳೆ ವಿಜಾತಿಯ ಕೂಡಿಕೆಯ ಸಂದರ್ಭದಲ್ಲಿ ಸ್ವ ಜಾತಿಗೆ ಸ್ವೀಕರಿಸಿಕೊಳ್ಳುವ ಶಾಸ್ತ್ರದೊಂದಿಗೆ ಕುಲಗುರುಗಳ ಆದೇಶದ ಮೇರೆಗೆ ನಡೆಯುತ್ತವೆ. ಈ ಸಂದರ್ಭದಲ್ಲಿ ಆರರಿಂದ ಹದಿನಾರು ರೂಪಾಯಿಗಳನ್ನು ಸಮಾಜಕ್ಕೆ ತಪ್ಪು ದಂಡ ನೀಡಬೇಕಿತ್ತು. ಆದರೆ ಇಂದು ಕಣ್ಮರೆಯಾಗಿದೆ. ಈ ರೀತಿಯ ವಿವಾಹಗಳು ಅಪರೂಪಕ್ಕೆ ನಡೆಯುತ್ತವೆ.

ಕರ್‌ಕರ್ ಮುಂಡರಲ್ಲಿ ವಿವಾಹಗಳು ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದಲ್ಲಿ ಭಿನ್ನತೆಯಿಂದ ಕೂಡಿವೆ. ಆದರೆ ಆಚರಣೆಗಳು ಬದಲಾಗಿ ಕುಲಸ್ಥರ ಸ್ಥಾನದಲ್ಲಿ ಜಂಗಮರ ಆಹ್ವಾನ ಕಾಣುತ್ತೇವೆ. ಹಿಂದೆ ತಿಂಗಳುಗಟ್ಟಲೆ ನಡೆಯುತ್ತಿದ್ದ ವಿವಾಹಗಳು ಇಂದು ಒಂದು ದಿನಕ್ಕೆ ಬಂದು ನಿಂತಿವೆ. ಆಧುನಿಕತೆಯ ಪ್ರಭಾವದಿಂದಾಗಿ ಶಾಮಿಯಾನ ಧ್ವನಿವರ್ಧಕಗಳು ಬಂದಿವೆ. ಕರ್‌ಕರ್ ಮುಂಡರ ವಿವಾಹ ಆಚರಣೆಗಳಲ್ಲಿ ಬಾಸಿಂಗ, ಮುತ್ತಿನ ದಂಡೆ ಕಟ್ಟುವುದು, ಬಿಳಿ ಧಾರೆ ಸೀರೆ ಉಡುವುದು, ಹಂದರದ ಸುರಿಗೆ, ಅಕ್ಕಿನ ಕಾಳಿನ ಸುರಿಗೆ, ಹಾಲುಗಂಭ ತರುವುದು ಎಲ್ಲಾ ಆಚರಣೆಗಳು ಬೇಡ ಸಮುದಾಯದಲ್ಲಿ ನಡೆಯುವ ಆಚರಣೆಗಳಿಗೆ ಅತ್ಯಂತ ಸಮೀಪವಾಗಿರುವುದರಿಂದ

ಈ ಸಮುದಾಯವು ಬೇಡ ಸಮುದಾಯದಿಂದ ಬೇರ್ಪಡೆಗೊಂಡಿರಬಹುದೆಂದು ಹೇಳಬಹುದು.

**ಶವಸಂಸ್ಕಾರ:** ಹುಟ್ಟಿದ ಮೇಲೆ ಪ್ರತಿಯೊಬ್ಬರಿಗೂ ಸಾವು ಖಚಿತ ಎಂಬಂತೆ ಸೃಷ್ಟಿಯಲ್ಲಿ ಹುಟ್ಟಿದ ಪ್ರತಿಯೊಂದು ಜೀವರಾಶಿಯೂ ಒಂದಿಲ್ಲೊಂದ ದಿನ ಸಾಯಲೇ ಬೇಕು. ಸಾವು ಸಂಭವಿಸದ ಅಮರರು ದೇವತೆಗಳು ಎಂಬುದು ಭಾರತೀಯರ ನಂಬಿಕೆಯಾಗಿದ್ದು ಇದೊಂದು ಅಲೌಖಿಕ ಪ್ರಪಂಚದ ನಂಬಿಕೆ. ಭಾರತೀಯ ಸಂಸ್ಕೃತಿಯಲ್ಲಿ ಹಲವಾರು ಸಂಸ್ಕೃತಿಗಳು ಅಂತರ್ಗತವಾಗಿವೆ. ಆದರೆ ಇಂತಹ ಮಿಳಿತವಾದ ಸಂಸ್ಕೃತಿಗಳು ಅವಜ್ಞೆಯಿಂದ ಕೂಡಿಸುವುದು ವಿಪರ್ಯಾಸ.

ಅವಿಭಕ್ತ ಕುಟುಂಬ ವ್ಯವಸ್ಥೆ ಭಾರತೀಯ ಸಮಾಜದ ಆಧಾರ ಸ್ತಂಭವಾಗಿದೆ. ಬಂಧುತ್ವ, ಜಾತಿವ್ಯವಸ್ಥೆ ಎಂದು ಹೇಳಲಾಗುತ್ತದೆ. ಈ ಮೂರು ಪ್ರಕ್ರಿಯೆಗಳಲ್ಲಿ ಮಾನವನ ಜೀವನಾರ್ವತಕ ಆಚರಣೆಗಳು ನಡೆಯುತ್ತವೆ. ಸಾಮಾಜಿಕವಾಗಿ ನೋಡಿದಾಗ ಹುಟ್ಟಿದ ಜೀವಿ ಸಾಯುವವರೆಗೂ ಸಾಮಾಜೀಕರಣ ಪ್ರಕ್ರಿಯೆಗೆ ಒಳಗಾಗುತ್ತಾನೆ. ಮಾಂಸದ ಮುದ್ದೆಯಂತಿರುವ ಮಗು ಸಾಮಾಜಿಕ ಜೀವಿಯಾಗುವ ಹಾದಿಯು ಮರಣದಿಂದ ಕೊನೆಗೊಳ್ಳುತ್ತದೆ. ಮರಣ ಹೊಂದಿದ ನಂತರ ದೇಹ ಮತ್ತು ಆತ್ಮವನ್ನು ಅನೇಕ ಕ್ರಿಯಾ ವಿಧಿಗಳಿಂದ ಅಂತ್ಯಸಂಸ್ಕಾರ ಮಾಡಲಾಗುವುದು.

ಜೀವವಿರುವ ದೇಹ, ಆತ್ಮದಿಂದ ಬೇರ್ಪಟ್ಟ ನಂತರ ಶವವಾಗಿ ಬಿಡುತ್ತದೆ. ದೇಹದಿಂದ ಬೇರ್ಪಟ್ಟ ಆತ್ಮ ದೈವಸಂಭೂತವಾಗುವುದು. ಭಾರತೀಯರ ಅಲೌಖಿಕ ದರ್ಶನಗಳಲ್ಲಿ ಆತ್ಮ-ಪ್ರೇತಾತ್ಮ, ಜನ್ಮ-ಪುನರ್‌ಜನ್ಮ, ಸ್ವರ್ಗ-ನರಕದ ಪರಿಕಲ್ಪನೆಗಳು ಅವಿನಾಭಾವ ಸಂಬಂಧ ಹೊಂದಿವೆ.

ವ್ಯಕ್ತಿ ಸವಾಜ ಜೀವಿಯಾಗುವುದಕ್ಕಿಂತ ಮೊದಲು ಸಮುದಾಯದ ಜೀವಿಯಾಗುತ್ತಾನೆ. ಸಮುದಾಯದಲ್ಲಿ ವ್ಯಕ್ತಿ ಜೀವಿತದ ಅವಧಿಯಲ್ಲಿ ವಿಶಿಷ್ಠ ಪಾತ್ರಗಳನ್ನು ನಿರ್ವಹಿಸಿ ಅನೇಕ ಕೊಡುಗೆಗಳನ್ನು ನೀಡುತ್ತಾ ಬಾಳುವನು. ಅಕಸ್ಮಾತ್ ಅವನು ಸಮುದಾಯಕ್ಕೆ ಏನೂ ಹಿತಕರ ಕಾರ್ಯಮಾಡದಿದ್ದರೂ ಸಮುದಾಯ ಅವನಿಗೆ ಶವಸಂಸ್ಕಾರ ಕ್ರಿಯಾ ವಿಧಿಯ ಮೂಲಕ ಕೃತಜ್ಞತೆ ಸಲ್ಲಿಸುತ್ತದೆ. ಕಾರಣ ಜೀವಿತಾವಧಿಯಲ್ಲಿ ಮಾನವ ನಾನು, ನನ್ನದು, ನಮ್ಮವರು ಎಂಬ ಭಾವನೆಗಳಿಂದ ವ್ಯಕ್ತಿತ್ವ ರೂಪಿಸಿಕೊಂಡು ಸಮಾಜದ ಒಂದು ಕಣವಾಗಿ ಸೃಷ್ಟಿಯಾಗಿರುತ್ತಾನೆ. ಆ ಒಂದು ಕಣ ನಾಶವಾದಾಗ

ಸಮುದಾಯ ದುಃಖಿತವಾಗುತ್ತದೆ. ಅದಕ್ಕೆ ಶವಸಂಸ್ಕಾರ ಎಂಬ ಕ್ರಿಯಾ ವಿಧಿಯು ದೇಹ ಮತ್ತು ಆತ್ಮಕ್ಕೆ ಒಳ್ಳೆಯದಾಗಲಿ ಎಂಬ ಆಶಯದೊಂದಿಗೆ ಸಂಸ್ಕಾರವನ್ನು ಮಾಡಲಾಗುತ್ತದೆ. 'ಬ್ರಾಹ್ಮಣನಾಗಿ ಹುಟ್ಟಬೇಕು, ಮುಸ್ಲಿಂನಾಗಿ ಸಾಯಬೇಕು' ಎಂಬ ನಾಣ್ಣುಡಿಯಂತೆ ಬ್ರಾಹ್ಮಣರ ಸಂಸ್ಕೃತಿಯಲ್ಲಿ ಹುಟ್ಟಿದ ಮಗುವಿಗೆ ಅತ್ಯಂತ ಸಂತೋಷದಿಂದ ಅನೇಕ ಕ್ರಿಯಾ ವಿಧಿಗಳಿಂದ ಮನುಕುಲಕ್ಕೆ ಆಹ್ವಾನಿಸಲಾಗುತ್ತದೆ. ಮುಸ್ಲಿಂ ಸಂಸ್ಕೃತಿಯು ದೇಹವನ್ನು ನಿಷ್ಕಲ್ಮಶಗೊಳಿಸಿ ಆತ್ಮದ ಜೊತೆಗೆ ದೇಹವು ಸ್ವರ್ಗ ಸೇರಲಿ ಎಂದು ಮರಣ ವಿಧಿಗೆ ಹೆಚ್ಚಿನ ಆದ್ಯತೆ ನೀಡುತ್ತದೆ.

ಶವಸಂಸ್ಕಾರ ಪ್ರತಿಯೊಬ್ಬ ಮಾನವನಿಗೆ ಇಹಲೋಕದಿಂದ ಪರಲೋಕಕ್ಕೆ ಕಳುಹಿಸುವ ಅಂತಿಮ ನಮನವಾಗಿದೆ. ಭಾರತೀಯ ಸಂಸ್ಕೃತಿಯ ಶವಸಂಸ್ಕಾರವನ್ನು ವರ್ಗೀಕರಣ ಮಾಡಿದಾಗ ದೇಹಕ್ಕೆ ಸಂಬಂಧಿಸಿದ ಸಂಸ್ಕಾರ, ಆತ್ಮಕ್ಕೆ ಸಂಬಂಧಿಸಿದ ಸಂಸ್ಕಾರ ಎಂದು ತಿಳಿಯಬಹುದಾಗಿದೆ. ವ್ಯಕ್ತಿಯು ಸತ್ತ ನಂತರದಿಂದ ಹೂಳುವವರೆಗಿನ ಸಂಸ್ಕಾರವನ್ನು ದೇಹಕ್ಕೆ ಸಂಬಂಧಿಸಿದ ಸಂಸ್ಕಾರವೆಂತಲೂ, ಹೂಳಿದ ನಂತರ ಮೂರು ದಿನ ಮತ್ತು ಒಂಬತ್ತು, ಹನ್ನೊಂದು ದಿನದ ಸಂಸ್ಕಾರವನ್ನು ಆತ್ಮಕ್ಕೆ ಸಂಬಂಧಿಸಿದ ಸಂಸ್ಕಾರವೆಂತಲೂ ಕರೆಯಬಹುದು. ಇಂತಹ ಸಂಸ್ಕಾರಗಳು ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುತ್ತವೆ. ಅದರಲ್ಲಿ ಕರ್‌ಕರ್ ಮುಂಡ ಸಮುದಾಯದ ಶವಸಂಸ್ಕಾರವು ಹೊರತಾಗಿಲ್ಲ.

**ಕರ್‌ಕರ್‌ಮುಂಡರ ಶವಸಂಸ್ಕಾರ ಪದ್ಧತಿ**

ಕರ್‌ಕರ್ ಮುಂಡರಲ್ಲಿ ಬೆಡಗಿನ ಆಧಾರಿತವಾಗಿ ಎರಡು ಬಗೆಯಲ್ಲಿ ಶವಸಂಸ್ಕಾರವನ್ನು ಕಾಣುತ್ತೇವೆ. ಶವವನ್ನು ಮಲಗಿಸಿಕೊಂಡು ಸಿದಿಗೆಯ ಮೂಲಕ ಹೊತ್ತೊಯ್ಯುವುದು, ಮತ್ತು ಶವವನ್ನು ಮಲಗಿಸಿ ಹೂಳುವುದು ಇದನ್ನು ಶೆಟ್ಟಿಯೋಳ್, ಮಂದ್ಲರು ಬೆಡಗಿಗೆ ಅಣ್ಣತಮ್ಮಂದಿರಾಗುವವರು ನೆರವೇರಿಸುವರು. ಯರಗೊಂಡ್ಲೋಳ್ ಮತ್ತು ಗುಂಜಿಯೋಳ್ ಬೆಡಗಿಗೆ ಅಣ್ಣತಮ್ಮಂದಿರಾಗುವವರು ಶವವನ್ನು ಚಾಳಿಮಾಡಿ ಅಂದರೆ ಎರಡು ಕೋಲುಗಳಿಗೆ ಕಂಬಳಿಯನ್ನು ಹೊಲಿದು ಜೋಳಿಗೆ ತರಹ ಮಾಡಿ ಅದರಲ್ಲಿ ಕೂರಿಸಿ ನಾಲ್ಕು ಜನ ಕೈಯಲ್ಲಿ ಹಿಡಿದುಕೊಂಡು ಹಿಂದೆ ತಲೆಯನ್ನು ಮೊಮ್ಮಗ ಅಥವಾ ಹಿರಿಯ ಮಗ ಹಿಡಿದುಕೊಂಡು ಹೋಗಿ ಶವ ಕೂರುವ ರೀತಿಯಲ್ಲಿ ಗುದ್ದು(ಕುಳಿ, ಕುಣಿ) ತೆಗೆದು ಕೂರಿಸಿ ಹೂಳುವುದು.

ಕರ್‌ಕರ್ ಮುಂಡರಲ್ಲಿ ಸಾವು ಸಂಭವಿಸಿದಾಗ ಹಿರಿಯರೆಲ್ಲ ಸೇರಿಕೊಂಡು ಸತ್ತ ವ್ಯಕ್ತಿಯ ಬಂಧುಗಳಿಗೆಲ್ಲ ಸುದ್ದಿ ಮುಟ್ಟಿಸುವರು. ಈ ಕಾರ್ಯವನ್ನು ಜವಾಬ್ದಾರಿಯುತವಾಗಿ ನಿರ್ವಹಿಸಬೇಕಾದದ್ದು ಗುರಿಕಾರನ ಅಥವಾ ಕುಲಸ್ಥಡು ಎಂಬ ವ್ಯಕ್ತಿಯು ಕರ್ತವ್ಯವಾಗಿರುತ್ತದೆ. ಆಧುನಿಕ ಸಂದರ್ಭದಲ್ಲಿ ದೂರವಾಣಿ(ಮೊಬೈಲ್) ಮೂಲಕ ಸುದ್ದಿ ಮುಟ್ಟಿಸಲಾಗುತ್ತಿದೆ. ನೆಂಟರಿಷ್ಟರು ಬರುವವರೆಗೆ ಶವಸಂಸ್ಕಾರ ಮಾಡುವಂತಿಲ್ಲ. ಶವವನ್ನು ಸತ್ತ ಸ್ಥಳದಿಂದ ಹೊರಗಡೆ ತಂದು ಇಡಲಾಗುತ್ತದೆ. ಮರುದಿನ ಶವಸಂಸ್ಕಾರ ಮಾಡುವ ಸಂದರ್ಭದಲ್ಲಿ ಇಡೀ ರಾತ್ರಿ ಸಮುದಾಯದವರು ದೈವಕ್ಕೆ ಸಂಬಂಧಿಸಿದ ಹಾಡುಗಳನ್ನು ಹಾಡುತ್ತಾ ಭಜನೆ ಮಾಡುವರು.

ಸಂಬಂಧಿಗಳೆಲ್ಲ ಬಂದ ನಂತರ ಶವವನ್ನು ಒಯ್ಯಲು ಚಟ್ಟ ಅಥವಾ ಜಾಳಿಯನ್ನು ಸಿದ್ಧಪಡಿಸಲಾಗುತ್ತದೆ. ಆಗ ಶವವನ್ನು ಶುಭ್ರಗೊಳಿಸುವರು. ಸ್ತ್ರೀಯಾದರೆ ಅರಿಶಿಣ ಕುಂಕುಮ ಹಚ್ಚಿ ಸ್ನಾನ ಮಾಡಿಸುವರು ನಂತರದಲ್ಲಿ ಶವಕ್ಕೆ ಬಟ್ಟೆ(ಬಿಳಿಯಬಟ್ಟೆ)ಯನ್ನು ತಂದು ಅದರ ಮೇಲೆ ಹಾಸುವರು. ವಾಸನೆ ಬಾರದಂತೆ ಸುಗಂಧ ದ್ರವ್ಯ(ನೀಲಗಿರಿಎಣ್ಣೆ)ಯನ್ನು ಸಿಂಪಡಿಸುವರು. ಮೂಗಿನಿಂದ ರಕ್ತ ಸ್ರಾವ ಆಗಬಾರದೆಂದು ಮೂಗಿನ ಸೊಳ್ಳೆಗಳಿಗೆ ಹತ್ತಿಯನ್ನಿಟ್ಟು, ಹೆಣವನ್ನು ಚಟ್ಟ ಅಥವಾ ಜಾಳಿಯಲ್ಲಿ ಮಲಗಿಸುವರು. ಶವದ ಕೈಗಳನ್ನು ಎದೆಯ ಮೇಲೆ ಇಟ್ಟು ಹಾಗೂ ಕಾಲುಗಳ ಹೆಬ್ಬೆರಳುಗಳಿಗೆ ದಾರ ಕಟ್ಟುವರು. ಎಲೆ ಅಡಿಕೆಯನ್ನು ಮತ್ತೆ ಕೆಲವು ಸಂದರ್ಭದಲ್ಲಿ ಅಕ್ಕಿಕಾಳನ್ನು ಹಾಕುವರು. ಉತ್ತರ ಕರ್ನಾಟಕ ಭಾಗದಲ್ಲಿ ಹೆಣದ ಬಾಯಿಗೆ ಬಂಗಾರದ ತುಣಕನ್ನು ಹಾಕಿ ಒಯ್ಯುವರು. ಶವಯಾತ್ರೆಯು ಹೊಲೆಯರ ತಮಟೆ ವಾದ್ಯದ ಮೂಲಕ ಸಾಗುತ್ತದೆ. ಇಲ್ಲಿ ಶವದ ಮೇಲೆ ಕಳ್ಳೆಪುರಿ, ಬಿಡಿ ಹೂ, ಚಿಲ್ಲರೆ ಹಣವನ್ನು ಎಸೆಯುವರು. ಮನೆ ಮತ್ತು ಸ್ಮಶಾನದ ಮಧ್ಯದಲ್ಲಿ ಶವಯಾತ್ರೆ ನಿಲ್ಲಿಸಿ ಕಿಚ್ಚೂ(ಮಡಿಕೆಯಲ್ಲಿ ಧಾನ್ಯಹಾಕಿ ಬೇಯಿಸಲಾಗುತ್ತದೆ)ನ್ನು ಒಡೆದು ಅದಕ್ಕೆ ಎಲ್ಲರೂ ಎಡಗೈಯಲ್ಲಿ ಕಲ್ಲು ಹಾಕಿ ಮುನ್ನಡೆಯುವರು. ಇದಕ್ಕೆ ದಿಂಪಡಗಾಲು ಎಂದು ಕರೆಯುವರು. ಇದರಿಂದ ಆತ್ಮ ಪ್ರೇತಾತ್ಮವಾಗಿ ಮನೆಗೆ ಬರದೆ ಸ್ಮಶಾನಕ್ಕೆ ಹೋಗುತ್ತದೆ ಎಂಬ ನಂಬಿಕೆಯಿಂದ ಈ ರೀತಿ ಮಾಡುವರು. ಶವಯಾತ್ರೆಗೆ ಮುಂಚಿತವಾಗಿ ಸ್ಮಶಾನದಲ್ಲಿ ಗುದ್ದು ಅಥವಾ ಕುಣಿಯನ್ನು ತೋಟಿಗಳು ತೊಡುವರು, ಆ ವೇಳೆಗಾಗಲೇ ಸಿದ್ಧವಾಗಿದ್ದ ಕುಣಿಯ ಹತ್ತಿರ ಶವವನ್ನು ಕೆಳಗಿಳಿಸುವರು. ಅಲ್ಲಿ ಗಂಡ ಸತ್ತಿದ್ದರೆ ಹೆಣ್ಣಿನ ಬಳೆ ಹೊಡೆಯುವ ಶಾಸ್ತ್ರ; ಅಂದರೆ ಮುತ್ತೈದೆ ತನದ ಸಂಕೇತಗಳನ್ನು ತೆಗೆಯುವ ಶಾಸ್ತ್ರವನ್ನು ಸ್ತ್ರೀಯರು

ಮಾಡುವರು. ನಂತರ ಶವವನ್ನು ಕುಣಿಯಲ್ಲಿ ಇಟ್ಟು ಎಲ್ಲರೂ ಹಿಡಿ ಮಣ್ಣನ್ನು ಹಾಕುವರು. ತೋಟಿಗಳು ಪೂರ್ತಿ ಮಣ್ಣು ಎಳೆಯುವರು.

ಮಣ್ಣು ಮುಚ್ಚಿದ ನಂತರ ತಲೆಯ ಬದಿಗೆ ಅವರೆ ಗಿಡ, ಲಕ್ಕಿಗಿಡ, ತೆಂಗಿನ ಕಾಯಿಯನ್ನು ನೆಡುವರು. ಶವಸಂಸ್ಕಾರ ಮುಗಿದ ಮೇಲೆ ಮನೆಗೆ ಹಿಂತಿರುಗುವ ವೇಳೆಗೆ ವ್ಯಕ್ತಿ ಸತ್ತ ಸ್ಥಳವನ್ನು ಸಗಣಿಯಿಂದ ಸಾರಿಸಿ ಅಲ್ಲಿ ದೀಪ ಹಚ್ಚಿಡುವರು. ಮಣ್ಣಿಗೆ ಹೋದವರೆಲ್ಲ ಅದನ್ನು ನೋಡಿ ಗರಿಕೆ ಹುಲ್ಲನ್ನು ಹಾಕಿ ಹೋಗುವರು. ಚಾಳಿ ಅಥವಾ ಸಿದಿಗೆ ಹೊತ್ತ ಜನರು ಮನೆಯ ಹೊರಗಡೆ ನಿಂತು ಬೆಲ್ಲದ ನೀರಿನಿಂದ ಬಾಯಿ ತೊಳೆದು ಕೊಳ್ಳುವರು. ಇದನ್ನು ಬಾಯಿ ತೊಳೆಸುವುದು ಎನ್ನುವರು. ಈ ಹಿಂದಿನ ಸಂದರ್ಭಗಳಲ್ಲಿ ಶವಸಂಸ್ಕಾರ ಮುಗಿದ ನಂತರ ಸಾರಾಯಿ ಅಂಗಡಿಗೆ ಹೋಗಿ ಕುಡಿದು ನಂತರ ಅದರಲ್ಲಿನ ಒಂದೆರೆಡು ಹನಿಗಳನ್ನು ತಮ್ಮ ತಮ್ಮ ತಲೆ ಮೇಲೆ ಹಾಕಿಕೊಂಡು ಸೂತಕವನ್ನು ಕಳೆದುಕೊಳ್ಳುತ್ತಿದ್ದರು.

ಮೂರನೇ ದಿನದಲ್ಲಿ ನಡೆಯುವ ಕಾರ್ಯವನ್ನು ಚಿನ್ನದಿನಂ ಎಂದು ಕರೆಯುವರು. ಸತ್ತವರಿಗೆ ಪ್ರಿಯವಾದ ಅಡುಗೆ, ವಸ್ತುಗಳು ಸರಾಯಿ, ಬೀಡಿ ಇತ್ಯಾದಿಗಳನ್ನು ಗುಡ್ಡೆಯ ಮುಂಭಾಗದಲ್ಲಿ ಇಟ್ಟು ಬರುವರು. ಇದನ್ನು ಕೂಳು ಎನ್ನುವರು. ಕೂಳನ್ನು ಕಾಗೆ ಮುಟ್ಟಿದರೆ ಅವನಿಗೆ/ಅವಳಿಗೆ ಯಾರ ಮೇಲು ಆಸೆ ಇಲ್ಲ. ಸ್ವರ್ಗಕ್ಕೆ ಹೋಗುವಳು/ನು. ಕಾಗೆ ಮುಟ್ಟೋವವರೆಗೂ ಅವಳ/ಅವನ ಒಡನಾಡಿಗಳಿಂದ ನಿರಂತರ ಪೂಜೆ ಮಾಡಿಸುವರು. ಒಂದು ವೇಳೆ ಕಾಗೆ ಮುಟ್ಟದೇ ಇದ್ದರೆ ಹಸುವನ್ನು ಹಿಡಿದುಕೊಂಡು ಬಂದು ಹಸುವಿನಿಂದ ಕೂಳನ್ನು ತಿನ್ನಿಸಿದರೆ ಅವರ ಆತ್ಮ ಸ್ವರ್ಗಕ್ಕೆ ಹೋಗುವುದು ಎಂಬ ನಂಬಿಕೆ ಇದೆ. ಆದರೆ ಶೆಟ್ಟಿಯೋಳ್ ಬೆಡಗಿನವರು ಗುಡ್ಡೆ ಕೂಳನ್ನು ತಾವೇ ತಿಂದು ಬರುವರು. ಮೂರು ದಿನದ ಕಾರ್ಯದ ನಂತರದಲ್ಲಿ ಸ್ವಕುಲಸ್ಥರು ಚರ್ಚಿಸಿ ಪೆದ್ದದಿನವನ್ನು ನಿಶ್ಚಿಯಿಸುವರು. ಈ ದಿನವು ಒಂಬತ್ತು ಅಥವಾ ಹನ್ನೊಂದನೇ ದಿನದಂದು ನಿಗದಿಪಡಿಸುವರು. ಆ ದಿನದ ಆತ್ಮದ ಸಂಸ್ಕಾರದ ಆಚರಣೆಯಲ್ಲಿ ವ್ಯಕ್ತಿ ಸತ್ತ ಸ್ಥಳದಲ್ಲಿ ಒಂದು ಗುಂಡಿಯನ್ನು ತೊಡಿ ಅದರ ತುಂಬ ನೀರನ್ನು ಹಾಕಲಾಗುವುದು. ಅದರಲ್ಲಿ ಜೀವಂತ ಹಂದಿಯ ತಲೆಯನ್ನು ಮುಳುಗಿಸಿ ಸಾಯಿಸುವರು. ನಂತರ ಅದರ ಮಾಂಸವನ್ನು ಅಡುಗೆ ಮಾಡಿ ನೈವೇದ್ಯಕ್ಕೆ ಇಡುವರು. ಸತ್ತ ಹಂದಿಯ ಜೊತೆಗೆ ಆತ್ಮಕ್ಕೆ ಪ್ರಿಯವಾದ ವಸ್ತುಗಳನ್ನಿಟ್ಟು ಬಾಗಿಲು ಮುಚ್ಚಿ ಹೊರಗಡೆ ಬರುವರು. ಮನೆಯ ಮುಂಭಾಗದಲ್ಲಿ ಜೀಗರು, ಮನೆಯ ಹಿಂಭಾಗದಲ್ಲಿ ಅಣ್ಣತಮ್ಮಂದಿರು

ನಿಂತುಕೊಳ್ಳುವರು. ಮೂರು ಸಲ ಬೀಗರು ಏನಪ್ಪ ನಿಮ್ಮ ಅಣ್ಣತಮ್ಮಂದಿರೆಲ್ಲಾ ಕೂಡಿಕೊಂಡಿರಾ? ಎಂದು ಕೇಳುವರು. ಅದಕ್ಕೆ ನಾವು ಕೂಡಿಕೊಂಡಿವಿ ಎಂದು ಅಣ್ಣ ತಮ್ಮಂದಿರು ಹೇಳುವರು. ಇದರ ನಡುವೆ ದಾಸಯ್ಯ ಯಾರಾದರೂ ಯಾರಿಗೂ ಕಾಣದಂತೆ ಒಳಗೆ ಹೋಗಿ ಅಲ್ಲಿನ ಪದಾರ್ಥ ಅಥವಾ ಧಾನ್ಯದ ರಾಶಿಗಳನ್ನು ಮುಟ್ಟಿ ಬಂದಿರುತ್ತಾರೆ. ಎಲ್ಲರೂ ಒಳಗೆ ಹೋಗಿ ನೋಡಿ ಆತ್ಮ ಇದನ್ನು ಮುಟ್ಟಿದೆ, ಇದು ಅವನ ಹೆಜ್ಜೆ ಗುರುತು ಎಂಬ ನಂಬಿಕೆ ಹೊಂದಿರುವರು. ಈ ನಂಬಿಕೆಯು ದೇಹಕ್ಕೆ ಸಾವಿದೆ, ಆತ್ಮಕ್ಕಿಲ್ಲ ಎಂಬುದನ್ನು ಸೂಚಿಸುತ್ತದೆ. ಇದಾದನಂತರ ಎಲ್ಲರು ಆತ್ಮಶಾಂತಿಗಾಗಿ ಧೂಪ, ಲೋಬಾನ ಹಾಕಿ ಪೂಜೆ ಮಾಡುವರು. ನೀರಿನಲ್ಲಿ ಸಾಯಿಸಿದ ಹಂದಿ ಮಾಂಸದಿಂದ ಅಡುಗೆ ತಯಾರಿಸಿ ನೈವೇದ್ಯಕ್ಕೆ ಇಟ್ಟ ಮೇಲೆ ಎಲ್ಲರೂ ತಿನ್ನುತ್ತಿದ್ದರು. ಆದರೆ ಇತ್ತೀಚೆಗೆ ಸಿಹಿ ಅಡುಗೆ ಮಾಡುವರು. ಅವತ್ತಿನ ದಿನ ಚೆನ್ನಾಗಿದ್ದರೆ ಅವತ್ತೇ ಅಥವಾ ಮರುದಿನ ಸತ್ತ ವ್ಯಕ್ತಿಯ ಪ್ರತಿರೂಪವಾಗಿ ಮಣ್ಣಿನ ಮೂರ್ತಿಯನ್ನು ಮಾಡಿ ಜಗುಲಿಯ ಮೇಲೆ ತರುವರು. ಮನೆಯವರೆಲ್ಲ ದೇವರ ಕಾರ್ಯವೆಂದು ಪೂಜೆ ಮಾಡುವರು. ಕರ್‌ಕರ್ ಮುಂಡರಲ್ಲಿ ಮಹಾಲಯ ಅಮವಾಸ್ಯೆಯ ದಿನ ಸತ್ತವರಿಗೆ ವಿಶೇಷವಾಗಿ ಅವರ ಪ್ರತಿರೂಪಕ್ಕೆ ಹೊಸ ಬಟ್ಟೆ ಅರ್ಪಿಸಿ, ತೆಂಗಿನಕಾಯಿ ಒಡೆದು ವಿಶೇಷ ಪೂಜೆ ಮಾಡುತ್ತಾ, ಆತ್ಮವನ್ನು ಸಂತೃಪ್ತಗೊಳಿಸುವರು. ಕಾರಣ ಕರ್‌ಕರ್ ಮುಂಡರಲ್ಲಿ ಪ್ರೇತಾತ್ಮ(ದೆವ್ವದ) ಬಗ್ಗೆ ಅಗಾಧವಾದ ನಂಬಿಕೆ ಇದೆ. ಆಷಾಢ ಮಾಸದಲ್ಲಿ ಸತ್ತವರು ಅಕಾಲಿಕವಾಗಿ ಮರಣ ಹೊಂದಿದವರು ದೆವ್ವ ಆಗುತ್ತಾರೆ ಎಂಬ ನಂಬಿಕೆಯಿಂದ ಸುಡುವರು. ಹನ್ನೊಂದನೇ ದಿನ ಅವರಿಗೆ ವಿಶೇಷ ಪೂಜೆ ಮಾಡುವರು. ಸತ್ತ ನಕ್ಷತ್ರ ಸರಿ ಇಲ್ಲದಿದ್ದರೆ ಶಾಂತಿ ಪೂಜೆ; ಇಲ್ಲವಾದರೆ ಇಂತಿಷ್ಟು ದಿನ ಮನೆ ಬಿಡುವ ನಂಬಿಕೆ ಹೊಂದಿದ್ದಾರೆ.

ಅಪ್ರಾಪ್ತ ವಯಸ್ಸಿನ ಬ್ರಹ್ಮಚಾರಿಗಳು, ಮಕ್ಕಳು, ಸತ್ತರೆ ಯಾವ ಶಾಸ್ತ್ರಗಳನ್ನು ಮಾಡದೆ ಚಟ್ಟವನ್ನು ಕಟ್ಟದೆ ಕೈಯಲ್ಲಿ ತೆಗೆದುಕೊಂಡು ಹೋಗಿ ಮಣ್ಣು ಮಾಡುವರು. ಗರ್ಭಿಣಿ ಸ್ತ್ರೀಯರು ಸತ್ತರೆ ಮಣ್ಣು ಮಾಡದೆ ಸುಡುವರು. ಈ ಸುಡುವ ಕ್ರಿಯೆ ಹಕ್ಕಿಪಿಕ್ಕಿಯರಂತೆ ಕರ್‌ಕರ್ ಮುಂಡರು ವೈಷ್ಣವೀಕರಣಕ್ಕೆ ಒಳಗಾಗಿರುವುದನ್ನು ಸೂಚಿಸುತ್ತದೆ. ಈ ರೀತಿಯಾಗಿ ಶವಸಂಸ್ಕಾರವನ್ನು ನೆರವೇರಿಸುವುದು ಕಾಣುತ್ತೇವೆ. ಇಂದು ಆಹಾರ ಕ್ರಮ ನಂಬಿಕೆಗಳು ಸಡಿಲವಾಗುತ್ತಿವೆ. ದಾಸಯ್ಯ ಮತ್ತು ಗುರಿಕಾರರು ಈ ಕಾರ್ಯ ನೆರವೇರಿಸದೇ, ಯಾರಾದರೂ ಮುಖಂಡರು ತಮ್ಮ ತಿಳುವಳಿಕೆಯ ಆಧಾರ ಮೇಲೆ ಮುಂದುವರೆಸುತ್ತಿದ್ದಾರೆ.

ಪ್ರಸ್ತುತ ಅಧ್ಯಾಯವು ಕರ್‌ಕರ್ ಮುಂಡರ ಜೀವನಾವರ್ತನ ಆಚರಣೆಗಳನ್ನು ಒಳಗೊಂಡಿದೆ. ಪ್ರತಿ ಆಚರಣೆಯಲ್ಲಿ ಹಂದಿಯು ಪ್ರಮುಖ ಆಹಾರವಾಗಿದೆ. ರಜಾಕಾರರ ಹಾವಳಿಯ ಕಾಲದಲ್ಲಿ ಮತಾಂತರದಿಂದ ತಪ್ಪಿಸಿಕೊಳ್ಳಲು ಹಂದಿ ಬಳಕೆಯು ರೂಢಿಯಾಗಿ ಇವರ ಜೀವನ ವಿಧಾನದಲ್ಲಿ ಬೆರೆತು ಹೋಗಿದೆ. ಕರ್‌ಕರ್ ಮುಂಡರ ಜೀವನಾವರ್ತಕ ಆಚರಣೆಗಳು ಬೇಡ ಸಮುದಾಯದ ಆಚರಣೆಗಳನ್ನು ಹೋಲುತ್ತವೆ. ಬಹುಶಃ ಹಂದಿ ಬಳಕೆಯು ಬೇಡರಿಂದ ವಿಘಟನೆ ಹೊಂದಲು ಕಾರಣವಾಗಿರುವ ಸಾಧ್ಯತೆಗಳಿವೆ. ಪಶುಪಾಲನ ಲಕ್ಷಣಗಳನ್ನು ಹೊಂದಿರುವ ಈ ಸಮುದಾಯವು. ಅಲೆಮಾರಿತನದಿಂದ ಕೆಲವೊಂದು ಆಚರಣೆಗಳನ್ನು ಕೈ ಬಿಟ್ಟಿದೆ ಮತ್ತೆ ಕೆಲವನ್ನು ಸೇರಿಸಿಕೊಂಡು ಸ್ಥಿತ್ಯಂತರ ಹೊಂದಿದೆ. ಜೀವನಾವರ್ತಕ ಆಚರಣೆಗಳಿಂದ ಕರ್‌ಕರ್ ಮುಂಡ ಸಮುದಾಯದ ಸಾಂಸ್ಕೃತಿಕ ಅನನ್ಯತೆ ತಿಳಿಯಬಹುದಾಗಿದೆ.

## ಅಧ್ಯಾಯ ಐದು

## ಕರ್‌ಕರ್‌ಮುಂಡ ಸಮುದಾಯ ಪ್ರಸ್ತುತ ಸ್ಥಿತಿ-ಗತಿಗಳು

ಮಾನವನ ಸಮಾಜವು ನಿತ್ಯಪರಿರ್ವತನಶೀಲವಾದದ್ದು, ಈ ಪರಿವರ್ತನೆಯಲ್ಲಿ ಸಂಸ್ಕೃತಿಯು ಒಂದು ಭಾಗವಾಗಿ ಕಾಲದೇಶಗಳನ್ನು ಆಧರಿಸಿ ಸ್ಥಿತ್ಯಂತರಕ್ಕೆ ಒಳಗಾಗುತ್ತಿರುತ್ತದೆ. ಆದಿಮಾನವನು ಅಲೆಮಾರಿ ಬದುಕಿಗೆ ಇತಿಶ್ರೀ ಹಾಡಿ ಗುಂಪು ಜೀವನಕ್ಕೆ ಕಾಲಿಟ್ಟಾಗ ಸಮಾಜಿಕ ವ್ಯವಸ್ಥೆ ರೂಪಿತವಾಯಿತು ಎನ್ನಬಹುದು.ಜನಸಂಖ್ಯೆ ಮತ್ತು ಸಂಸ್ಕೃತಿಯನ್ನು ಆಧರಿಸಿ ಕುಟುಂಬ, ಸಮುದಾಯ, ಸಮೂಹ, ಸಮಾಜ ಎಂದು ಸಮಾಜಶಾಸ್ತ್ರಜ್ಞರು ವರ್ಗೀಕರಣ ಮಾಡಿರುವುದನ್ನು ಕಾಣಬಹುದಾಗಿದೆ. ಇದರಲ್ಲಿ ವಿಶಾಲಗಾತ್ರ ಹೊಂದಿರುವ ಸಮಾಜದವು ಅನೇಕ ಸಮುದಾಯಗಳನ್ನು ಅಂತರ್ಗತ ಮಾಡಿಕೊಂಡಿರುವುದನ್ನು ಕಾಣಬಹುದು. ಅಲೆಮಾರಿ ಮಾನವನು ಗುಂಪು ಜೀವನವನ್ನು ಆರಂಭಿಸಿದಾಗ ಸಹಜವಾಗಿಯೇ ಅಂದಿನ ಸಮಾಜವು ಸರಳತೆಯಿಂದ ಕೂಡಿತ್ತು. ಸಮಾಜವು ಗತಿಸಿದಂತೆ ಮಾನವನ ಜೀವನ ಕ್ರಮದ ಬದಲಾವಣೆ,ಬೌದ್ಧಿಕ ಮಾನವನ ಅನ್ವೇಷಣೆಗಳ ಪರಿಣಾಮಗಳಿಂದ ಸಮಾಜವು ಸಂಕೀರ್ಣತೆಗೆ ಒಳಗಾಗಬೇಕಾಯಿತು.

ಭಾರತೀಯ ಸಮಾಜದ ಸ್ಥಿತ್ಯಂತರವನ್ನು ನೋಡುವುದಾದರೆ ಯುರೋಪಿನಲ್ಲಾದ ಭೂ ಅನ್ವೇಷಣೆಗಳು ಭಾರತೀಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನ ಮೇಲೆ ತೀವ್ರಗತಿಯ ಪ್ರಭಾವ ಬೀರಿದವು. ಯಂತ್ರಗಳ ಅನ್ವೇಷಣೆಯಿಂದಾದ ಕೈಗಾರಿಕಾ ಕ್ರಾಂತಿ ಜಗತ್ತಿನ ಬಹುತೇಕ ಸಮಾಜಗಳ ಮೇಲೆ ಕ್ಷಿಪ್ರಗತಿಯ ಪರಿಣಾಮ ಬೀರಿರುವುದನ್ನು ಕಾಣುತ್ತೇವೆ. ಪ್ರಸ್ತುತ ದಿನಮಾನದ ಉದಾರೀಕರಣ, ಆಧುನೀಕರಣ ಮತ್ತು ಜಾಗತೀಕರಣದ ಚಿಂತನೆಗಳು ವಿಶ್ವವನ್ನು ಒಂದು ಏಕೀಕೃತ ಗ್ರಾಮವೆಂಬಂತೆ ನೋಡುವ ಚಿಂತನೆಗೆ ಎಡೆಮಾಡಿಕೊಟ್ಟಿವೆ. ವರ್ಗ ಸಮಾಜದಿಂದರೂಪಿತಗೊಂಡಿರುವ

ಈ ವಿದ್ಯಮಾನಗಳು ಪ್ರಬಲ ಜಾತಿ ವ್ಯವಸ್ಥೆ ಹಾಗೂ ವೈವಿಧ್ಯಮಯ ಸಂಸ್ಕೃತಿಯಿಂದ ರೂಪಗೊಂಡಿರುವ ಭಾರತೀಯ ಸಮಾಜದ ಸ್ಥಿತ್ಯಂತರಕ್ಕೆ ಕಾರಣವಾಗಿರುವುದನ್ನು ಕಾಣುತ್ತೇವೆ. ಆರ್ಯರ ಆಗಮನದ ಪೂರ್ವ ಭಾರತೀಯ ಸಮಾಜವು ನೈತಿಕ ಮೌಲ್ಯ, ಅನೌಪಚಾರಿಕ ಶಿಕ್ಷಣ, ಸೀಮಿತ ನೆಲೆಯ ಜೀವನ ವಿಧಾನಗಳಿಂದ ಸರಳ ಸಮಾಜವಾಗಿತ್ತು. ಭಾರತೀಯ ಸಮಾಜದ ವೈವಿಧ್ಯತೆಗೆ ಕಾರಣವಾಗಿರುವ ಒಳ ಸಮುದಾಯಗಳು ಇಂದು ರಾಷ್ಟ್ರೀಯತೆಯ ಚೌಕಟ್ಟಿನೊಳಗೆ ಪ್ರಜಾಪ್ರಭುತ್ವದ ಪರಮಾಧಿಕಾರದ ಅಧೀನದಲ್ಲಿ ಔಪಚಾರಿಕ ನಿಯಂತ್ರಣ, ಏಕರೂಪ ನ್ಯಾಯ ವ್ಯವಸ್ಥೆಯಿಂದ ಸಾಮಾಜಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಹಾಗೂ ಆರ್ಥಿಕವಾಗಿ ಸ್ಥಿತ್ಯಂತರಕ್ಕೆ ಒಳಗಾಗಿರುವುದನ್ನು ಕಾಣುತ್ತೇವೆ.

ಭಾರತೀಯ ಸಮಾಜದ ಸ್ಥಿತ್ಯಂತರದಿಂದ ಉಪ ರಚನೆಗಳಲ್ಲಿನ ಅಲೆಮಾರಿ ಸಮುದಾಯಗಳು ಸ್ಥಿತ್ಯಂತರಕ್ಕೆ ಒಳಗಾಗಿವೆ. ಭಾರತೀಯ ಚರಿತ್ರೆಯನ್ನು ಅವಲೋಕಿಸಿದಾಗ ನಾಗರಿಕತೆಯ ಕಾಲದಿಂದ ಇಂದಿನ ಆಧುನಿಕ ಕಾಲದವರೆಗೂ ಅಲೆಮಾರಿ ಸಮುದಾಯಗಳು ಕೆಲವೊಂದನ್ನು ಕಳೆದುಕೊಳ್ಳುತ್ತಾ ಕೆಲವನ್ನು ಸೇರಿಸಿಕೊಳ್ಳುತ್ತಾ ಒಂದು ಸಂಸ್ಕೃತಿಯನ್ನು ಉಳಿಸಿಕೊಂಡು ಬರುವುದನ್ನು ಕಾಣಬಹುದು. ಇವರ ಸಂಸ್ಕೃತಿಯು ಸಾಮಾಜಿಕ, ಆರ್ಥಿಕ, ರಾಜಕೀಯ ಇತ್ಯಾದಿಗಳನ್ನು ಅವಲಂಬಿಸಿ ನಿರಂತರವಾಗುತ್ತಿರುತ್ತದೆ. ಸರಳ ಸಮಾಜದಲ್ಲಿ ಆದಿಮಾನವನು ಪ್ರಕೃತಿಯನ್ನು ಆರಾಧಿಸಿ, ಅವಲಂಬಿಸಿ ಬದುಕಿದ್ದ ಅವಧಿಯಲ್ಲಿ ಕಾಡು ದೇವರ ಸ್ವರೂಪವಾಗಿ ಆರಾಧಿಸಲ್ಪಡುತ್ತಿತ್ತು. ಬ್ರಿಟಿಷರ ಆಗಮನ ಹಾಗೂ ರಾಜಕೀಯದ ಬಿಗಿ ಹಿಡಿತವು ಪ್ರಕೃತಿಯನ್ನು ಸರ್ಕಾರದ ಸ್ವತ್ತಾಗುವಂತೆ ಮಾಡಿತು. ಸಹಜವಾಗಿಯೇ ಕಾಡನ್ನೇ ಆರಾಧಿಸಿ ಅದರ ಸಂಪನ್ಮೂಲಗಳನ್ನು ಅವಲಂಬಿಸಿ ಬದುಕುತ್ತಿದ್ದ ಬುಡಕಟ್ಟು ಸಮುದಾಯಗಳು ಕಾಡಿನ ಒಡೆತನವನ್ನು ಕಳೆದುಕೊಂಡು ಕಾಡಿನಲ್ಲಿದ್ದರೂ ಪರಾಧೀನರಾಗುವಂತಾಯಿತು.ಕಾಡು ಸರ್ಕಾರದ ಒಡೆತನಕ್ಕೆ ಒಳಪಟ್ಟಾಗ ಬುಡಕಟ್ಟುಗಳು ಕಾಡಿನ ಅವಲಂಬನೆಯಿಂದ ದೂರವಾಗಿ ಉಪಜೀವನಕ್ಕಾಗಿ ನಾಡನ್ನು ಅವಲಂಬಿಸಬೇಕಾಯಿತು. ನಾಡಿನ ಜನರಿಗೆ ಇವರಲ್ಲಿನ ಕಾಡಿನ ಕುರಿತಾದ ಅಗಾಧ ಜ್ಞಾನ, ಕೌಶಲ್ಯ, ಮಾನವೀಯ ಮೌಲ್ಯಗಳ ಸಂಪತ್ತು ಜೊತೆಗೆ ಇವರ ಸಧೃಡ ಮೈಕಟ್ಟು ಪ್ರಿಯವಾದವು. ಇವುಗಳ ಮೂಲಕ ನಾಡಿಗೆ ಹತ್ತಿರವಾದ ಬುಡಕಟ್ಟುಗಳಿಂದ ಬ್ರಿಟಿಷರು ಸೇರಿದಂತೆ ಸ್ಥಳೀಯ ಆಳುವ ವರ್ಗಗಳು ತಮ್ಮ ಐಶಾರಾಮಿ ಬದುಕಿಗೆ ಮತ್ತು ಆಡಳಿತಯಂತ್ರ ಸುಗಮವಾಗಿ

ಸಾಗಲು ಬಳಸಿಕೊಂಡರು. ಇದನ್ನು ಪ್ರತಿರೋಧಿಸಿದ ಬುಡಕಟ್ಟುಗಳಿಗೆ ಕಟ್ಟಿದ ಹಣೆಪಟ್ಟಿ ಅಪರಾಧಿ ಬುಡಕಟ್ಟುಗಳು ಎಂಬ ನಾಮಕರಣವಾಗಿತ್ತು. ಈ ಹೆಸರಿನಿಂದ ಬುಡಕಟ್ಟುಗಳನ್ನು ಸಾಮಾಜಿಕ, ರಾಜಕೀಯ, ಆರ್ಥಿಕವಾಗಿ ಕೆಳಸ್ತರಕ್ಕೆ ತಳ್ಳುತ್ತಾ, ಶಿಷ್ಟ ಸಂಸ್ಕೃತಿ ಎಂದು ತಮ್ಮ ಸಂಸ್ಕೃತಿಯನ್ನು ಹೇರಲ್ಪಟ್ಟರು. ಕೆಲವರು ನಿಧಾನವಾಗಿ ಶೋಷಣೆಯಿಂದ ಬೇಸತ್ತು ಅನಿವಾರ್ಯವಾಗಿ ಒಪ್ಪಿಕೊಳ್ಳುವಂತಾಯಿತು. ಇದರಿಂದಾಗಿ ಬುಡಕಟ್ಟುಗಳ ಪಾರಂಪರಿಕ ಉಪಜೀವನ ಕ್ರಮ ಸ್ಥಿತ್ಯಂತರಕ್ಕೆ ಒಳಗಾಗಬೇಕಾಯಿತು.ಹೀಗೆ ನಾಗರಿಕತೆಯ ಕಾಲದಿಂದಲೂ ಪ್ರಸ್ತುತವರೆಗೂ ಭಾರತೀಯ ಸಮಾಜ ಸ್ಥಿತ್ಯಂತರ ಹೊಂದುತ್ತಾ ಸಾಗಿ ಬಂದಿದ್ದು, ಭಾರತದಲ್ಲಿನ ವರ್ಣವ್ಯವಸ್ಥೆ ಹಗೂ ಜಾತಿವ್ಯವಸ್ಥೆಗಳು ಸಾಮಾಜಿಕವಾಗಿ ಶ್ರೇಣಿಕರಣ ಸೃಷ್ಟಿಸಿ, ಸಾಂಸ್ಕೃತಿಕವಾಗಿ ಮತ್ತು ಪ್ರಾದೇಶಿಕವಾಗಿ ಪ್ರಬಲವರ್ಗದವರಿಗೆ ಅನುಕೂಲವಾಗಿರುವುದನ್ನು ಕಾಣುತ್ತೇವೆ. ಆದರೆ ದುರ್ಬಲ ವರ್ಗಗಳು ಎಂದು ಹೇಳುವ ಬುಡಕಟ್ಟು ಸಮುದಾಯಗಳು ಸಾಂಸ್ಕೃತಿಕವಾಗಿ ಪ್ರಬಲರಾಗಿದ್ದರೂ ಆರ್ಥಿಕ ಕಾರಣವನ್ನು ಇಟ್ಟುಕೊಂಡು ಹಿಂದುಳಿದವರು ಎಂದು ಹೇಳುವುದು ಅಸ್ಪಷ್ಟತೆಯಿಂದ ಕೂಡಿದೆ ಎಂದು ಹೇಳಿದರೂ ತಪ್ಪಾಗಲಿಕ್ಕಿಲ್ಲ. ಸಮಾಜಶಾಸ್ತ್ರಜ್ಞರು ಸಂಸ್ಕೃತಿಯ ಹಿನ್ನೆಲೆಯಲ್ಲಿ ಗ್ರಾಮೀಣ, ನಗರ, ಆದಿವಾಸಿ ಸಂಸ್ಕೃತಿ ಎಂದು ವಿಂಗಡಿಸಿರುವುದನ್ನು ಕಾಣಬಹುದು. ಭಾರತದ ಇತ್ತೀಚಿನ ಅಧ್ಯಯನಗಳು ಗ್ರಾಮೀಣ ಮತ್ತು ನಗರ ಸಂಸ್ಕೃತಿಯ ಕಡೆಗೆ ಮುಖಮಾಡಿ ಆದಿವಾಸಿ ಸಂಸ್ಕೃತಿಯನ್ನು ನಿರ್ಲಕ್ಷಿಸಿರುವುದರಿಂದ ಅಂಚಿಗೆ ತಳ್ಳಲ್ಪಟ್ಟಿದೆ. ಭಾರತದ ಚರಿತ್ರೆಯಲ್ಲಿ ಮುಸ್ಲಿಂರ, ಬ್ರಿಟಿಷ್‌ರ ಹಾಗೂ ಸ್ಥಳೀಯ ಪ್ರಬಲವರ್ಗಗಳ ಆಳ್ವಿಕೆಯ ಕಾಲದಿಂದಲೂ ಬುಡಕಟ್ಟು ಅವಜ್ಞೆಗೆ ಒಳಗಾಗುತ್ತಲೇ ಬಂದಿವೆ. ಬುಡಕಟ್ಟುಗಳು ತಮ್ಮದೇ ಆದಂತಹ ಕುಲ ಕಸುಬುಗಳನ್ನು ಅವಲಂಬಿಸಿ ಬದುಕುತ್ತಿದ್ದವು. ಆದರೆ ಸಮುದಾಯದ ಹೊರಗಿನವರ ಸಾಂಸ್ಕೃತಿಕ ಹೇರುವಿಕೆಯಿಂದ ಕುಲ ಕಸುಬುಗಳು ಪ್ರಾಧಾನ್ಯತೆಯನ್ನು ಕಳೆದುಕೊಂಡವು. ಅರಸೊತ್ತಿಗೆಯ ಕಾಲದಲ್ಲಿ ಕುಲಕಸುಬುಗಳುಜೀವನ ನಿರ್ವಹಣ ಆಧಾರವಾಗಿದ್ದವು. ಆದರೆ ಈಗ ರಾಜನು ಇಲ್ಲ ರಾಜನ ಸ್ವರೂಪದಲ್ಲಿ ಪ್ರಜಾಪ್ರತಿನಿಧಿಗಳು ಇದ್ದಾರೆ. ವಾಸ್ತವದಲ್ಲಿ ರಾಜಕೀಯ ಪಕ್ಷಗಳ ಮತ್ತು ಅಧಿಕಾರ ವರ್ಗಗಳ ಆಕ್ರಮಣ ನಿಲುವುಗಳು ಬುಡಕಟ್ಟುಗಳನ್ನು ಸೇರಿದಂತೆ ಇತರ ತಳಸಮುದಾಯಗಳನ್ನು ಸಮಾಜದ ಅಂಚಿಗೆ ತಳ್ಳುತ್ತಿರುವುದನ್ನು ನೋಡುತ್ತಲೇ ಇದ್ದೇವೆ. ತಳಸಮುದಾಯಗಳನ್ನು ಇವತ್ತಿನ ಅಭಿವೃದ್ಧಿ ಪರಿಕಲ್ಪನೆಗೆ ಒಳಪಡಿಸಲು ಮತ್ತು ಅವನತಿಯ ಕಡೆಗೆ ವಾಲುತ್ತಿರುವ ಪಾರಂಪರಿಕ

ಜ್ಞಾನವನ್ನು ಉಳಿಸಬೇಕೆಂಬ ಮನಸ್ಸುಗಳಿಂದ ಈ ಕಾರ್ಯ ನಡೆಯಬೇಕಿದೆ. ಈ ಕಾರ್ಯದಲ್ಲಿ ಹಲವಾರು ಕಾರ್ಯನಿರತವಾಗಿರುವವರು ತಳಸಮುದಾಯಗಳ ವಾಸ್ತವ ಸ್ಥಿತಿಗತಿಗಳನ್ನು ಅರಿಯಬೇಕಾಗಿದೆ. ನೈಜ ಚಿತ್ರಣವನ್ನು ಆಧರಿಸಿ ಯೋಜನೆಗಳನ್ನು ರೂಪಿಸುವುದು ಸೂಕ್ತವೆಂದು ಹೇಳಬಹುದು. ಇಂತಹ ತಳಸಮುದಾಯಗಳಲ್ಲಿ ಅಲೆಮಾರಿ ಸಮುದಾಯಗಳು ಬಹುಸಂಖ್ಯಾತವಾಗಿರುವುದನ್ನು ಕಾಣಬಹುದು. ಅಂದಿನ ಅಲೆಮಾರಿತನ ಬದುಕು ನಗರದ ಅಂಚಿನ ಕೊಳಚೆ ಪ್ರದೇಶಗಳಿಗೆ ತಂದು ನಿಲ್ಲಿಸಿದೆ. ರಾಜನಿಗಾಗಿ ನಡೆಸಿದ ಮಾರುವೇಶದ ತಿರುಗಾಟ ಇಂದು ಉಪಜೀವನಕ್ಕಾಗಿ ಭಿಕ್ಷೆ ಬೇಡುವಂತಾಗಿದೆ. ಅಂತಹ ಅಲೆಮಾರಿ ಸಮುದಾಯಗಳಲ್ಲಿ ಕರ್‌ಕರ್ ಮುಂಡ ಸಮುದಾಯ ಪಾಡು ಇದೆ ಆಗಿರುವುದು. ಈ ಸಮುದಾಯದ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಸ್ಥಿತಿಗತಿಗಳನ್ನು ಮತ್ತು ಇದುವರೆಗೆ ಸರ್ಕಾರಗಳು ಅನುಷ್ಠಾನಗೊಳಿಸಿರುವ ಯೋಜನೆಗಳ ಹಾದಿಯನ್ನು ತಿಳಿಯುವ ಮೂಲಕ ಅವುಗಳ ಸಫಲತೆ ಮತ್ತು ವಿಫಲತೆಗಳನ್ನು ತಿಳಿಯುವುದು ಅವಶ್ಯಕವಾಗಿದೆ.

ಕರ್‌ಕರ್‌ಮುಂಡ ಸಮುದಾಯುವು ಪ್ರಾದೇಶಿಕವಾಗಿ ವೊಂಡಬೇಡ, ಮುಂಡಾಲಬಂಡ, ಪರ್ಯಾಯ ಹೆಸರುಗಳಿಂದ ಕರ್ನಾಟಕಾದ್ಯಂತ ಚದುರಿ ಹೋಗಿದೆ. ಈ ಹೆಸರುಗಳನ್ನು ಕೇಂದ್ರಿಕರಿಸಿ ಈ ಅಧ್ಯಯನವನ್ನು ಮಾಡಲಾಗಿದೆ. ಕರ್ನಾಟಕದ ಮೀಸಲಾತಿ ಪಟ್ಟಿಯಲ್ಲಿ ಹಿಂದುಳಿದ ವರ್ಗದ ೨ಎ ನಲ್ಲಿನ ೨.ಎ ಅಘೋರಿ ಬಿ. ಕರ್‌ಕರ್ ಮುಂಡಾ ಪಟ್ಟಿಗೆ ಸೇರಿಸಲಾಗಿದೆ. ಕರ್‌ಕರ್ ಮುಂಡಾ ಸಮುದಾಯದ ಜನಸಂಖ್ಯೆ ಇಳಿಮುಖವಾಗುತ್ತಿರುವುದು ಕಂಡುಬಂದಿದ್ದು, ಬೇಡ ಮುಂಡಾಲ ಸಮುದಾಯಗಳಲ್ಲಿ ಈ ಸಮುದಾಯದವರು ಸೇರ್ಪಡೆಗೊಳ್ಳುತ್ತಿರುವುದು ಇದಕ್ಕೆ ಕಾರಣವಾಗಿದೆ. ಸಮುದಾಯದ ಚಾರಿತ್ರಿಕ ಹಿನ್ನೆಲೆಯನ್ನು ಸರಿಯಾಗಿ ಗ್ರಹಿಸಿ ಚಹರೆ ಗುರುತಿಸದಿರುವುದು ಅನ್ಯ ಸಮುದಾಯಗಳಲ್ಲಿ ಸೇರ್ಪಡೆಗೊಳ್ಳುತ್ತಿರುವುದು ಮತ್ತೊಂದು ಕಾರಣವಾಗಿದೆ. ಇದರಿಂದಾಗಿ ಸರ್ಕಾರಿ ಸೌಲಭ್ಯಗಳು ಈ ಸಮುದಾಯದವರು ಪಡೆಯದೇ ಸಮಸ್ಯಾತ್ಮಕವಾಗಿ ಬದುಕುತ್ತಿರುವರು. ರಾಜ್ಯದಲ್ಲಿನ ೩೨೧ ಕರ್‌ಕರ್ ಮುಂಡ ಸಮುದಾಯದ ಕೌಟುಂಬಗಳಿಂದ ಕ್ಷೇತ್ರಕಾರ್ಯದ ಮೂಲಕ ಮಾಹಿತಿಯು ಅವರ ಬದುಕಿನ ಪ್ರಸ್ತುತ ಸ್ಥಿತಿಗತಿಗಳನ್ನು ತಿಳಿಸುತ್ತದೆ. ಸಮುದಾಯದ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಸ್ಥಿತಿಗತಿಗಳನ್ನು ಪ್ರಶ್ನಾವಳಿಯ ಮೂಲಕ ಸಂಗ್ರಹಿಸಿ ಕೋಷ್ಟಕಗಳ ಮೂಲಕ ಮಾಹಿತಿಯನ್ನು ವಿಶ್ಲೇಷಣೆಗೆ ಒಳಪಡಿಸುವುದು ಈ ಅಧ್ಯಾಯದ ಉದ್ದೇಶವಾಗಿದೆ.

ಕೋಷ್ಟಕ ೫.೧. ಸಮೀಕ್ಷೆಗೆ ಒಳಪಟ್ಟಿರುವ ಕರ್‌ಕರ್ ಮುಂಡರ ಲಿಂಗವಾರು ಜನಸಂಖ್ಯೆ (೨೦೧೬)

| ಒಟ್ಟು ಜನಸಂಖ್ಯೆ | | |
|---|---|---|
| ಒಟ್ಟು ಕುಟುಂಬಗಳು ೩೨೧ | | |
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೭೬೪ | ೪೮.೭ |
| ಮಹಿಳೆಯರು | ೮೦೫ | ೫೧.೩ |
| ಒಟ್ಟು ಜನಸಂಖ್ಯೆ | ೧೫೬೯ | ೧೦೦ |

ಅಧ್ಯಾಯ ಒಂದರಲ್ಲಿ ತಿಳಿಸಿರುವಂತೆ ಇಡೀ ಕರ್ನಾಟಕವನ್ನು ಅಧ್ಯಯನ ವ್ಯಾಪ್ತಿಯನ್ನಾಗಿ ಇಟ್ಟುಕೊಂಡು ಒಟ್ಟು ೩೨೧ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ. ಈ ಸಮೀಕ್ಷೆಯ ಅನ್ವಯ ಒಟ್ಟು ಜನಸಂಖ್ಯೆ ೧೫೬೯ ಇದ್ದು, ಇದರಲ್ಲಿ ೭೬೪ಪುರುಷರು ಹಾಗೂ ೮೦೫ ಮಹಿಳೆಯರಿದ್ದಾರೆಂದು ಕೋಷ್ಟಕ ೫.೧ ತಿಳಿಸುವುದು. ಮತ್ತೆ ಕೆಲವೊಂದು ಕುಟುಂಬಗಳ ಈ ಸಮೀಕ್ಷೆಯಿಂದ ಹೊರ ಉಳಿದಿರುವ ಸಾಧ್ಯತೆಗಳಿವೆ. ಕರ್ನಾಟಕದ ಮೊದಲ ಹಿಂದುಳಿದ ವರ್ಗಗಳ ಆಯೋಗದ ವರದಿಯಂತೆ ಬಿಜಾಪುರದಲ್ಲಿ ೧೦೦ ಜನಸಂಖ್ಯೆ ಇದೆ ಎಂದು ತಿಳಿಯುತ್ತದೆ. ಇಂದು ೧೫೬೯ ಜನಸಂಖ್ಯೆಯಿದ್ದು ಹೆಚ್ಚಳವಾದಂತೆ ಕಂಡುಬರುವುದು. ಈ ಸಮುದಾಯದ ಕುರಿತು ಮೊದಲ ಹಿಂದುಳಿದ ವರ್ಗದ ವರದಿಯನ್ನು ಹೊರತುಪಡಿಸಿ ಯಾವುದೇ ಅಂಕಿ ಅಂಶಗಳು ದೊರೆಯದೇ ಇರುವುದರಿಂದ ಇಂದಿನ ಸಮೀಕ್ಷೆಯನ್ನು ತುಲನಾತ್ಮಕವಾಗಿ ನೋಡಿದಾಗ ಜನಸಂಖ್ಯೆ ಹೆಚ್ಚಳವಾಗಿದೆ ಎಂದು ತಿಳಿಯಬಹುದು. ಅನಂತಕೃಷ್ಣ ಅಯ್ಯರ್ 'ಮೈಸೂರು ಟ್ರೈಬ್ಸ್ ಅಂಡ್ ಕಾಸ್ಟ್ ಪುಸ್ತಕದಲ್ಲಿ ಕರ್‌ಕರ್ ಮುಂಡರು ಬಿಜಾಪುರ ಜಿಲ್ಲೆಯ ಅತರ್ಗದಲ್ಲಿ ನೆಲೆಸಿದ್ದಾರೆ ಎಂದು ಸೂಚಿಸಿದ್ದು, ಆದರೆ ಪ್ರಸ್ತುತ ಕ್ಷೇತ್ರಕಾರ್ಯ ಮಾಡಿದಾಗ ಬಿಜಾಪುರದಲ್ಲಿ ಜನಸಂಖ್ಯೆ ಕ್ಷೀಣಿಸಿದ್ದು, ಅವರೆಲ್ಲರು ಕರ್ನಾಟಕದ ಒಳನಾಡಿಗೆ ಸಂಚರಿಸಿರುವುದು ಕಂಡುಬರುತ್ತದೆ. ಸಮೀಕ್ಷೆಯನ್ನು

ಅವಲೋಕಿಸಿದಾಗ ಈಗಿರುವ ಜನಸಂಖ್ಯೆಗಿಂತ ಹೆಚ್ಚಾಗಿದ್ದುದು ಕಂಡು ಬಂದಿದ್ದು, ಖಜಜಟಿಣುಣಥಿ ಮತ್ತು ಸೌಲಭ್ಯಗಳ ಕೊರತೆಯಿಂದ ಅನ್ಯ ಸಮುದಾಯಗಳಲ್ಲಿ ಮಿಂದು ಹೋಗಿರುವುದನ್ನು ಗ್ರಹಿಸಬಹುದು. ಪ್ರಸ್ತುತ ಕೋಷ್ಟಕದ ಅನ್ವಯದಂತೆ ಪುರುಷರಿಗಿಂತ ಮಹಿಳೆಯರ ಸಂಖ್ಯೆ ಅಧಿಕವಾಗಿದ್ದು ಲಿಂಗಾನುಪಾತ ಅಧಿಕವಾಗಿದೆ. ಪುರುಷರು ದುಶ್ಚಟಗಳಿಗೆ ಬಲಿಯಾಗಿದ್ದು ಮತ್ತು ಪೌಷ್ಟಿಕಾಂಶಯುಕ್ತ ಆಹಾರದ ಕೊರತೆಯಿಂದ ಮತ್ತು ವಾಸದ ನೆಲೆ ಕೊಳಚೆ ಪ್ರದೇಶವಾಗಿರುವುದರಿಂದ ಪುರುಷರ ಅಯುಷ್ಯದ ಪ್ರಮಾಣ ಕಡಿಮೆ ಇದೆ.

ಕೋಷ್ಟಕ ೫.೨. ಜಿಲ್ಲಾವಾರು ಜನಸಂಖ್ಯೆ ಹಂಚಿಕೆ

| ದಾವಣಗೆರೆ | | |
|---|---|---|
| ಒಟ್ಟು ಕುಟುಂಬಗಳು | ೩೭ | |
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೭೦ | ೪೧.೪ |
| ಮಹಿಳೆಯರು | ೯೯ | ೫೮.೬ |
| ಒಟ್ಟು ಜನಸಂಖ್ಯೆ | ೧೬೯ | ೧೦೦ |

ದಾವಣಗೆರೆಯು ಜಿಲ್ಲೆಯು ಕರ್ನಾಟಕದ ಒಂದು ಜಿಲ್ಲೆಯಾಗಿದ್ದು, ದಿವಂಗತ ಜೆ ಎಚ್ ಪಟೇಲ್ ಮುಖ್ಯಮಂತ್ರಿಯಾಗಿದ್ದ ಅವಧಿಯಲ್ಲಿ ರೂಪಿತವಾದ ಏಳು ಜಿಲ್ಲೆಗಳಲ್ಲಿ ಇದು ಸಹ ಒಂದಾಗಿದೆ. ಈ ಜಿಲ್ಲೆಯು ಬಳ್ಳಾರಿ, ಚಿತ್ರದುರ್ಗ, ಶಿವಮೊಗ್ಗ, ಜಿಲ್ಲೆಗಳಿಂದ ಕೆಲವೊಂದು ತಾಲ್ಲೂಕುಗಳನ್ನು ಸೇರಿಸಿಕೊಂಡು ಜಿಲ್ಲೆಯಾಗಿ ಪರಿವರ್ತಿತವಾಗಿದೆ. ಚಿತ್ರದುರ್ಗ, ಹಾವೇರಿ, ಶಿವಮೊಗ್ಗ, ಬಳ್ಳಾರಿ ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳೊಂದಿಗೆ ಗಡಿ ಹೊಂದಿರುವುದನ್ನು ಕಾಣುತ್ತೇವೆ. ಇದು ಅರ್ಧಭಾಗ ನೀರಾವರಿ ಪ್ರದೇಶ ಉಳಿದರ್ಧ ಪ್ರದೇಶ ಮಳೆಯಾಶ್ರಿತವಾಗಿದೆ. ದಾವಣಗೆರೆಯಲ್ಲಿ ಜಿಲ್ಲೆಯಲ್ಲಿ ಲಿಂಗಾಯತ, ಕುರುಬ, ನಾಯಕ, ಸಮುದಾಯಗಳು ಬಹುಸಂಖ್ಯಾತವಾಗಿರುವುದರೊಂದಿಗೆ ಹಕ್ಕಿಪಿಕ್ಕಿ, ಹಂಡಿಜೋಗಿ, ಪಿಂಜಾರ್, ಗೊಂಡರು,

ಕೊರಚ, ಅಲ್ಪಸಂಖ್ಯಾತ ಸಮುದಾಯಗಳನ್ನು ಕಾಣಬಹುದಾಗಿದೆ. ಮುಂಡಾಲಬಂಡೆ ಎಂಬ ಹೆಸರಿನಿಂದ ಗುರುತಿಸಲ್ಪಡುವ ಕರ್‌ಕರ್‌ಮುಂಡ ಸಮುದಾಯವು ನೆಲೆ ನಿಂತಿರುವರು. ಕೋಷ್ಟಕ ೫.೨. ತಿಳಿಸುವಂತೆ ೩೭ ಕುಟುಂಬಗಳು ಕಂಡುಬರುತ್ತವೆ. ದಾವಣಗೆರೆ ನಗರದ ನೂತನ ಆರ್.ಟಿ.ಓ ಆಫೀಸ್ ಸಮೀಪದ ಹೊಸಕ್ಯಾಂಪ್‌ನಲ್ಲಿ ನೆಲೆಸಿರುವರು. ಇವರ ಪೂರ್ವಿಕರು ಅವಿಭಾಜಿತ ಆಂಧ್ರಪ್ರದೇಶದಿಂದ ವಲಸೆ ಬಂದವರಾಗಿದ್ದು, ಇಂದಿಗೂ ಆಂಧ್ರದ ಗುಂಟೂರು, ಹೈದ್ರಾಬಾದ್, ಅನಂತಪುರ, ನಂದ್ಯಾಲ, ಗುಂತಕಲ್‌ನ ಬಂಡ ಸಮುದಾಯದವರೊಂದಿಗೆ ವೈವಾಹಿಕ ಸಂಬಂಧ ಹೊಂದಿರುವರು. ಕರ್ನಾಟಕದಲ್ಲಿ ನಾಯಕನಹಟ್ಟಿ, ರಾಣೆಬೆನ್ನೂರು, ಕಂಪ್ಲಿ, ಕೊಪ್ಪಳದಲ್ಲಿ ವಾಸಿಸುವ ಸಮುದಾಯದೊಂದಿಗೂ ಸಹ ವಿವಾಹಗಳು ಏರ್ಪಟ್ಟಿವೆ. ಇಲ್ಲಿರುವ ಬಹುತೇಕ ಕೂದಲು ವ್ಯಾಪಾರಿಗಳ ವೈವಾಟುಗಳು ಹೈದ್ರಾಬಾದ್‌ನೊಂದಿಗೆ ಬೆಸೆದುಕೊಂಡಿವೆ.

ದಾವಣಗೆರೆ ಜಿಲ್ಲೆಯಲ್ಲಿ ನೆಲೆಸಿರುವ ಕರ್‌ಕರ್ ಮುಂಡ ಸಮುದಾಯದ ೧೬೯ ಜನರಲ್ಲಿ ೯೯ ಮಹಿಳೆಯರಿದ್ದು, ಅಧಿಕ ಸಂಖ್ಯೆಯಲ್ಲಿ ಕೂದಲು ವ್ಯಾಪಾರದಲ್ಲಿ ನಿರತರಾಗಿದ್ದಾರೆ. ಕರ್ನಾಟಕದ ಇತರ ಪ್ರದೇಶಗಳಲ್ಲಿ ಇದ್ದ ಒಂದೆರಡು ಕುಟುಂಬಗಳು ಇಲ್ಲಿಗೆ ವಲಸೆ ಬಂದು ಒಂದೆಡೆ ನೆಲೆಸುತ್ತಿರುವುದರಿಂದ ಜನಸಂಖ್ಯೆ ಅಧಿಕವಾಗುತ್ತಿದೆ.

ಕೋಷ್ಟಕ ೫.೨.೧. ಕೊಪ್ಪಳ ಜಿಲ್ಲೆಯ ಲಿಂಗವಾರು ಜನಸಂಖ್ಯೆ

| **ಕೊಪ್ಪಳಜಿಲ್ಲೆ** | | |
|---|---|---|
| **ಒಟ್ಟು ಕುಟುಂಬಗಳು** | ೧೩ | |
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೨೫ | ೪೦.೩ |
| ಮಹಿಳೆಯರು | ೨೯ | ೫೩.೭ |
| **ಒಟ್ಟು ಜನಸಂಖ್ಯೆ** | ೫೪ | ೧೦೦ |

ಕೊಪ್ಪಳ ಜಿಲ್ಲೆಯು ೧೯೯೭ರಲ್ಲಿ ರಚಿತವಾದ ಏಳು ಜಿಲ್ಲೆಗಳಲ್ಲಿ ಒಂದಾಗಿರುವಂತದ್ದಾಗಿದೆ. ಬಳ್ಳಾರಿ ಜಿಲ್ಲೆಯಿಂದ ವಿಭಜಿತವಾದ ಕೊಪ್ಪಳವು ತುಂಗಭದ್ರ ನದಿಯ ರೇಖೆಯಿಂದ ಬಳ್ಳಾರಿಯೊಂದಿಗೆ ಗಡಿರೇಖೆಯನ್ನು ಹೊಂದಿದೆ. ಕೊಪ್ಪಳ, ಕೈಗಾರಿಕೆ ಮತ್ತು ಭತ್ತದ ಉತ್ಪಾದನೆಯಿಂದ ಪ್ರಸಿದ್ಧಿ ಪಡೆದಿದ್ದು, ಪುರಾತನದಲ್ಲಿ ಜೈನಧರ್ಮದ ನೆಲೆಯಾಗಿತ್ತು ಎಂಬುದಕ್ಕೆ ಇಲ್ಲಿರುವ ಜೈನ ಬಸದಿಯು ನಿದರ್ಶನವಾಗಿದೆ. ಬಾದಾಮಿ, ಕಲ್ಯಾಣ ಚಾಲುಕ್ಯರ ಮತ್ತು ವಿಜಯನಗರದ ಆಳ್ವಿಕೆಗೆ ಒಳಪಟ್ಟಿದ್ದ ಪ್ರದೇಶವಾಗಿ ಐತಿಹಾಸಿಕ ಪರಂಪರೆಯನ್ನು ಹೊಂದಿದೆ. ಈ ರೀತಿಯ ಚಾರಿತ್ರಿಕ ಹಿನ್ನೆಲೆ ಹೊಂದಿರುವ ಈ ಜಿಲ್ಲೆಯಲ್ಲಿ ವಿಜಯನಗರ ಅರಸರ ಆನೆಗೊಂದಿ ಮೂಲ ನೆಲೆಯು ಸೇರ್ಪಡೆಗೊಂಡಿದೆ. ಇದರ ವ್ಯಾಪ್ತಿಯಲ್ಲಿ ಕಾರಟಗಿಯಲ್ಲಿ ಭತ್ತ ಸಂಶೋಧನಾ ಕೇಂದ್ರವನ್ನು ಸ್ಥಾಪಿತವಾಗಿದ್ದು, ತುಂಗಭದ್ರ ಆಣೆಕಟ್ಟಿನಿಂದ ಕೃಷಿಗೆ ನೀರಾವರಿ ಸೌಲಭ್ಯ ಪಡೆದಿದೆ. ಇದರಿಂದ ಕೃಷಿಗೆ ಹೆಚ್ಚಿನ ಪ್ರಧಾನ್ಯತೆ ನೀಡಲಾಗಿದ್ದು, ಜಮೀನುಹೊಂದಿದ ಮತ್ತು ಕೃಷಿ ಕೌಶಲ್ಯ ಹೊಂದಿರುವ ವರ್ಗದವರೇ ಈ ಸೌಲಭ್ಯ ಪಡೆಯುತ್ತಿರುವರು. ರಾಜರ ಕಾಲದ ಇನಾಮು ಭೂಮಿಗಳು ಇಲ್ಲದೇ ಹಾಗೂ ಕೃಷಿ ಜ್ಞಾನ ರೂಢಿಸಿಕೊಂಡು ಬಂದಿರದ ಅಲೆಮಾರಿ ಸಮುದಾಯಗಳು ಕೈಗಾರೀಕೀಕರಣ ಜಾಗತೀಕರಣದಿಂದ ಕುಲಕಸುಬುಗಳನ್ನು ಕಳೆದುಕೊಳ್ಳುತ್ತಿವೆ. ಕೈಗಾರೀಕೀಕರಣ ಪ್ರಭಾವದಿಂದ ಕೊಪ್ಪಳದ ಭಾಗ್ಯನಗರದಲ್ಲಿರುವ ಕರ್‌ಕರ್‌ಮುಂಡ ಸಮುದಾಯದವರು ಕೂದಲು ವ್ಯಾಪಾರಕ್ಕೆ ಆಧುನಿಕ ಲೇಪನ ನೀಡಿ ಆರ್ಥಿಕ ಭದ್ರತೆ ಕಂಡುಕೊಂಡಿದ್ದಾರೆ. ಕರ್ನಾಟಕದಲ್ಲಿನ ಕರ್‌ಕರ್ ಮುಂಡರಿಗೆ ಹೋಲಿಸಿದರೆ ಇವರು ಹೆಚ್ಚು ಆರ್ಥಿಕವಾಗಿ ಸದೃಢರಾಗಿರುವರು. ಇವರ ಪೂರ್ವಿಕರು ವಿಜಯನಗರದ ಪತನ ನಂತರ ಬಹು ಕಾಲದಿಂದ ಇಲ್ಲಿಯೇ ನೆಲೆಸಿರುವರು ಮತ್ತೆ ಕೆಲವರು ಅವಿಭಾಜಿತ ಆಂಧ್ರಪ್ರದೇಶ ಮತ್ತು ತಮಿಳುನಾಡಿನಿಂದ ವಲಸೆ ಬಂದಿರುವುದು ತಿಳಿಯುತ್ತದೆ. ಸಮೀಕ್ಷೆಯಂತೆ ೧೩ ಕುಟಂಬಗಳಲ್ಲಿ ೫೪ ಜನ ಸಂಖ್ಯೆ ಇರುವುದು ಕಂಡುಬರುತ್ತದೆ. ಕರ್ನಾಟಕದ ಕೂದಲು ವ್ಯಾಪಾರದ ಕೇಂದ್ರಸ್ಥಾನವಾಗಿದ್ದು, ಹೋಲ್‌ಸೆಲ್ ವ್ಯಾಪಾರಿಗಳು ಅಧಿಕ ಸಂಖ್ಯೆಯಲ್ಲಿರುವರು. ಲಿಂಗಾನುಪಾತ ವ್ಯತ್ಯಾಸ ಅಷ್ಟಾಗಿ ಕಂಡುಬರುವುದಿಲ್ಲ. ಆಧುನಿಕ ತಂತ್ರಜ್ಞಾನವನ್ನು ಬಳಸಿ ಕೂದಲು ವ್ಯಾಪಾರ ಮಾಡುವ ಶೈಕ್ಷಣಿಕ ಜ್ಞಾನ ಹೊಂದಿದವರಾಗಿದ್ದಾರೆ. ಇವರು ಆಂಧ್ರಪ್ರದೇಶ, ತಮಿಳುನಾಡು, ದಾವಣಗೆರೆ, ಕಿತ್ತೂರಿನ ಸಮುದಾಯದವರೊಂದಿಗೆ ವೈವಾಹಿಕ ಸಂಬಂಧ ಹೊಂದಿರುವರು.

ಕೋಷ್ಟ ೫.೩.೩ ಧಾರವಾಡ ಜಿಲ್ಲೆಯ ಲಿಂಗವಾರು ಜನಸಂಖ್ಯೆ

| **ಧಾರವಾಡ ಜಿಲ್ಲೆ**<br>**ಒಟ್ಟು ಕುಟುಂಬಗಳು** | ೫ | |
|---|---|---|
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೧೬ | ೫೭.೧ |
| ಮಹಿಳೆಯರು | ೧೨ | ೪೨.೯ |
| **ಒಟ್ಟು ಜನಸಂಖ್ಯೆ** | **೨೮** | **೧೦೦** |

ಧಾರವಾಡ ಜಿಲ್ಲೆಯು ಉತ್ತರ ಕರ್ನಾಟಕದ ಸಾಂಸ್ಕೃತಿಕ ಕೇಂದ್ರವೆಂಬ ಹೆಗ್ಗಳಿಕೆ ಪಾತ್ರವಾಗಿದೆ. ದ.ರಾ.ಬೇಂದ್ರೆಯವರ ಕಾಲದಿಂದಲೂ ವಿದ್ಯಾನಗರಿ ಎಂಬ ಹೆಸರಿನಿಂದ ಪ್ರಸಿದ್ಧಿಯಾಗಿದ್ದು, ಕಿತ್ತೂರಿನ ಆಳ್ವಿಕೆ ಒಳಪಟ್ಟಿದ್ದ ಧಾರವಾಡ ಪ್ರದೇಶವು ಇದರ ಅವನತಿಯ ನಂತರ ಬ್ರಿಟಿಷರ ಕಾಂಟೋನ್ಮೆಂಟಾಗಿ ಪರಿವರ್ತಿತವಾಗಿ ಆಡಳಿತದ ಮುಖ್ಯ ಕೇಂದ್ರವಾಯಿತು. ಬ್ರಿಟಿಷರ ಸ್ಮಾರಕಗಳು ಇಂದಿಗೂ ಜೀವಂತವಾಗಿರುವುದನ್ನು ಇಲ್ಲಿ ಕಾಣಬಹುದಾಗದೆ. ಸ್ವಾತಂತ್ರ್ಯ ಹೋರಾಟ ಮತ್ತು ಕರ್ನಾಟಕ ಏಕೀಕರಣ ಚಳುವಳಿಯ ಕಾರ್ಯಚಟುವಟಿಕೆಗಳ ಮುಖ್ಯ ಕೇಂದ್ರವಾಗಿತ್ತು.

ಕರ್ನಾಟಕ ಏಕೀಕರಣ ಮತ್ತು ರಾಜ್ಯ ಪುನರ್ ವಿಂಗಡಣೆ ಆಗುವವರೆಗೂ ಈ ಜಿಲ್ಲೆಯು ಬಾಂಬೆ ಪ್ರಸಿಡೆನ್ಸಿಯ ಭಾಗವಾಗಿತ್ತು. ೨೦೧೧ರ ಜನಗಣತಿ ಪ್ರಕಾರ ೧.೮೪೭,೦೨೩ ಜನಸಂಖ್ಯೆ ಈ ಜಿಲ್ಲೆಯಲ್ಲಿದ್ದು, ಅದರಲ್ಲಿ ಕರ್‌ಕರ್ ಮುಂಡರ ಜನಸಂಖ್ಯೆ ಕೇವಲ ೨೮ ಮಾತ್ರ ಕಂಡು ಬರುತ್ತದೆ. ಈ ಸಮುದಾಯದ ಐದು ಕುಟುಂಬಗಳಿದ್ದು ೧೬ ಜನ ಪುರುಷರು ಮತ್ತು ೧೨ ಜನ ಮಹಿಳೆಯರಿರುವರು. ಇವರು ಸುರಪುರ ಭಾಗದಿಂದ ವಲಸೆ ಬಂದವರಾಗಿದ್ದು, ಧಾರವಾಡದ ಗರಗದಲ್ಲಿ ಈ ಕೌಟುಂಬಗಳು ನೆಲೆಸಿವೆ. ಕರ್‌ಕರ್ ಮುಂಡರ ಹೆಸರು ಮತ್ತು ಇರುವಿಕೆಯೇ ಇಲ್ಲಿನ ಜನರಿಗೆ ತಿಳಿಯದೇ ಅಜ್ಞಾನವಾಗಿರುವುದನ್ನು ಕಾಣಬಹುದಾಗಿದೆ.

ಕೋಷ್ಟಕ ೫.೨.೩

| ಬಳ್ಳಾರಿ ಜಿಲ್ಲೆ<br>ಒಟ್ಟು ಕುಟುಂಬಗಳು ೪ | | |
|---|---|---|
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೭ | ೪೬.೭ |
| ಮಹಿಳೆಯರು | ೮ | ೫೩.೩ |
| **ಒಟ್ಟು ಜನಸಂಖ್ಯೆ** | ೧೫ | ೧೦೦ |

ಬಳ್ಳಾರಿ ಜಿಲ್ಲೆಯು ವಿಜಯನಗರ ಸಾವಮ್ರಾಜ್ಯದ ವ್ಯಾಪ್ತಿಗೆ ಒಳಪಟ್ಟ ಪ್ರದೇಶವಾಗಿದ್ದು ಅದು ಪತನಗೊಂಡ ನಂತರ ಅನೇಕ ಪಾಳೆಪಟ್ಟುಗಳ ಆಳ್ವಿಕೆಗೆ ಮತ್ತು ಅಂತಿಮವಾಗಿ ಮದ್ರಾಸ್ ಪ್ರಸಿಡೆನ್ಸಿಯ ಕಾಂಟೋನ್‌ಮೆಂಟ್ ಆಗಿತ್ತು. ಕರ್ನಾಟಕದ ಏಕೀಕರಣದ ಪ್ರಯತ್ನದ ಫಲವಾಗಿ ೧೯೫೩ರಲ್ಲಿ ಕರ್ನಾಟಕಕ್ಕೆ ಸೇರ್ಪಡೆಗೊಂಡಿದೆ. ಸಾಂಸ್ಕೃತಿಕವಾಗಿ ಮತ್ತು ಆರ್ಥಿಕವಾಗಿ ಬಳ್ಳಾರಿ ಗಣಿ ಉದ್ಯಮದಿಂದ ಜಾಗತಿಕ ಮಟ್ಟದಲ್ಲಿ ಹೆಸರು ಮಾಡಿದೆ. ತೆಲಂಗಾಣ ಮತ್ತು ಆಂಧ್ರಪ್ರದೇಶದ ಗಡಿ ಅಂಚಿನ ಜಿಲ್ಲೆಯಾಗಿದ್ದು, ತೆಲುಗಿನ ಸಂಸ್ಕೃತಿಯ ಪ್ರಭಾವ ಅಧಿಕವಾಗಿರುವುದನ್ನು ಕಾಣುತ್ತೇವೆ. ೨೦೧೧ರ ಜಗಣತಿಯ ಪ್ರಕಾರ ೨,೪೫೨,೫೯೫ ಜನಸಂಖ್ಯೆ ಹೊಂದಿದೆ. ಇದರಲ್ಲಿ ಬೇಡರು, ಲಿಂಗಾಯಿತರು, ರೆಡ್ಡಿಗಳು, ಕುರುಬರು, ಮುಸ್ಲಿಂರು ಅಧಿಕ ಪಾಲುಹೊಂದಿದ್ದಾರೆ. ಇದಲ್ಲದೆ ಅನೇಕ ಅಲೆಮಾರಿ ಸಮುದಾಯಗಳು ಪೂರ್ವಿಕ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಅಲೆಮಾರಿ ಸಮುದಾಯಗಳು ಅಲ್ಪಸಂಖ್ಯಾತವಾಗಿದ್ದು ಹಕ್ಕಿಪಿಕ್ಕಿ, ಬುಡ್ಗಜಂಗಮ, ಸಿಂಧೋಳ್ ಸಮುದಾಯಗಳು ಪ್ರಮುಖವಾಗಿವೆ. ಕರ್‌ಕರ್‌ಮುಂಡ ಸಮುದಾಯದ ನಾಲ್ಕು ಕುಟುಂಬಗಳು ಕಂಪ್ಲಿಯ ಎಂ.ಡಿ. ಕ್ಯಾಂಪಿನಲ್ಲಿ ನೆಲೆನಿಂತಿದ್ದು, ಇದಲ್ಲದೆ ಬಳ್ಳಾರಿಯ ಗುಗ್ಗರಿ ಹಟ್ಟಿಯಲ್ಲಿ ವಲಸೆ ಪ್ರಕ್ರಿಯೆಯಿಂದ ನೆಲೆನಿಂತಿರುತ್ತವೆ. ಇಲ್ಲಿನ ಮೊಂಡರು ಸಮುದಾಯವು ಬೇಡ ಸಮುದಾಯದಲ್ಲಿ ಬೆರೆತು ಹೋಗಿ ಕೇವಲ ೪ ಕುಟುಂಬಗಳು ಮುಂಡಾಲ ಬಂಡ ಹೆಸರಿನಲ್ಲಿ ಉಳಿದುಕೊಂಡು ಇತರೆ ಅಲೆಮಾರಿಗಳಂತೆ

ಬದುಕುತ್ತಿದ್ದು, ಮೂಲಭೂತ ಸೌಲಭ್ಯಗಳಿಂದ ವಂಚಿತವಾಗಿ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕವಾಗಿ ಹಿಂದುಳಿದಿದ್ದಾರೆ.

ಕೋಷ್ಟಕ ೫.೨.೪

| **ರಾಯಚೂರು ಜಿಲ್ಲೆ** | | |
|---|---|---|
| **ಒಟ್ಟು ಕುಟುಂಬಗಳು** | **೫೦** | |
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೧೨೦ | ೫೨.೪ |
| ಮಹಿಳೆಯರು | ೧೦೯ | ೪೭.೬ |
| **ಒಟ್ಟು ಜನಸಂಖ್ಯೆ** | **೨೨೯** | ೧೦೦ |

ರಾಯಚೂರು ಜಿಲ್ಲೆಯು ವಿಜಯನಗರ ಕಾಲದಲ್ಲಿನ ದೋ ಅಬ್ ಪ್ರದೇಶವನ್ನು ಒಳಗೊಂಡ ಜಿಲ್ಲೆಯಾಗಿದ್ದು, ಈ ಪ್ರದೇಶಕ್ಕಾಗಿಯೇ ಬಹುಮನಿ ಮತ್ತು ವಿಜಯನಗರ ಸಾಮ್ರಾಜ್ಯಗಳು ೧೫೬೫ರ ವರೆಗೂ ಹೋರಾಟಮಾಡಿರುವುದನ್ನು ಕಾಣುತ್ತೇವೆ. ವಿಜಯನಗರ ಪತನದ ನಂತರ ಈ ಪ್ರದೇಶವು ಬಹಮನಿ ಸಾಮ್ರಾಜ್ಯದ ಪಾಲಾಯಿತು. ನಂತರದಲ್ಲಿ ಹೈದ್ರಾಬಾದ್ ನಿಜಾಮನ ಆಳ್ವಿಕೆಗೆ ಒಳಪಟ್ಟಿತು ಎಂಬುದನ್ನು ಚರಿತ್ರೆಯ ಮೂಲಕ ತಿಳಿಯಬಹುದು. ಪ್ರಬಲ ಏಕೀಕರಣ ಚಳಿವಳಿಯ ಪರಿಣಾಮ ಕರ್ನಾಟಕಕ್ಕೆ ಸೇರ್ಪಡೆಯಾಯಿತು. ರಾಯಚೂರು ಗಡಿ ಭಾಗದ ಜಿಲ್ಲೆಯಾಗಿದ್ದು, ಕರ್ನಾಟಕದಲ್ಲಿದ್ದರೂ ತೆಲುಗು ಭಾಷೆಯನ್ನು ಹೆಚ್ಚಿನ ಜನರು ಮಾತನಾಡುವುದನ್ನು ಕಾಣಬಹುದು. ಹಟ್ಟಿ ಚಿನ್ನದ ಗಣಿ, ಶಾಖೋತ್ಪನ್ನ ಕೇಂದ್ರ, ತುಂಗಾಭದ್ರಾ ನದಿಯಿಂದ ನೀರಾವರಿ ಸೌಲಭ್ಯ ಹೊಂದಿರುವ ರಾಯಚೂರು ಪ್ರಾಕೃತಿಕವಾಗಿ ಅಗಾಧ ಸಂಪತ್ತು ಹೊಂದಿರುವ ಪ್ರದೇಶ ಎಂದರೂ ತಪ್ಪಾಗಲಿಕ್ಕಿಲ್ಲ. ೨೦೧೧ರ ಜನಗಣತಿಯ ಪ್ರಕಾರ, ೧,೯೨೮,೮೧೨ ಜನಸಂಖ್ಯೆ ಹೊಂದಿರುವ ರಾಯಚೂರು ಜಿಲ್ಲೆಯಲ್ಲಿ ಕೋಷ್ಟಕದ ಅನ್ವಯ ೨೨೯ ಜನ ಕರ್‌ಕರ್ ಮುಂಡ ಸಮುದಾಯದ ಜನರನ್ನು ಕಾಣಬಹುದು. ಮಾಹಿತಿದಾರರು ತಿಳಿಸುವಂತೆ ಇವರು ಕೋಡೆಕಲ್ಲು,ಸುರಪುರದಿಂದ ವಲಸೆ ಹೋದವರೆಂದು

ತಿಳಿದುಬರುತ್ತದೆ. ಕಡಿಮೆ ಜನಸಂಖ್ಯೆ ಹೊಂದಿರುವ ಈ ಸಮುದಾಯ ಇತರ ಸಮುದಾಯಗಳಲ್ಲಿ ಬೆರೆತುಹೋಗುತ್ತಿರುವುದರಿಂದ ಅವನತಿಯ ಅಂಚಿನಲ್ಲಿದೆ ಎಂದು ಹೇಳಬಹುದು.

ಕೋಷ್ಟಕ ೫.೨.೫

| **ಬಾಗಲಕೋಟೆ ಜಿಲ್ಲೆ** | | |
|---|---|---|
| ಒಟ್ಟು ಕುಟುಂಬಗಳು | ೩೬ | |
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೮೫ | ೫೦.೯ |
| ಮಹಿಳೆಯರು | ೮೨ | ೪೯.೧ |
| **ಒಟ್ಟು ಜನಸಂಖ್ಯೆ** | **೧೬೭** | **೧೦೦** |

ವಿಜಯಪುರ ಜಿಲ್ಲೆಯನ್ನು ವಿಭಜಿಸಿ ಈ ಜಿಲ್ಲೆಯನ್ನು ರಚಿಸಲಾಗಿದ್ದು, ರಾಜ್ಯಗಳ ಪುನರ್ ವಿಂಗಡನೆ ಆಗುವ ಮುನ್ನ ಈ ಪ್ರದೇಶವು ಮುಂಬೈ ರಾಜ್ಯದ ಭಾಗವಾಗಿತ್ತು. ರಾಷ್ಟ್ರಕೂಟರು, ಬಾದಾಮಿ ಚಾಲುಕ್ಯರು, ಮತ್ತು ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಕುರುಹುಗಳಾಗಿ ಕೂಡಲಸಂಗಮ, ಬದಾಮಿ, ಐಹೊಳೆ, ಪಟ್ಟದಕಲ್ಲು, ಮಹಾಕೂಟ ದೇವಾಲಯಗಳನ್ನು ಕಾಣಬಹುದು. ಚಾರಿತ್ರಿಕ ಹಿನ್ನೆಲೆಯಲ್ಲಿ ಸಾಂಸ್ಕೃತಿಕವಾಗಿರುವ ಬಾಗಲಕೋಟೆ ಜಿಲ್ಲೆಯು, ಇಂದು ಕರ್ನಾಟಕ ಪ್ರವಾಸಿ ತಾಣಗಳಲ್ಲಿ ಮಹತ್ವ ಸ್ಥಾನಪಡೆದಿದೆ. ಪಂಚನದಿಗಳ ಬೀಡಾಗಿದ್ದ ವಿಜಯಪುರದಿಂದ ಪ್ರಾಕೃತಿಕ ಸಂಪತ್ತಿನ ಹಂಚಿಕೆಯೊಂದಿಗೆ ಸ್ವಯತ್ತ ಜಿಲ್ಲೆಯು ೨೦೧೧ರ ಜನಗಣತಿಯ ಅನ್ವಯ ೧,೮೮೯,೭೫೨ ಜನಸಂಖ್ಯೆ ಇದೆ. ಇದರಲ್ಲಿ ಅಧ್ಯಯನದ ಸಮೀಕ್ಷೆಯಿಂದ ೧೬೭ ಕರ್‌ಕರ್‌ಮುಂಡ ಸಮುದಾಯದ ಜನಸಂಖ್ಯೆಯನ್ನು ಕಾಣಬಹುದು.ಅತೀ ಕಡಿಮೆ ಜನಸಂಖ್ಯೆ ಹೊಂದಿರುವ ಈ ಸಮುದಾಯದ ೩೬ ಕುಟುಂಬಗಳು ಬಾಗಲಕೋಟೆಯ ಕುಂಬಾರಹಳ್ಳ, ಮುಧೋಳ್, ಬೀಳಗಿ, ಇಳಕಲ್‌ಗಳಲ್ಲಿ ನೆಲ ನಿಂತಿರುವುದನ್ನು ಕಾಣಬಹುದು.

ಕೋಷ್ಟಕ ೫.೨.೬

| ಬೆಳಗಾವಿ ಜಿಲ್ಲೆ | | |
|---|---|---|
| ಒಟ್ಟು ಕುಟುಂಬಗಳು | ೧೧೪ | |
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೨೮೮ | ೪೮.೨ |
| ಮಹಿಳೆಯರು | ೩೧೦ | ೫೧.೮ |
| **ಒಟ್ಟು ಜನಸಂಖ್ಯೆ** | **೫೯೮** | **೧೦೦** |

ಬೆಳಗಾವಿ ಜಿಲ್ಲೆಯು ರಾಜ್ಯಪುನರ್ ವಿಂಗಡೆನೆಂಯಾಗುವುದಕ್ಕಿಂತಲೂ ಮುಂಚಿತವಾಗಿ ಬೊಂಬಾಯಿ ಪ್ರಸೆಡೆನ್ಸಿಯ ಆಳ್ವಿಕೆಗೆ ಒಳಪಟ್ಟಿತ್ತು. ಮರಾಠರ ಮತ್ತು ಕಿತ್ತೂರು ರಾಜ್ಯಗಳಿಗೆ ಒಳಪಟ್ಟಿದ್ದ ಅನೇಕಸ್ಥಳಗಳು ಬೆಳಗಾವಿ ಜಿಲ್ಲೆಯಲ್ಲಿವೆ. ಭಾಷಾವಾರು ಪ್ರಾಂತ್ಯ ವಿಂಗಡಣೆಯಿಂದ ಕರ್ನಾಟಕಕ್ಕೆ ಸೇರಿದ ಬೆಳಗಾವಿ ಮಹಾರಾಷ್ಟ್ರಕ್ಕೆ ಸೇರಬೇಕು ಎಂದು ಮರಾಠಿಗರು ಇಂದಿಗೂ ಹೋರಾಟಗಳು ನಡೆಯುತ್ತಲಿವೆ. ಬೆಳಗಾವಿ ಅರೆಮಲೆನಾಡ ಪ್ರದೇಶದಿಂದ ಕೂಡಿದ್ದು, ಖಾನಾಪುರ ತಾಲೂಕಿನ ಸಹ್ಯಾದ್ರಿಪರ್ವತ ಶ್ರೇಣಿಯು ಕರ್ನಾಟಕ, ಗೋವಾ, ಮಹಾರಾಷ್ಟ್ರ ರಾಜ್ಯಗಳ ಸಂಗಮವಾಗಿದೆ. ಇಲ್ಲಿನ ಭೀಮನಗಡ ಕೋಟೆಯು ಶಿವಾಜಿ ಆಳ್ವಿಕೆಗೆ ಬೆಳಗಾವಿ ಒಳಪಟ್ಟಿತ್ತು ಎಂದು ತಿಳಿಯಲು ನೆರವಾಗುವುದು. ಬೆಳಗಾವಿ ಜಿಲ್ಲೆಯಲ್ಲಿ ಕತ್‌ಕರಿ, ಗೌಳಿ, ಧನಗಾರ್‌ಗೌಳಿ ಎಂಬ ಹೆಸರಿನ ಪಾರೆಸ್ಟ್ ನೊಮ್ಯಾಡಿಕ್ ಸಮುದಾಯಗಳನ್ನು ಕಾಣಬಹುದಾಗಿದೆ. ಈ ಜಿಲ್ಲೆಯಲ್ಲಿ ನೆಲೆನಿಂತಿರುವ ಬುಡಕಟ್ಟು ಸಮುದಾಯಗಳು ಅಂದಿನ ಕಿತ್ತೂರು ರಾಜ್ಯದ ಆಡಳಿತದಲ್ಲಿ ಆಪ್ತವರ್ಗಗಳಾಗಿದ್ದವು ಎಂದು ತಿಳಿದುಬರುತ್ತದೆ. ಅಂತಹ ಆಪ್ತವರ್ಗಗಳಲ್ಲಿ ಗೂಢಚಾರಿ ಕೆಲಸ ನಿರ್ವಹಿಸುತ್ತಿದ್ದ ಕರ್‌ಕರ್‌ಮುಂಡ ಸುಮುದಾಯವು ಒಂದಾಗಿದೆ. ಕರ್ನಾಟಕ ರಾಜ್ಯದ ಕರ್‌ಕರ್ ಮುಂಡ ಸಮುದಾಯ ಜನಸಂಖ್ಯೆಯನ್ನು ಗಮನಿಸಿದಾಗ ಬೆಳಗಾವಿ ಜಿಲ್ಲೆಯಲ್ಲಿ ಅಧಿಕ ಸಂಖ್ಯೆಯ ಜನಸಂಖ್ಯೆ ಕಂಡು ಬರುತ್ತದೆ. ಬೆಳಗಾವಿ ಜಿಲ್ಲೆಯ ಕಿತ್ತೂರು, ಮಲ್ಲಾಪುರ, ಕನ್ನದಾಳ್, ಗೋಕಾಕ್, ಹಳ್ಯಾಳ, ಇಟಗಿ ಕ್ರಾಸ್,

ದಿಂಡಲಕೊಪ್ಪ, ಹಲ್ಲಾವರ, ಮುನವಳ್ಳಿ, ಬೈಲಹೊಂಗಲ, ಗಂಜಿಗಟ್ಟು ನಂದಿಗಟ್ಟು, ಕೊಕ್ಕಟ್ನೂರು, ಇಡಕಲಂ ಹಾರೋಗೇರಿ, ಕೊಟ್ಟಲಗಿ, ಮುಂತಾದ ಸ್ಥಳಗಳಲ್ಲಿ ೧೧೪ ಕುಟುಂಬಗಳು ನೆಲೆನಿಂತಿದ್ದು, ೫೪೮ ಜನಸಂಖ್ಯೆ ಕಂಡು ಬರುತ್ತದೆ. ೨೦೧೧ರ ಜನಗಣತಿಯಂತೆ ೪,೭೭೯,೬೬೧ ಜನಸಂಖ್ಯೆ ಬೆಳಗಾವಿ ಜಿಲ್ಲೆಯಲ್ಲಿದ್ದು, ಕರ್‌ಕರ್ ಮುಂಡರ ಜನಸಂಖ್ಯೆಯನ್ನು ಹೋಲಿಸಿ ನೋಡಿದಾಗ ತೀರ ವಿರಳ ಜನಸಂಖ್ಯೆ ಕಂಡುಬರುತ್ತದೆ. ಬೆಳಗಾವಿ ಜಿಲ್ಲೆಯು ಕೃಷಿಕವಾಗಿ ಮತ್ತು ಶೈಕ್ಷಣಿಕವಾಗಿ ಮೂಂಚೂಣೆಯಲ್ಲಿದ್ದರೂ ಸಹ ನಾಡನ್ನು ಸೇರದ ಮತ್ತು ಸೇರಿದ ಅಲೆಮಾರಿ ಸಮುದಾಯಗಳು ಹಿಂದುಳಿಯುತ್ತಲೇ ಬಂದಿದ್ದು, ಸಮಾಜದ ಅಂಚಿಗೆ ತಳ್ಳಲ್ಪಟ್ಟಿತ್ತಿವೆ. ಕರ್‌ಕರ್ ಮುಂಡರ ಪೂರ್ವಿಕರು ಕಿತ್ತೂರು ಸಂಸ್ಥಾನದಲ್ಲಿ ಗೂಢಾಚಾರಿ ಕೆಲಸ ಮಾಡುತ್ತಾ ಅದರ ಪತನ ನಂತರದಲ್ಲಿ ಇದರ ಸುತ್ತಮುತ್ತಲಿನಲ್ಲೇ ಪ್ರದೇಶದಲ್ಲಿ ನೆಲೆಸಿದ್ದರಿಂದ್ಲ ಅಧಿಕ ಸಂಖ್ಯೆಯ ಕರ್‌ಕರ್ ಮುಂಡರನ್ನು ಇಲ್ಲಿ ಕಾಣಬಹುದು ಎಂದು ಮಾಹಿತಿದಾರರು ಅಭಿಪ್ರಾಯ ಪಡುವರು. ಕೃಷಿಯನ್ನು ಅರಿಯದೆ ಇರುವ ಇವರಿಗೆ ನೀಡಿದ ಇನಾಮು ಭೂಮಿಗಳು ಇಂದು ಬೇರೆಯವರ ಪಾಲಾಗಿದ್ದು, ಕೂಲಿ, ಹಂದಿಸಾಕಾಣಿಕೆ, ಮೀನುಗಾರಿಕೆ, ಕೂದಲು ವ್ಯಾಪಾರ ಹಾಗೂ ಭಿಕ್ಷೆಯಿಂದ ಜೀವನ ನಡೆಸುತ್ತಿದ್ದಾರೆ. ಕಿತ್ತೂರು ಸಮೀಪವಿರುವ ಮಲ್ಲಾಪುರ ಗ್ರಾಮದಲ್ಲಿ ಈ ಸಮುದಾಯದವರನ್ನು ಇತರ ಸಮುದಾಯದವರು ಕಳಂಕಿತ ಹಣೆಪಟ್ಟಿಯನ್ನು ನೀಡಿ ಅದರಂತೆಯೇ ಕರೆಯುತ್ತಿರುವುದನ್ನು ಕಾಣಬಹುದು. ಇಲ್ಲಿರುವ ಕರ್‌ಕರ್ ಮುಂಡರು ಕಿತ್ತೂರು ಸಂಸ್ಥಾನದ ಪತನ ನಂತರ ದೇವಲಾಪುರದಲ್ಲಿ ನೆಲೆ ನಿಂತು ಪುನಃ ಅವರ ಪೂರ್ವಿಕರ ನೆಲೆಗೆ ವಾಪಾಸಾಗಿರುವರು. ಅಥಣಿ ತಾಲೂಕಿನ ಹಳ್ಯಾಳ ಗ್ರಾಮದಲ್ಲಿನ ಈ ಸಮುದಾಯದವರಿಗೆ ಸಮುದಾಯ ಭವನವನ್ನು ಸ್ಥಳೀಯ ಜನಪ್ರತಿನಿಧಿಗಳು ನಿರ್ಮಿಸಿಕೊಟ್ಟಿರುವುದನ್ನು ಕಾಣಬಹುದಾಗಿದೆ. ಬೆಳಗಾವಿ ಜಿಲ್ಲೆಯಲ್ಲಿನ ಈ ಸಮುದಾಯದವರು ಇತರ ಸಮುದಾಯಗಳಂತೆ ರಾಜಕೀಯ, ಶೈಕ್ಷಣಿಕ, ಆರ್ಥಿಕ ಮತ್ತು ಸಮಾಜಿಕವಾಗಿ ಸದೃಢರಾಗದೆ ಅಭದ್ರತೆಯಿಂದ ಬದುಕುತ್ತಿರುವುದನ್ನು ಕಾಣಬಹುದಾಗಿದೆ. ಬೆಳಗಾವಿಯಲ್ಲಿನ ಕರ್‌ಕರ್ ಮುಂಡ ಸಮುದಾಯದವರು ಸವದತ್ತಿ ಎಲ್ಲಮ್ಮ, ಗೂಗಲಮರಿ ದುರ್ಗಮ್ಮ, ಮುತ್ಯಾಲ ಮಾರಿ ದುರ್ಗಮ್ಮ, ಕೊಲ್ಲಾಪುರದ ಮಹಾಲಕ್ಷ್ಮಿ, ಇಡಚಣಗಿ ಮಸುಬ ದೇವರುಗಳನ್ನು ಪೂಜಿಸುವರು. ಮಾತೃಭಾಷೆಯಾದ ತೆಲುಗಿನ ಜೊತೆಗೆ ಕನ್ನಡ,ಮರಾಠಿ ಭಾಷೆಗಳನ್ನುಮಾತನಾಡುವರು.

ಕೋಷ್ಟಕ ೫.೨.೭

| ಯಾದಗಿರಿ ಜಿಲ್ಲೆ | | |
|---|---|---|
| ಒಟ್ಟು ಕುಟುಂಬಗಳು | ೦೪ | |
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೧೧ | ೬೮.೮ |
| ಮಹಿಳೆಯರು | ೦೫ | ೩೧.೨ |
| **ಒಟ್ಟು ಜನಸಂಖ್ಯೆ** | **೧೬** | **೧೦೦** |

ಗುಲ್ಬರ್ಗ ಜಿಲ್ಲೆಯನ್ನು ವಿಭಜಿಸಿ ರಾಜ್ಯದ ೩೦ನೇ ಜಿಲ್ಲೆಯಾಗಿ ಯಾದಗಿರಿ ಜಿಲ್ಲೆಯುಉದಯವಾಯಿತು. ಈ ಜಿಲ್ಲೆಯ ಬಹುತೇಕ ಗಡಿ ಆಂಧ್ರಪ್ರದೇಶದೊಂದಿಗೆ ಕೂಡಿದೆ. ಸುರಪುರ, ಶಹಪುರ, ಯಾದಗಿರಿ ತಾಲ್ಲೂಕುಗಳಿಂದ ಕೂಡಿರುವ ಈ ಜಿಲ್ಲೆಯಲ್ಲಿ ಕೃಷ್ಣ ನದಿಗೆ ನಾರಾಯಣಪುರ ಜಲಾಶಯವನ್ನು ಕಟ್ಟಲಾಗಿದೆ. ಅದರ ಫಲವಾಗಿ ನೀರಾವರಿಗೆ ಸೌಲಭ್ಯ ಪಡೆದಿದೆ. ಯಾದಗಿರಿ ಜಿಲ್ಲೆಯ ಹೈದ್ರಾಬಾದ್ ನಿಜಾಮನ ಆಳ್ವಿಕೆ ಒಳಪಟ್ಟಿದ್ದ ಕಾಲದಲ್ಲಿ ಅಲ್ಲಿನ ರಜಾಕಾರರ ಹಾವಳಿಯಿಂದ ಮುಸ್ಲಿಂಮೇತರ ಸಮುದಾಯಗಳು ಎಲ್ಲಾ ರೀತಿಯ ಶೋಷಣೆಗೆ ಒಳಗಾಗಿರುವುದನ್ನು ಕಾಣಬಹುದು. ಸುರಪುರ ನಾಯಕರ ಆಳ್ವಿಕೆಯ ಅಂತ್ಯದಿಂದಾಗಿ ಅಲ್ಲಿನ ಆಪ್ತವರ್ಗಗಳು ರಜಕಾರರ ಮತಾಂತರ ನೀತಿಯನ್ನು ತಾಳಲಾರದೇ ಸುರಪುರದ ಕೇಂದ್ರ ನೆಲೆಯಿಂದ ದಕ್ಷಿಣ ಮತ್ತು ಪಶ್ಚಿಮ ಕರ್ನಾಟಕದೆಡೆಗೆ ವಲಸೆ ಪ್ರಕ್ರಿಯೆಯನ್ನು ಆರಂಭಿಸಿದರು. ಅದರ ಫಲವಾಗಿ ಕರ್‌ಕರ್ ಮುಂಡ ಸಮುದಾಯದವರು ಸಹ ಯಾದಗಿರಿ, ಕೊಡೆಕಲ್ಲಿನಲ್ಲಿನ ಕಡೆಗೆ ವಲಸೆ ಬಂದು ನೆಲೆಸಿರುವರು ಎಂಬುದು ಮಾಹಿತಿದಾರರಿಂದ ತಿಳಿದು ಬರುವುದು. ರಜಕಾರರ ಮತಾಂತರ ನೀತಿಯಿಂದ ಬೇಸತ್ತು ಮತ್ತು ಅತ್ಯಾಚಾರ ದರೋಡಿ, ಲೂಟಿಗಳನ್ನು ತಾಳಲಾರದೆ ಬೆಳಗಾವಿ, ಕೊಪ್ಪಳ ಭಾಗದಲ್ಲಿ ನೆಲೆಸಿರುವವರು ಸಹ ಇದೇ ಕಾರಣದಿಂದ ವಲಸೆ ಬಂದಿರುವರು ಎಂಬ ಅಭಿಪ್ರಾಯಗಳಿವೆ. ಸುರಪುರದ ಅರಸರು ಗೋಸಲ ಬೆಡಗಿನವರಾಗಿದ್ದು, ನಾವು ಅದೇ ಬೆಡಗಿನವರಿರಾಗಿದ್ದು, ನಮ್ಮ ಅಣ್ಣ ತಮ್ಮಂದಿರಾಗಿದ್ದಾರೆ ಎಂದು ಬೇಡ ಸಮುದಾಯದೊಂದಿಗೆ ಸಮೀಕರಿಸಿದ್ದಾರೆ. ಅದು ಸತ್ಯವು ಆಗಿರುವ ಸಾಧ್ಯತೆಯು ಇರಬಹುದಾಗಿದೆ. ಕೇವಲನಾಲ್ಕು ಕುಟುಂಬಗಳು

ಮಾತ್ರ ಕರ್‌ಕರ್ ಮುಂಡ ಎಂಬ ಹೆಸರಿನೊಂದಿಗೆ ಭಿಕ್ಷಾವೃತ್ತಿಯನ್ನು ಮಾಡುತ್ತಿದ್ದು, ಉಳಿದವರು ಬೇಡ ಸಮುದಾಯದಲ್ಲಿ ಬೆರೆತು ಹೋಗಿರುವುದು ಕಂಡು ಬರುತ್ತದೆ. ಸುರಪುರ ಅರಸರ ಕಾಲದಲ್ಲಿ ನೀಡಿದ್ದ ಇನಾಮು ಭೂಮಿಗಳು ರಜಕಾರರ ಹಾವಳಿ ಸಂದರ್ಭದಲ್ಲಿ ಸ್ಥಳೀಯ ಪಟೇಲರ, ದೇಶ್‌ಮುಖ್, ಪಠಾಣರ ಪಾಲಾಗಿದ್ದು, ಅದಕ್ಕೆ ನಿದರ್ಶನ ಎಂಬಂತೆ ಬೊಮ್ಮನಜೋಗಿ ಮತ್ತು ರಂಗನ ಪೇಟೆಗಳಲ್ಲಿ ಕರ್‌ಕರೆಯವರ ಬಾವಿ ತೋಟಗಳು ಎಂದು ಇಂದಿಗೂ ಕರೆಯುವುದನ್ನು ಕಾಣಬಹುದಾಗಿದೆ.

ಕೋಷ್ಟಕ ೫.೨.೮.

| ಹಾವೇರಿ ಜಿಲ್ಲೆ | | |
|---|---|---|
| **ಒಟ್ಟು ಕುಟುಂಬಗಳು** | ೧೬ | |
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೪೫ | ೫೭ |
| ಮಹಿಳೆಯರು | ೩೪ | ೪೩ |
| **ಒಟ್ಟು ಜನಸಂಖ್ಯೆ** | ೭೯ | ೧೦೦ |

ಹಾವೇರಿ ಜಿಲ್ಲೆಯು ೧೯೯೭ರಲ್ಲಿ ರಚನೆಯಾದ ಏಳು ಜಿಲ್ಲೆಗಳಲ್ಲಿ ಒಂದಾಗಿದ್ದು, ಉತ್ತರ ಕರ್ನಾಟಕದ ಹೆಬ್ಬಾಗಿಲು ಎಂದೂ ಸಹ ಕರೆಯುವರು. ತುಂಗಾಭದ್ರ ನದಿಯ ಉತ್ತರ ಭಾಗದ ಮೊದಲ ಜಿಲ್ಲೆಯಾಗಿ ಕಂಡುಬರುವುದು. ಧಾರವಾಡ ಜಿಲ್ಲೆಯಿಂದ ಬೇರ್ಪಟ್ಟ ಈ ಜಿಲ್ಲೆಯು ೨೦೧೧ರ ಜನಗಣತಿಯಂತೆ ೧.೫೯.೬೬೮ ಜನಸಂಖ್ಯೆ ಹೊಂದಿದೆ. ದೇಶಿಯ ಸಂಸ್ಕೃತಿಯ ಸೊಗಡಿನಿಂದ ಕೂಡಿರುವ ಈ ಜಿಲ್ಲೆಯಲ್ಲಿ ಕರ್ನಾಟಕ ಜಾನಪದ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಗಿದೆ. ಈ ಜಿಲ್ಲೆಯಲ್ಲಿ ಕಂಡುಬರುವ ಸಮುದಾಯಗಳಲ್ಲಿ ಚಿಕ್ಕ ಸಮುದಾಯವಾಗಿ ಕರ್‌ಕರ್ ಮುಂಡ ಸಮುದಾಯ ನೆಲೆ ನಿಂತಿರುವುದನ್ನು ಕಾಣಬಹುದಾಗಿದೆ. ಈ ಜಿಲ್ಲೆಯ ರಾಣಿಬೆನ್ನೂರು, ರಟ್ಟೆಹಳ್ಳಿ, ಮಾಸೂರು, ಹಾವೇರಿ ಸ್ಥಳಗಳಲ್ಲಿ ೧೬ ಕರ್‌ಕರ್ ಮುಂಡರ ಕುಟುಂಬಗಳು ನೆಲೆ ನಿಂತಿರುವುದನ್ನು ಕಾಣಬಹುದು. ಇವರೆಲ್ಲರು ದಾವಣಗೆರೆಯಿಂದ ವಲಸೆ ಹೋಗಿರುವುದು ಮಾಹಿತಿದಾರರಿಂದ ತಿಳಿದು ಬರುತ್ತದೆ. ಬಹುತೇಕ ಕರ್‌ಕರ್

ಮುಂಡರು ಕೃಷಿಯನ್ನು ಅರಿಯದೆ ಇರುವುದರಿಂದ ಹಳ್ಳಿ ಬಿಟ್ಟು ನಗರದ ಕೊಳಚೆ ಪ್ರದೇಶಗಳಲ್ಲಿ ನೆಲೆಯೂರಿರುವಂತೆ ರಾಣೆಬೇನ್ನೂರಿನ ಸುಣಗಾರಓಣಿ, ರಟ್ಟಿಹಳ್ಳಿ, ಮಾಸೂರುಗಳಲ್ಲಿ ನೆಲೆನಿಂತು, ಕೂದಲು ವ್ಯಾಪಾರ ಮತ್ತು ಹಂದಿ ಸಾಕಾಣಿಕೆಯಲ್ಲಿ ತೊಡಗಿದ್ದಾರೆ. ಕಡಿಮೆ ಜನಸಂಖ್ಯೆಯ ಈ ಸಮುದಾಯದ ಹೆಸರೇ ಅವಜ್ಞೆಗೆ ಒಳಗಾಗಿರುವುದನ್ನು ಕಾಣಬಹುದಾಗಿದೆ.

ಕೋಷ್ಟಕ ೫.೨.೯.

| **ಚಿತ್ರದುರ್ಗ ಜಿಲ್ಲೆ** | | |
|---|---|---|
| **ಒಟ್ಟು ಕುಟುಂಬಗಳು** | ೮ | |
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೨೩ | ೫೩.೫ |
| ಮಹಿಳೆಯರು | ೨೦ | ೪೬.೫ |
| **ಒಟ್ಟು ಜನಸಂಖ್ಯೆ** | **೪೩** | **೧೦೦** |

ಚಿತ್ರದುರ್ಗ ಜಿಲ್ಲೆಯು ಕದಂಬ, ವಿಜಯನಗರ, ಹಾಗೂ ಹೈದರಾಲಿ, ಟಿಪ್ಪು ಕಾಲದಿಂದಲೂ ರಾಜಕೀಯ ಇತಿಹಾಸ ಹೊಂದಿದೆ. ಹಳೆ ಮೈಸೂರು ಭಾಗಕ್ಕೆ ಒಳಪಟ್ಟಿದ್ದ ಚಿತ್ರದುರ್ಗವು ಬಯಲು ಸೀಮೆಯಾಗಿದ್ದು, ರಾಜ್ಯದಲ್ಲಿ ಕಡಿಮೆ ಮಳೆ ಬೀಳುವ ಪ್ರದೇಶವೆಂದು ಗುರುತಿಸಲಾಗಿದೆ. ಜಿಲ್ಲೆಯಲ್ಲಿ ಚಿನ್ನಹಗರಿ ಮತ್ತು ವೇದಾವತಿ ಎಂಬ ತುಂಗಾಭದ್ರ ನದಿಯ ಉಪನದಿಗಳು ಹರಿದರೂ ಬರಪೀಡಿತ ಪ್ರದೇಶವಾಗಿದೆ. ಹವಮಾನ ವೈಪರೀತ್ಯಗಳು ಈ ನದಿಗಳು ಬತ್ತಿ ಹೋಗಲು ಕಾರಣವಾಗಿವೆ. ಹಿಂದೆ ಈ ಪ್ರದೇಶದಲ್ಲಿ ಹೆಚ್ಚಿನ ಸಂಖ್ಯೆಯ ಕಾವಲುಗಳಿದ್ದು ಇಂದು ಬರುಡು ಭೂಮಿಗಳಾಗಿರುವುದನ್ನು ಕಾಣಬಹುದು. ಬಯಲು ಸೀಮೆಯಲ್ಲಿ ಕಾವಲುಗಳನ್ನು ನಂಬಿಕೊಂಡು ಬದುಕುತ್ತಿದ್ದ ಪಶುಪಾಲಕ ಸಮುದಾಯಗಳಲ್ಲಿ ಮ್ಯಾಸಬೇಡ ಮತ್ತು ಕಾಡುಗೊಲ್ಲ ಸಮುದಾಯಗಳು ಅಧಿಕ ಸಂಖ್ಯೆಯಲ್ಲಿದ್ದಾರೆ. ಇಲ್ಲಿನ ಭಂಜರು ಭೂಮಿಯನ್ನು ಅವಲಂಬಿಸಿ ಬದುಕುತ್ತಿವೆ. ಅಲೆಮಾರಿ ಪಶುಪಾಲಕರಾಗಿದ್ದ ಈ

ಸಮುದಾಯಗಳು ಈ ಭಾಗದಲ್ಲಿ ನೆಲೆ ನಿಂತು ಸಾಂಸ್ಕೃತಿಕ ಪರಂಪರೆಯನ್ನು ಇಂದಿಗೂ ಮುಂದುವರೆಸಿಕೊಂಡು ಬಂದಿರುವವು. ಇವುಗಳ ಜೊತೆಗೆ ಹಕ್ಕಿಪಿಕ್ಕಿ, ದುರುಗಮುರುಗಿ, ದಾಸರು, ಹೆಳವರು ಇತ್ಯಾದಿ ಅಲೆಮಾರಿ ಸಮುದಾಯಗಳು ಕಂಡುಬರುತ್ತವೆ. ಮೊಂಡರು ಎಂಬ ಬೇಡಸಮುದಾಯದ ಒಳಪಂಗಡವು ಚಿತ್ರದುರ್ಗ ಜರಿಮಲೆ, ಗುಡೇಕೋಟೆ ಇತ್ಯಾದಿ ಸಂಸ್ಥಾನಗಳಲ್ಲಿ ಗೂಢಚಾರಿಗಳಾಗಿ ಕಾರ್ಯನಿರ್ವಹಿಸುತ್ತಿದ್ದು, ಇಲ್ಲಿನ ಮ್ಯಾಸಬೇಡ ಸಮುದಾಯದೊಂದಿಗೆ ಬೆರೆತು ಹೋಗಿರುವುದು ತಿಳಿದು ಬರುತ್ತದೆ. ಮೊಂಡರು ಎಂಬುದು ಒಂದು ಮನೆತನದ ಹೆಸರಾಗಿ ವರ್ಷಕೊಮ್ಮೆ ಮೊಂಡವೇಷಧರಿಸಿ ಭಿಕ್ಷೆ ಬೇಡುವುದನ್ನು ಕಾಣಬಹುದಾಗಿದೆ. ಬೇಡರು ನಾವು ನೆಂಟರು ಎಂದು ಮೊಂಡರು ಹೇಳುವರು. ಅದೇ ರೀತಿ ಮೊಂಡರು ನಮ್ಮ ಸಂಬಂಧಿಕರು ಎಂದು ಬೇಡರು ಹೇಳುವುದನ್ನು ಕಾಣಬಹುದಾಗಿದೆ. ಈ ಹೇಳಿಕೆಗೆ ಪೂರಕವಾಗಿ ಸಾಮಾಜಿಕ ಬಂಧುತ್ವ ಇವರಲ್ಲಿ ಬೆಸೆದುಕೊಂಡಿದೆ. ಬಹುತೇಕ ಮೊಂಡರು ಬೇಡರಲ್ಲಿ ಸೇರಿ ಹೋಗಿರುವ ಪರಿಣಾಮವಾಗಿ ಚಿಕ್ಕಹಳ್ಳಿ ಮತ್ತು ನಾಯಕನಹಟ್ಟಿಯಲ್ಲಿ ಕೇವಲ ನಾಲ್ಕು ಕುಟುಂಬಗಳು ಮಾತ್ರ ಬೇಡ ಸಮುದಾಯದಿಂದ ಹೊರಗುಳಿದಿರುವುದನ್ನು ಕಾಣಬಹುದು. ಗೌರಸಮುದ್ರದ ಮಾರಮ್ಮನನ್ನು ಆರಾಧಿಸುವ ಇವರು ಬೇಡರಂತೆಯೇ ಜೀವನಾವರ್ತಕ, ವಾರ್ಷಿಕಾವರ್ತನ ಆಚರಣೆಗಳನ್ನು ಹಾಗೂ ಬೆಡಗುಗಳನ್ನು ಸಹ ಹೊಂದಿರುವರು. ನಾಯಕನಹಟ್ಟಿ ಮತ್ತು ಮಾರಮ್ಮ ಜಾತ್ರೆ ಹಾಗೂ ಬೇಡರ ಸಾಂಸ್ಕೃತಿಕ ನಾಯಕ ಹಬ್ಬಗಳಲ್ಲಿ ಮೊಂಡು ವೇಷವನ್ನು ಸಾಂಸ್ಕೃತಿಕ ಕುರುವಾಗಿ ಇಂದಿಗೂ ಮುಂದುವರೆಸುತ್ತಿದ್ದು, ಬೇಡರ ಸಾಮಾಜಿಕ ಸ್ಥಾನಮಾನ ಪಡೆದಿರುವುದನ್ನು ಕಾಣಬಹುದು. ಚಿತ್ರದುರ್ಗ ಜಿಲ್ಲೆಯು ಮಳೆಯಾಶ್ರಿತ ಪ್ರದೇಶವಾಗಿರುವುದರಿಂದ ಕಡಿಮೆ ಮಳೆ ಬೀಳುವುದರಿಂದ ಕೃಷಿಯು ಅನಾವೃಷ್ಟಿಗೆ ಒಳಗಾಗಿ ಬದುಕು ದುಸ್ಥಿರವಾಗಿದೆ. ಪಾರಂಪರಿಕ ಪಶುಪಾಲನೆಗೆ ಪೂರಕವಾಗಿದ್ದ ಕಾವಲುಗಳ ಅವನತಿ, ಮತ್ತು ಆಖಆಔ ನಂತಹ ರಕ್ಷಣಾ ಇಲಾಖೆಗಳ ಭೂಸ್ವಾಧೀನ ಪ್ರಕ್ರಿಯೆಗಳು ಈ ಪ್ರದೇಶದ ಅಲೆಮಾರಿಗಳ ಮೇಲು ಪರಿಣಾಮ ಬೀರಿವೆ. ಇದರಿಂದಾಗಿ ಚಿತ್ರದುರ್ಗ ಜಿಲ್ಲೆಯಲ್ಲಿನ ಸಮುದಾಯಗಳು ಆರ್ಥಿಕವಾಗಿ ಹಿಂದುಳಿಯುತ್ತಿರುವುದನ್ನು ಕಾಣಬಹುದಾಗಿದೆ.

ಕೋಷ್ಟಕ ೫.೨.೧೦.

| ತುಮಕೂರು ಜಿಲ್ಲೆ | | |
|---|---|---|
| ಒಟ್ಟು ಕುಟುಂಬಗಳು | ೩೪ | |
| ಲಿಂಗ | ಸಂಖ್ಯೆ | ಶೇಕಡಾ |
| ಪುರುಷರು | ೭೪ | ೪೩.೩ |
| ಮಹಿಳೆಯರು | ೯೭ | ೫೬.೭ |
| ಒಟ್ಟು ಜನಸಂಖ್ಯೆ | ೧೭೧ | ೧೦೦ |

ಹಳೆಯ ಮೈಸೂರು ರಾಜ್ಯದ ಆಳ್ವಿಕೆಗೆ ಒಳಪಟ್ಟಿದ್ದ ತುಮಕೂರು ಜಿಲ್ಲೆಯ ವಿಜಯನಗರೋತ್ತರ ಕಾಲದಲ್ಲಿನ ಬಹಳಷ್ಟು ಸಂಸ್ಥಾನಗಳು ಈ ಜಿಲ್ಲೆಯಲ್ಲಿವೆ. ಮಧುಗಿರಿ, ಬಸ್ಮಂಗಿದುರ್ಗ, ಹಾಗಲವಾಡಿ, ಚಿಕ್ಕನಾಯಕನಹಳ್ಳಿ, ರತ್ನಗಿರಿ, ಶಿರಾ, ಪಾವಗಡ ಇತ್ಯಾದಿ ಗಿರಿದುರ್ಗಗಳು ಇದಕ್ಕೆ ಸಾಕ್ಷಿಯಾಗಿವೆ. ಸೀಬೆಯಲ್ಲಿರುವ ಲಕ್ಷ್ಮೀನರಸಿಂಹ ದೇವಾಲಯ ಮತ್ತೊಂದು ನಿದರ್ಶನವಾಗಿ ಕಂಡು ಬರುವುದು. ಬೆಂಗಳೂರಿನ ಗಡಿಯಂಚಿನ ಜಿಲ್ಲೆಯಾಗಿರುವ ತುಮಕೂರು ಕ್ಷಿಪ್ರಗತಿಯಲ್ಲಿ ಅಭಿವೃದ್ಧಿ ಹೊಂದುತ್ತಿರುವುದು. ಈ ವೇಗದ ಅಭಿವೃದ್ಧಿ ಪರಿಕಲ್ಪನೆಯಿಂದ ದೂರ ಉಳಿದಿರುವ ತಳಸಮುದಾಯಗಳಲ್ಲಿ ಮೊಂಡಬೇಡ ಸಮುದಾಯ ಮಧುಗಿರಿಯಲ್ಲಿ ನೆಲೆನಿಂತಿರುವುದನ್ನು ಕಾಣಬಹುದು. ಮಧುಗಿರಿ ನಗರದ ಡಿ.ವೈ.ಎಸ್.ಪಿ. ಆಫೀಸ್ ಹಿಂಭಾಗದ ದೊಡ್ಡ ಬಂಡೆಯ ಮೇಲೆ ೩೪ ಮೊಂಡರ ಕುಟುಂಬಗಳು ನೆಲೆನಿಂತಿವೆ. ವಿಪರ್ಯಾಸವೆಂದರೆ ಗುಡಿಸಲು ಮುಕ್ತ ರಾಜ್ಯವನ್ನಾಗಿಸುವ ಯೋಜನೆಗೆ ವಿರುದ್ಧವಾದ ಗುಡಾರಗಳಲ್ಲಿ ಜೀವಿಸುತ್ತಿರುವರು. ಇವರೆಲ್ಲರು ಬೇಡ ಸಮುದಾಯದಲ್ಲಿ ಸೇರಿಹೋಗಿದ್ದು ಪರಿಶಿಷ್ಟ ವರ್ಗ ಜಾತಿ ಪ್ರಮಾಣ ಪತ್ರಪಡೆದಿದ್ದಾರೆ. ಇವರುಗಳಿಗೆ ಗುರುತಿನ ಚೀಟಿ, ಆಧಾರ್‌ಕಾರ್ಡ್ ಮತ್ತು ರೇಷನ್‌ಕಾರ್ಡ್ ನೀಡಲಾಗಿದ್ದು ವಸತಿ ವ್ಯವಸ್ಥೆ ಕಲ್ಪಿಸದೇ ಇರುವುದರಿಂದ ಕೊಳಚೆ ಪ್ರದೇಶದಲ್ಲಿ ಜೀವಿಸುತ್ತಿದ್ದು ಇವರ ಬದುಕು ಶೋಷನೀಯವಾಗಿದೆ.

ಕರ್‌ಕರ್‌ಮುಂಡರು, ಮೊಂಡರು, ಮುಂಡಾಲಬಂಡ ಎಂಬ ಹೆಸರಿನಿಂದ ರಾಜ್ಯದ ಈ ಮೇಲ್ಕಂಡ ಜಿಲ್ಲೆಗಳಲ್ಲಿ ನೆಲೆಸಿದ್ದು, ಸಂಶೋಧನಾ ಸಮೀಕ್ಷೆಯ ಮಿತಿಯೊಳಗೆ

೧೫೬೯ ಜನಸಂಖ್ಯೆ ಮಾತ್ರ ಕಂಡುಬಂದಿದ್ದು, ಕೋಲಾರ ಜಿಲ್ಲೆಯ ಮತ್ತು ರಾಜ್ಯದ ಬೇರೆಡೆಗೆ ವಲಸೆ ಹೋಗಿರಬಹುದಾದ ಕುಟುಂಬಗಳ ಮಾಹಿತಿ ದೊರೆಯದೇ ಇರುವುದು ಈ ಸಂಶೋಧನೆಯ ಮಿತಿಯಾಗಿದೆ. ಮತ್ತೆ ಕೆಲವರು ಕರ್‌ಕರ್ ಮುಂಡರಾಗಿದ್ದರೂ ಸಮುದಾಯದಹೆಸರನ್ನೇ ಹೇಳಿಕೊಳ್ಳದ ಕೀಳರಿಮೆಗೆ ಒಳಗಾಗಿರುವುದು ಜನಸಂಖ್ಯೆಯ ನಿಖರತೆಯನ್ನು ಗುರುತಿಸಲು ಸಾಧ್ಯವಾಗಿಲ್ಲ. ಕರ್‌ಕರ್ ಮುಂಡ ಸಮುದಾಯವು ಉತ್ತರ ಕರ್ನಾಟಕದ ಬೆಳಗಾವಿ, ರಾಯಚೂರು, ಯಾದಗಿರಿ, ಬಾಗಲಕೋಟೆಗಳಲ್ಲಿನ ಜನರು ಈ ಹೆಸರಿನೊಂದಿಗೆ ಗುರುತಿಸಿಕೊಂಡಿದ್ದು, ಈ ರೀತಿಯಾಗಿ ಪ್ರಸಾರ ಮತ್ತು ಹಂಚಿಕೆಯಾಗಿರುವ ಅಳಿವಿನಂಚಿನ ಈ ಕಿರು ಸಮುದಾಯವನ್ನು ಅಭಿವೃದ್ಧಿ ಯೋಜನೆಗಳನ್ನು ಕಲ್ಪಿಸುವುದರ ಮೂಲಕ ಉಳಿಸಿಕೊಳ್ಳುವುದು ಅಗತ್ಯವಾಗಿದೆ.

ಕೋಷ್ಟಕ 5.3.ಸಮುದಾಯದ ಜಿಲ್ಲಾವಾರು ಪರ್ಯಾಯ ಹೆಸರಿನ ಜನಸಂಖ್ಯೆ

| | ಕರ್‌ಕರ್ ಮುಂಡ | | ಮುಂಡಾಲ ಬಂಡ | | ಮೊಂಡಬೇಡ | |
|---|---|---|---|---|---|---|
| | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ |
| ರಾಯಚೂರು | 50 | 25.1 | 0 | 0 | 0 | 0 |
| ದಾವಣಗೆರೆ | 1 | 0.5 | 35 | 57.1 | 0 | 0 |
| ಬಾಗಲಕೋಟೆ | 20 | 10.5 | 00 | 00 | 16 | 27 |
| ಕೊಪ್ಪಳ | 0 | 0 | 13 | 20.6 | 0 | 0 |
| ಬೆಳಗಾವಿ | 114 | 57.3 | 0 | 0 | 0 | 0 |
| ಧಾರವಾಡ | 5 | 2.5 | 0 | 0 | 0 | 0 |
| ಯಾದಗಿರಿ | 0 | 0 | 4 | 6.3 | 0 | 0 |
| ಬಳ್ಳಾರಿ | 0 | 0 | 0 | 0 | 4 | 7 |
| ಹಾವೇರಿ | 9 | 4.5 | 4 | 6.3 | 3 | 5 |
| ಚಿತ್ರದುರ್ಗ | 0 | 0 | 6 | 9.5 | 2 | 3 |
| ತುಮಕೂರು | 0 | 0 | 0 | 0 | 34 | 58 |
| ಒಟ್ಟು | **199** | **100** | **63** | **100** | **59** | **100** |

ಕರ್ನಾಟಕದಲ್ಲಿನ ಮೊಂಡರು ಎಂಬ ಹೆಸರಿನ ಸಮುದಾಯವು ಕರ್‌ಕರ್ ಮುಂಡ(ಊರ ಮೊಂಡ), ಮುಂಡಾಲಬಂಡ, ಮೊಂಡಬೇಡ ಎಂಬ ಪರ್ಯಾಯ ಹೆಸರಿನಿಂದ ಹಂಚಿಹೋಗಿರುವುದನ್ನು ಕಾಣಬಹುದು. ಕರ್‌ಕರ್‌ಮುಂಡ ಎಂಬ ಹೆಸರಿನಲ್ಲಿ ರಾಯಚೂರು ೫೦, ದಾವಣಗೆರೆ ೦೧, ಬಾಗಲಕೋಟೆ ೨೦, ಬೆಳಗಾವಿ ೧೧೪, ಧಾರವಾಡ ೫, ಹಾವೇರಿ ೯, ಕುಟುಂಬಗಳು ನೆಲೆನಿಂತಿವೆ. ಒಟ್ಟು ೩೨೧ ಕುಟುಂಬಗಳಲ್ಲಿ ೧೯೯ ಕುಟುಂಬಗಳು ಕರ್‌ಕರ್ ಮುಂಡ ಎಂಬ ಹೆಸರಿನಿಂದ ಗುರುತಿಸಿಕೊಂಡಿವೆ.

ಮುಂಡಾಲಬಂಡ ಎಂಬ ಹೆಸರಿನಿಂದ ದಾವಣಗೆರೆ ೩೬, ಕೊಪ್ಪಳ ೧೩, ಯಾದಗಿರಿ ೪, ಹಾವೇರಿ ೪, ಚಿತ್ರದುರ್ಗ ೬, ಒಟ್ಟು ೬೩ ಕುಟುಂಬಗಳು ಕಂಡುಬರುತ್ತವೆ. ಮೊಂಡಬೇಡ ಎಂಬ ಹೆಸರಿನಿಂದ ಬಾಗಲಕೋಟೆ ೧೬, ಬಳ್ಳಾರಿ ೪, ಹಾವೇರಿ ೩, ಚಿತ್ರದುರ್ಗ ೨, ತುಮಕೂರು ಜಿಲ್ಲೆಯಲ್ಲಿ ೩೪, ಒಟ್ಟು ೫೯ ಕುಟುಂಬಗಳು ಕಂಡು ಬರುತ್ತವೆ. ಈ ಮೂರು ಹೆಸರಿನಲ್ಲಿ ಪ್ರಾದೇಶಿಕ ಪ್ರತ್ಯೇಕವಾಗಿರುವುದಲ್ಲದೇ ಒಂದೇ ಮನೆಯಲ್ಲಿಯೇ ಪರ್ಯಾಯ ಹೆಸರುಗಳಿಂದ ಅಣ್ಣ ತಮ್ಮಂದಿರು ಹಂಚಿಹೋಗಿರುವುದನ್ನು ಕಾಣಬಹುದು. ಈ ಹೆಸರುಗಳಲ್ಲಿ ಕರ್‌ಕರ್ ಮುಂಡ ಹೆಸರಿನಲ್ಲಿ ಅಧಿಕ ಸಂಖ್ಯೆಯಲ್ಲಿ ಉತ್ತರ ಕರ್ನಾಟಕ ಬೆಳಗಾವಿ ಮತ್ತು ಬಾಗಲಕೋಟೆ ಮತ್ತು ರಾಯಚೂರಿನಲ್ಲಿ ಕಂಡುಬರುವುದನ್ನು ನೋಡಬಹುದು. ಇದಕ್ಕೆ ಕಾರಣ ಅವರ ಪೂರ್ವಿಕರ ನೆಲೆ, ಕಿತ್ತೂರು ಮತ್ತು ಸುರಪುರ ಆಗಿತ್ತು ಎಂಬುವುದೇ ಆಗಿರಬಹುದಾಗಿದೆ. ಮುಂಡಾಲ ಬಂಡೆಯವರ ಪೂರ್ವಿಕರು ಆಂಧ್ರಪ್ರದೇಶದಿಂದ ವಲಸೆ ಬಂದವರಾಗಿದ್ದಾರೆ. ಇನ್ನೂ ಮೊಂಡ ಬೇಡರು ಬೇಡರಿಂದ ವಿಭಿಸಿ ಇಲ್ಲಿಯೇ ನೆಲೆನಿಂತಿರುವುದು ಆಗಿದೆ ಎಂದು ಮಾಹಿತಿದಾರರ ಅಭಿಪ್ರಾಯದ ಜೊತೆಗೆ ನಂಜುಂಡಯ್ಯ ಹೆಚ್ ವಿ ಮತ್ತು ಅನಂತಕೃಷ್ಣ ಅಯ್ಯರ್ ತಿಳಿಸಿರುವರು. ಈ ಮೂರು ಹೆಸರಿನ ಸಮುದಾಯಗಳ ವೃತ್ತಿಗಳು, ದೇವರ ಆರಾಧನೆ, ಬೆಡಗುಗಳು, ಹಾಗೂ ಆಚರಣೆ-ಸಂಪ್ರದಾಯಗಳು ಒಂದೇ ಆಗಿದ್ದು, ಅದರ ಹಿನ್ನೆಲೆಯಲ್ಲಿ ಅನಂತಕೃಷ್ಣ ಅಯ್ಯರ್ ಅವರು ಮೊಂಡರಲ್ಲಿ ಊರಮೊಂಡ, ಬಂಡ ಅಥವಾ ಕಾಕುಲ ಮೊಂಡ, ಸಿಕಂಡಿ ಮೊಂಡ, ಕಸ್ತೂರಿ ಮೊಂಡ ಎಂದು ಗುರುತಿಸಿರುವರು. ಊರು ಮೊಂಡರು ಕರ್‌ಕರ್ ಮುಂಡರಾಗಿದ್ದು, ಮೊಂಡಬೇಡರು ಮೂಲದ ಮೊಂಡರಾಗಿರುವರು ಎಂದು ತಿಳಿದುಬರುತ್ತದೆ. ಕುಲಶಾಸ್ತ್ರೀಯ ಅಧ್ಯಯನದ ಮೂಲಕ

ನೋಡಿದಾಗ ಈ ಮೂರು ಹೆಸರುಗಳು ಪರ್ಯಾಯ ಹೆಸರುಗಳಾಗಿರುವುದನ್ನು ತಿಳಿಯಬಹುದಾಗಿದೆ. ಕರ್ನಾಟಕದ ೬೧,೦೯೫,೨೯೭ ಜನಸಂಖ್ಯೆಯಲ್ಲಿ ಸಮೀಕ್ಷೆಯಂತೆ ಕೇವಲ ೧೫೬೯ ಜನಸಂಖ್ಯೆ ಇದ್ದು ಅಳಿವಿನಂಚಿನಲ್ಲಿದೆ. ಜೊತೆಗೆ ಸಮುದಾಯದ ಗುರುತಿನಲ್ಲಿನ ಗೊಂದಲವು ಸರ್ಕಾರಿ ಸೌಲಭ್ಯಗಳು ದೊರೆಯದಂತೆ ಕೆಳಸ್ತರದ ಸಾಮಾಜಿಕ ಸ್ಥಾನಮಾನಗಳಿಗೆ ಕಡೆಗೆ ತಳ್ಳಿದೆ. ಇದಕ್ಕಾಗಿ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದರ ಜೊತೆಗೆ ಮುಖ್ಯವಾಹಿನಿಗೆ ತರಲು ಸಹಾಯಕವಾಗುವುದು ಎಂಬ ಆಶಯದೊಂದಿಗೆ ಈ ಅಧ್ಯಯನ ಮಾಡಲಾಗಿದೆ. ಕಡಿಮೆ ಜನಸಂಖ್ಯೆಯಿಂದ ಹಕ್ಕುಗಳನ್ನು ಪಡೆಯಲಾಗದೆ, ಕೇಳಲಾಗದೆ ಮತ್ತು ಕೇಳಿಸಿಕೊಳ್ಳದ ಮನಸ್ಸುಗಳಿಲ್ಲದ ಪ್ರಬಲ ಸಮುದಾಯಗಳಿಂದ ಹಾಗೂ ಅವರಲ್ಲಿನ ಕೀಳರಿಮೆಯ ಮನೋಭಾವನೆಯಿಂದ ಒಗ್ಗಟ್ಟಿಲ್ಲದೆ ಅಸ್ಥಿರತೆಗೆ ಒಳಗಾಗಿದೆ. ಸಮುದಾಯದ ಮನಸ್ಥಿತಿಗಳು ಇಂದು ಸಾಮಾಜಿಕವಾಗಿ ರಾಜಕೀಯ ಮತ್ತು ಶೈಕ್ಷಣಿಕ ಆರ್ಥಿಕವಾಗಿ ಹಿಂದುಳಿದಿದ್ದು ಅವರ ಹಕ್ಕುಗಳನ್ನು ಪಡೆಯುವ ಶಕ್ತಿ ಬರುವಂತೆ ಮಾಡುವುದರ ಮೂಲಕ ಅಭಿವೃದ್ಧಿಯೆಡೆಗೆ ಕೊಂಡೊಯ್ಯುವುದು ಅನಿವಾರ್ಯವಾಗಿದೆ.

ಕೋಷ್ಟಕ 5.4. ವಯೋಮಾನದ ಪ್ರಮಾಣ

| ವಯಸ್ಸು | | | | | |
|---|---|---|---|---|---|
| | ಪುರುಷರು | | ಮಹಿಳೆಯರು | | |
| | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ | ಒಟ್ಟು ಶೇಕಡಾ |
| 1 ರಿಂದ 5 | 67 | 4.2 | 71 | 4.5 | 8.7 |
| 6 ರಿಂದ 18 | 264 | 17 | 258 | 16.5 | 33.5 |
| 18 ರಿಂದ 40 | 323 | 20.5 | 379 | 24.1 | 44.6 |
| 41 ರಿಂದ 60 | 95 | 6 | 82 | 5.2 | 11.2 |
| 60+ | 15 | 1 | 15 | 1 | 2 |
| ಒಟ್ಟು | 764 | 48.7 | 805 | 51.3 | 100 |

ಆದಿಮ ಮಾನವನ ಸಮಾಜವು ಸರಳತೆಯಿಂದ ಕೂಡಿದ್ದು, ಅಂದಿನ ಸಮಾಜದಲ್ಲಿ ಮಾನವನ ಆಯುಷ್ಯ ಪ್ರಮಾಣ ಕನಿಷ್ಠ ೧೦೦-೧೫೦ ವರ್ಷಗಳಾಗಿತ್ತು ಎಂದು ಅಂದಾಜಿಸಬಹುದು. ಪ್ರಕೃತಿಯ ಮಡಿಲಲ್ಲಿ ಅದರ ಆರಾಧನೆ ಮತ್ತು ಅವಲಂಬನೆಯಿಂದ ಜೀವಿಸುತ್ತಿದ್ದ ಋಷಿಮುನಿಗಳ ಜೀವಿತಾವಧಿಯೇ ಬೇರೆಯೇ ಆಗಿತ್ತು. ಸಾಮಾನ್ಯ ಮಾನವನಿಗಿಂತ ಹೆಚ್ಚಿನ ಜೀವತಾವಧಿಯನ್ನು ಹೊಂದಿರುವುದು ತಿಳಿದುಬರುತ್ತದೆ. ಆಗಿನ ಜನರ ಪ್ರಕೃತಿಗೆ ಪೂರಕವಾಗಿ ಜೀವನದಲ್ಲಿ ಆಹಾರ ಕ್ರಮ, ವಾಸದನೆಲೆ, ಸೀಮಿತ ಜನಸಂಖ್ಯೆ, ಪಾರಂಪರಿಕ ವೈದ್ಯಪದ್ಧತಿಗಳು ಸರಳ ಸಮಾಜಕ್ಕೆ ಕಾರಣವಾಗಿರಬಹುದು. ಆದರೆ ಮಾನವನ ಬುದ್ಧಿಮತ್ತೆ ಅಧಿಕವಾದಂತೆ ಪರಿಸರ ಮಾರಕ ಚಿಂತನೆಗಳಿಂದ ತನ್ನ ಆಯುಷ್ಯನ್ನು ಕಡಿಮೆಗೊಳಿಸಿಕೊಂಡಿದ್ದಾನೆ. ಸಮಾಜ ಸಂಕೀರ್ಣವಾಗಿ ಜನಸಂಖ್ಯೆ ಅಧಿಕವಾದಾಗ ಸಹಜವಾಗಿ ಉತ್ಪಾದನೆಯ ಪ್ರಮಾಣ ಅಧಿಕವಾಗಬೇಕಾಗುತ್ತದೆ. ಇಷ್ಟೆಲ್ಲಾ ತಾಂತ್ರಿಕ ಕೌಶಲ್ಯಗಳಿಂದ ಉತ್ಪಾದನೆ ಮಾಡಿದರೂ ಜನಸಂಖ್ಯೆಗೆ ಅನುಗುಣವಾಗಿ ಉತ್ಪಾದನೆ ಆಗುತ್ತಿಲ್ಲ. ಇದನ್ನು ನೀಗಿಸಲು ಕೃಷಿಯಲ್ಲಿ ತಂತ್ರಜ್ಞಾನ ಅಳವಡಿಸಿ ಹೈಬ್ರಿಡ್ ಬೀಜಗಳಿಂದ ಬೆಳೆ ಬೆಳೆಯುತ್ತಿದ್ದಾನೆ. ಇದು ಅತಿಯಾಗಿ ಇಂದು ಮಣ್ಣಿನ ಫಲವತ್ತತೆ ಕಡಿಮೆಯಾಗಿದೆ. ಆರಣ್ಯ ನಾಶದಿಂದಾಗಿ ಮಳೆಯ ಪ್ರಮಾಣ ಕಡಿಮೆಯಾಗಿದೆ. ಇದರ ಜೊತೆಗೆ ಈ ಮಿಶ್ರತಳಿಗಳ ಕೃಷಿಯಲ್ಲಿ ರಾಸಾಯನಿಕಗಳನ್ನು ಬಳಸಿ ಆಹಾರ ಪದಾರ್ಥಗಳನ್ನು ಬೆಳೆಯಲಾಗುತ್ತಿದೆ. ಭಾರತದಂತಹ ಕೃಷಿ ಪ್ರಧಾನ ದೇಶವು ಇಂದಿನ ವಿಶೇಷ ಆರ್ಥಿಕ ವಲಯ ನೀತಿಗಳಿಗೆ ಒಳಗಾಗಿ ಕೃಷಿಗೆ ಯೋಗ್ಯವಾಗಿದ್ದ ಭೂಮಿಯನ್ನು ಕೈಗಾರಿಕೀಕರಣ ಮತ್ತು ಜಾಗತೀಕರಣದ ನೆಪದಲ್ಲಿ ಬಂಡವಾಳಶಾಯಿಗಳು ನುಂಗಿ ಹಾಕುತ್ತಿದ್ದಾರೆ. ಇದರಿಂದ ಮಾನವ ಆಹಾರ ಕ್ರಮವು ಪಾಶ್ಚಿಮಾತ್ಯ ಆಹಾರ ಕ್ರಮಗಳಿಂದ ಅನುಕರಿಸಲ್ಪಟ್ಟಿದ್ದು, ವಿಷಪೂರಿತ ಆಹಾರ ಪದಾರ್ಥಗಳು ಮಾನವ ಜೀವಾತವಧಿಯ ಮೇಲೆ ಪರಿಣಾಮ ಬೀರುತ್ತಿವೆ.

ಕೈಗಾರಿಕೆಗಳ ಬೆಳವಣಿಗೆಯಿಂದ ಜನರು ಗ್ರಾಮೀಣ ಪ್ರದೇಶದಿಂದನಗರ ಗ್ರಾಮೀಣ ಪ್ರದೇಶಗಳ ಕಡೆಗೆ ಸಾಗುತ್ತಿರುವುದರಿಂದ ಗ್ರಾಮಗಳ ನಾಡಾಗಿದ್ದ ಭಾರತ ಉಪನಗರ ಮತ್ತು ನಗರಗಳ ನಾಡಾಗಿ ಸೃಷ್ಟಿಯಾಗುತ್ತಿರುವುದನ್ನು ಕಾಣಬಹುದು.ಕೈಗಾರಿಕೆಯ ತ್ಯಾಜ್ಯ ವಸ್ತುಗಳು ನದಿ, ವಾಯು, ಪರಿಸರ, ಶಬ್ದ ಮಾಲಿನ್ಯವನ್ನು ಉಂಟುಮಾಡಿ ಮಾನವನ ಆರೋಗ್ಯದ ಮೇಲೆ ಪ್ರಭಾವ ಬೀರುತ್ತಿವೆ. ಮಹಿಳೆಯರು ಸಂತಾನೋತ್ಪತ್ತಿ ಶಕ್ತಿಯನ್ನು ಕಳೆದುಕೊಂಡು ಬಂಜೆತನಕ್ಕೆ ಒಳಗಾಗುತ್ತಿದ್ದಾರೆ. ಆಧುನಿಕ ಮಾನವನ

ಯಾಂತ್ರಿಕ ಬದುಕು ಪ್ರಕೃತಿ ಸ್ನೇಹಿಯಾಗಿರದೆ ಪ್ರಕೃತಿಗೆ ಮಾರಕವಾಗಿರುವುದರಿಂದ ಮನುಷ್ಯನ ಆರೋಗ್ಯದಲ್ಲಿ ವ್ಯತ್ಯಾಸಗಳು ಉಂಟಾಗಿದ್ದು, ಆಹಾರ ಕ್ರಮ ಕೈಗಾರಿಕೆಗಳ ಅತಿಯಾದ ಸ್ಥಾಪನೆ, ರಸಾಯನಗಳಿಂದ ಕೂಡಿದ ಕೃಷಿ ಇವೆಲ್ಲವುಗಳಿಂದ ಉಂಟಾದ ಪ್ರಕೃತಿ ವಿಕೋಪಗಳು ಮಾನವನ ಆಯುಷ್ಯ ಪ್ರಮಾಣವನ್ನು ತಗ್ಗಿಸುತ್ತಿವೆ. ಮಾನವ ಜೀವಿತಮಟ್ಟವನ್ನು ಹೆಚ್ಚಿಸಲು ಘಊಔ, ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಏನೆಲ್ಲಾ ಯೋಜನೆಗಳನ್ನು ರೂಪಿಸಿದರೂ ಅದು ಫಲಕಾರಿಯಾಗಿಲ್ಲ. ೨೦೧೧ರ ಮಾನವ ಅಭಿವೃದ್ಧಿ ಪ್ರಕಾರ ಭಾರತದ ಮಾನವನ ಆಯುಷ್ಯ ಪ್ರಮಾಣ ೬೭ ವರ್ಷಗಳಿಗೆ ತಂದು ನಿಲ್ಲಿಸಿದೆ.

ಜೀವಿತಾವಧಿಯ ವಯಸ್ಸು ನೆಲೆನಿಲ್ಲದ ಅಲೆಮಾರಿ ಸಮುದಾಯಗಳಲ್ಲಿ ಅಧಿಕವೆಂದರೂ ತಪ್ಪಿಲ್ಲ. ಕಾರಣ ಶ್ರಮಜೀವಿಗಳಾಗಿರುವ ಇವರು ತಮ್ಮ ಆಹಾರ ಕ್ರಮದೊಂದಿಗೆ ಸತ್ವಯುತ ಆಹಾರ ಸೇವಿಸುವರು. ಪ್ರಕೃತಿ ಅವಲಂಬಿತ ಜೀವನ ಕ್ರಮವು ನಾಡಿನ ಜನತೆಗಿಂತ ಭಿನ್ನವಾಗಿರುವುದು.ತಂತ್ರಜ್ಞರು ಪರಿಹರಿಸಲಾಗದ ರೋಗಗಳಿಗೆ ಬುಡಕಟ್ಟು ವೈದ್ಯ ಪದ್ಧತಿಯಲ್ಲಿ ಚಿಕಿತ್ಸೆ ದೊರೆಯುತ್ತದೆ. ಆದರೆ ನಾಡಿನ ಮಾನವ ಕ್ಷಿಪ್ರಗತಿಯ ಬದಲಾವಣೆಯಿಂದ ಇವರನ್ನು ನಾಡಿನ ಅಂಚಿಗೆ ನೆಲೆಗೊಳಿಸಿರುವುದರಿಂದ ಇವರು ನಾಡಿನ ಮತ್ತು ಕಾಡಿನ ಜೀವನದ ನಡುವೆ ಗೊಂದಲಕ್ಕೊಳಗಾಗಿದ್ದಾರೆ. ಕೆಲವು ಸಮುದಾಯಗಳು ನಾಡಿನ ಬದುಕಿನ ಅಪೇಕ್ಷೆಗೆ ಒಳಗಾಗಿ ಪಾರಂಪರಿಕ ವೈದ್ಯಪದ್ಧತಿ, ಆಹಾರ ಕ್ರಮ, ಜೀವನ ಕ್ರಮಗಳಲ್ಲಿ ಮಾರ್ಪಾಡುಹೊಂದಿ ನಗರದ ಕೊಳಚೆ ಪ್ರದೇಶಗಳಲ್ಲಿ ನೆಲೆ ನಿಂತಿರುವುದರಿಂದ ಅನೇಕ ರೋಗ ರುಜಿನೆಗಳಿಗೆ ಬಲಿಯಾಗಿ ಜನಸಂಖ್ಯೆಯಲ್ಲಿ ಇಳಿಮುಖವಾಗುತ್ತಿದ್ದಾರೆ. ಅದರಲ್ಲಿ ಕರ್‌ಕರ್ ಮುಂಡ ಸಮುದಾಯವು ಒಂದಾಗಿದೆ. ಕರ್‌ಕರ್ ಮುಂಡರ ಕುರಿತಾದ ಅಧ್ಯಯನದಲ್ಲಿ ಕೇವಲ ೧೫೪೯ ಜನ ಸಂಖ್ಯೆಯಲ್ಲಿ ಇವರ ಜನಸಂಖ್ಯೆಯನ್ನು ವರ್ಗೀಕರಿಸಿದಾಗ ೧-೫ ವಯಸ್ಸಿನವರು ೧೩೮ ಜನರು, ೬-೧೮ ವಯಸ್ಸಿನಲ್ಲಿ ೫೨೨ಜನರು, ೧೮-೪೦ ವಯಸ್ಸಿನವರಲ್ಲಿ ೭೦೨ ಜನರು, ೪೧-೬೦ ವಯಸ್ಸಿನವರು, ೧೭೭ ಜನರು, ೬೦ಕ್ಕಿಂತ ಹೆಚ್ಚಿನ ವಯಸ್ಸಿನವರು ೩೦ ಜನರಿರುವುದು ಈ ಸಮೀಕ್ಷೆಯ ಅನ್ವಯ ತಿಳಿಯುತ್ತದೆ. ಕೋಷ್ಟಕ ೫.೪ನ್ನು ಗಮನಿಸಿದಾಗ ಒಟ್ಟು ಜನಸಂಖ್ಯೆಯಲ್ಲಿ ೧೮-೪೦ ವಯಸ್ಸಿನವರು ಅಧಿಕವಾಗಿದ್ದು, ಅಧಿಕ ಸಂಖ್ಯೆಯಲ್ಲಿ ದುಡಿಯುವ ವಯಸ್ಸಿನವರಿರುವುದನ್ನು ಕಾಣಬಹುದಾಗಿದೆ. ಯಾವುದೇ ಪಿತ್ರಾರ್ಜಿತ ಆಸ್ತಿಯನ್ನು ಹೊಂದಿರದ ಇವರು ಆ ದಿನವೇ ದುಡಿದು ಅಂದೇ ತಿನ್ನುವವರಾಗಿದ್ದಾರೆ.

೬೦ ವರ್ಷಕ್ಕೂ ಮೇಲ್ಪಟ್ಟವರ ಜನಸಂಖ್ಯೆ ೩೦ ಇದ್ದು, ಕಡಿಮೆ ಸಂಖ್ಯೆಯಲ್ಲಿದ್ದಾರೆ. ಇದರಿಂದ ಇವರ ಆಯು ಪ್ರಮಾಣ ೬೦-೬೫ ಎಂದು ಹೇಳಬಹುದಾಗಿದೆ. ಕರ್‌ಕರ್ ಮುಂಡರು ಮಾಂಸಹಾರಿಗಳಾಗಿದ್ದು, ಬೇಟೆಯನ್ನು ಅವಲಂಬಿಸಿ ಬದುಕುತ್ತಿದ್ದರು. ಇವರ ಪೂರ್ವಿಕರು ದಿನನಿತ್ಯ ಕಾಡು ಪ್ರಾಣಿ-ಪಕ್ಷಿಗಳನ್ನು ಬೇಟೆಯಾಡಿ ದಿನನಿತ್ಯದ ಆಹಾರವನ್ನಾಗಿಸಿಕೊಂಡಿದ್ದರು. ಇದರಿಂದ ಸದೃಢ ದೈಹಿಕ ಮತ್ತು ಮಾನಸಿಕ ಆರೋಗ್ಯ ಹೊಂದಿದ್ದರು, ಮಹಿಳೆಯರು ಶ್ರಮ ಜೀವಿಗಳಾಗಿ ಪುರುಷನಷ್ಟೇ ಜೀವನದ ಸಮನಾದ ಶ್ರಮ ಹೊಂದಿದ್ದರು. ಇದರಿಂದಾಗಿ ಪಾರಂಪರಿಕ ಕೌಶಲ್ಯಗಳೊಂದಿಗೆ ಹೆರಿಗೆ ಬಾಣಂತಿತನ ಇತ್ಯಾದಿ ಸಂದರ್ಭಗಳಲ್ಲಿ ತಮಗೊದಗುತ್ತಿದ್ದ ಅನಾರೋಗ್ಯವನ್ನು ಪರಿಹರಿಸಿಕೊಳ್ಳುತ್ತಿದ್ದರು. ಆದರೆ ಇಂದಿನ ಬೇಟೆ ನಿಷೇಧ ಒಂದೇ ಬಗೆಯ ಮಾಂಸಾಹಾರ ಅಪೌಷ್ಟಿಕತೆಯಿಂದ ಕೂಡಿದ ಸಸ್ಯಾಹಾರಗಳಿಂದ ಮತ್ತು ಆಧುನಿಕ ಸಾರಾಯಿಗಳ ಅತಿಯಾದ ಬಳಕೆ, ಕೊಳಚೆಗಳಲ್ಲಿ ವಾಸಿಸುತ್ತಿರುವುದು, ಕೂದಲು ವ್ಯಾಪಾರದಿಂದ ಶ್ವಾಸಕೋಶ ಸಂಬಂಧಿ ರೋಗಗಳಿಂದ ಜೀವನದ ಕಾಲ ಇಳಿಮುಖವಾಗುತ್ತಿದೆ. ಇದಕ್ಕಾಗಿ ಕರ್‌ಕರ್ ಮುಂಡರು ಶಿಕ್ಷಣದ ಮೂಲಕ ಆರೋಗ್ಯ ಸಂಬಂಧಿ ಕ್ರಮಗಳಿಗೆ ಒಳಗಾಗಿ ಆರೋಗ್ಯ ಮತ್ತು ಸ್ವಾಸ್ಥ್ಯವನ್ನು ಕಾಪಾಡಿಕೊಳ್ಳುವುದರ ಮೂಲಕ ಜೀವಿತಮಟ್ಟವನ್ನು ಸುಧಾರಿಸಿಕೊಳ್ಳಬಹುದಾಗಿದೆ.

ಕೋಷ್ಟಕ 5.5.

| ವೈವಾಹಿಕ ಸ್ಥಾನಮಾನ | | | | | |
|---|---|---|---|---|---|
| | ಪುರುಷರು | | ಮಹಿಳೆಯರು | | |
| | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ | ಒಟ್ಟು ಶೇಕಡಾ |
| ವಿವಾಹಿತರು | 343 | 21.8 | 371 | 23.6 | 45.4 |
| ಅವಿವಾಹಿತರು | 418 | 26.6 | 390 | 25 | 51.6 |
| ವಿಧವೆ/ವಿದುರ | 3 | 0.1 | 44 | 2.9 | 3 |
| ಒಟ್ಟು | 764 | 48.5 | 805 | 51.5 | 100 |

ಆಧುನಿಕ ಯಂತ್ರಯುಗವು ಮಾನವನ ಬದುಕನ್ನೇ ನಿರ್ಧರಿಸುವ ಮತ್ತು ನಿಯಂತ್ರಿಸುವ ಮಟ್ಟಕ್ಕೆ ಬೆಳೆದಿರುವುದನ್ನು ಕಾಣಬಹುದು. ಭಾರತೀಯ ಸಂಸ್ಕೃತಿಯು ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ವರ್ಗೀಕರಣದೊಂದಿಗೆ ಜೀವನವನ್ನು ನಿರ್ದೇಶಿಸುವ ಮತ್ತು ನಿಯಂತ್ರಿಸುವ ಕಾಲಮಾನ ಒಂದಿತ್ತು. ಆದರೆ ಆಧುನಿಕ ಯುಗವು ಭಾರತೀಯ ಸಂಸ್ಕೃತಿಗೆ ಪರ್ಯಾಯವಾಗಿ ಪಾಶ್ಚಿಮಾತ್ಯ ಸಂಸ್ಕೃತಿಗೆ ಮಾರುಹೋಗಿ ವೇಗವಾಗಿ ಬೆಳೆಯುತ್ತಿರುವುದನ್ನು ಕಾಣಬಹುದು. ಭಾರತೀಯ ಸಮಾಜದ ಆಧಾರ ಸ್ತಂಭಗಳಲ್ಲಿ ಒಂದಾದ ಬಂಧುತ್ವವು ಇಂದು ಮೌಲ್ಯ ಕಳೆದುಕೊಳ್ಳುತ್ತಿದೆ. ರಾಜಕೀಯ ಮತ್ತು ಆರ್ಥಿಕ ಅಂಶಗಳು ಜಗತ್ತನ್ನೇ ಆಳುತ್ತಿವೆ. ಸಾಮಾಜಿಕ ಅಂಶಗಳು ನೆಲಕಚ್ಚುತ್ತಿವೆ. ಇದಕ್ಕೆ ಕಾರಣ ಮಾನವನ ಆರ್ಥಿಕ, ರಾಜಕೀಯ ಮತ್ತು ಸುಖೀ ಜೀವನದ ಆಸಕ್ತಿಗಳು, ಸಾಮಾಜಿಕ ಜೀವಿಯು ಬದಲಿಗೆ ಯಾಂತ್ರಿಕ ಜೀವಿಯಾಗಿಸುತ್ತಿರುವುದು ಕಂಡು ಬರುತ್ತದೆ. ಇಂದು ಮಾನವ ಪವಿತ್ರವಾದ ವಿವಾಹಕ್ಕೆ ಬದಲಾಗಿ 'ಲೀವಿಂಗ್ ಟುಗೆದರ್' ಜೀವನಕ್ಕೆ ಒಳಗಾಗಿದ್ದಾನೆ. ಭಾರತೀಯ ಸಂವಿಧಾನದಲ್ಲಿ ಮೂಲಭೂತ ಕರ್ತವ್ಯಗಳನ್ನು ಅಳವಡಿಸಿ ಗುರು ಹಿರಿಯರಿಗೆ ಗೌರವ ಸಲ್ಲಿಸಬೇಕು ಎಂದು ಹೇಳಿದರೂ, ಸ್ವತಃ ತಂದೆ ತಾಯಿಗಳನ್ನೇ ವೃದ್ಧಾಶ್ರಮ ಇಲ್ಲವೆ ಬೀದಿಗೆ ಬಿಡುತ್ತಿರುವುದನ್ನು ಕಾಣಬಹುದು. ಹೆಂಡತಿ ಮಕ್ಕಳೊಂದಿಗೆ ಕಾಣದ ದೇಶದಲ್ಲಿ ಅಂತರ್ಜಾಲದಲ್ಲಿ ಮಾತ್ರವೇ ಸಂಪರ್ಕಿಸಿ ಯಾಂತ್ರಿಕ ಮಾನವ ಬದುಕುತ್ತಿದ್ದಾನೆ. ಇವೆಲ್ಲವುಗಳು ಮಾನವೀಯ ಮತ್ತು ಸಾಮಾಜಿಕ ಸಂಬಂಧಗಳ ಅಧಃಪತನಕ್ಕೆ ವೇದಿಕೆ ಎಂದರೂ ತಪ್ಪಲ್ಲ. ಇಂತಹ ಪಾಶ್ಚಿಮಾತ್ಯ ಸಂಸ್ಕೃತಿಗೆ ಮಾರುಹೋಗದೆ ಭಾರತೀಯ ಸಂಸ್ಕೃತಿ ಉಳಿದುಕೊಂಡಿದೆ ಎಂದರೆ ಅದು ಬುಡಕಟ್ಟು ಸಮುದಾಯಗಳಲ್ಲಿ ಮಾತ್ರ. ಇಲ್ಲಿ ತಂದೆ ತಾಯಿ ಅಣ್ಣ, ತಮ್ಮ, ಅಕ್ಕ ತಂಗಿ ಇತ್ಯಾದಿ ಬಂಧುತ್ವದ ಸಂಬಂಧಗಳು. ಇನ್ನೂ ಆಗಾಧವಾಗಿ ಬೇರೂರಿವೆ. ಕರ್‌ಕರ್ ಮುಂಡ ಸಮುದಾಯವು ನಗರದ ಅಂಚಿಗೆ ಬಂದು ನಿಂತಿದ್ದರೂ ಈ ಮೇಲ್ಕಂಡ ಪ್ರಮಾಣದ ಜೀವನ ಅಷ್ಟಾಗಿ ಕಂಡುಬರುವುದಿಲ್ಲ. ಕಾರಣ ಶಿಕ್ಷಣದ ಕೊರತೆ, ರಾಜಕೀಯ ಸಹಭಾಗಿತ್ವ ಇಲ್ಲದಿರುವುದು, ಆರ್ಥಿಕ ಅಭದ್ರತೆಯಿಂದ ಕೂಡಿ ಬಾಳುವ ಸಂಸ್ಕೃತಿಯನ್ನು ಇಂದಿಗೂ ಉಳಿಸಿಕೊಂಡಿದ್ದಾರೆ.

ಕರ್ನಾಟಕದಲ್ಲಿ ಕರ್‌ಕರ್‌ಮುಂಡ ಸಮುದಾಯದ ಶುದ್ಧತೆ ಮತ್ತು ಕೀಳಿರಿಮೆಯಿಂದ ವರ್ಣಸಂಕರ ಕಂಡುಬರುವುದಿಲ್ಲ. ಬದಲಾಗಿ ಸಮುದಾಯದ ಒಳಗೆ ವೈವಾಹಿಕ ಸಂಬಂಧಗಳು ಏರ್ಪಟ್ಟಿವೆ. ಪ್ರಸ್ತುತ ಅಧ್ಯಯಯನದ ಮಿತಿಯಲ್ಲಿ ೧೫೪೯ ಒಟ್ಟು ಜನಸಂಖ್ಯೆಯಲ್ಲಿ ೭೧೪ ಜನರು ವಿವಾಹಿತರಾಗಿರುವರು. ೮೦೮ ಜನರು ಅವಿವಾಹಿತರು ಹಾಗೂ ವಿಧುರರು ೩ಜನ, ವಿಧವೆಯರು ೪೪ ಜನ ಕಂಡುಬರುವರು.

ಕೋಷ್ಟಕ ೫.೫. ಪ್ರಕಾರ ೮೦೮ ಜನರು ಅವಿವಾಹಿತರು ಕಂಡುಬಂದಿದ್ದು, ಉಳಿದವರು ಮಕ್ಕಳು ಮತ್ತು ಹದಿಹರೆಯದವರಿಗಾದ್ದರೆ. ವಿವಾಹಿತರು ೭೧೪ ಜನರಿದ್ದು, ಅವರಿಗಿಂತ ಅವಿವಾಹಿತ ಪ್ರಮಾಣ ಅಧಿಕವಾಗಿದೆ. ಚಿಕ್ಕ ಕುಟುಂಬಗಳ ಪರಿಕಲ್ಪನೆ ಇವರಲ್ಲಿ ಅಧಿಕವಾಗಿದ್ದು ಅಧಿಕ ಮಕ್ಕಳನ್ನೇ ಪಡೆಯುತ್ತಿರುವರು. ಇವರಲ್ಲಿ ಗಂಡು ಸಂತಾನದ ಅಪೇಕ್ಷೆಯು ಅಧಿಕ ಹೆಣ್ಣು ಮಕ್ಕಳ ಹುಟ್ಟಿಗೆ ಕಾರಣವಾಗಿದೆ ಮತ್ತು ಅಲ್ಲಲ್ಲಿ ಒಂದಕ್ಕಿಂತ ಹೆಚ್ಚು ವಿವಾಹವಾಗಿರುವ ಉದಾಹರಣೆಗಳು ಕಂಡುಬರುತ್ತವೆ. ಈ ಕೋಷ್ಟಕದಲ್ಲಿ ಮತ್ತೊಂದು ಪ್ರಮುಖ ಅಂಶ ವಿಧವೆ/ವಿಧುರ ಪ್ರಮಾಣವಾಗಿದೆ. ೩ ಜನ ವಿಧುರರು ಕಂಡು ಬಂದಿದ್ದು, ಮರು ಮದುವೆಯಾಗಿರುವುದನ್ನು ಕಾಣಬಹುದು. ಆದರೆ ೪೪ ಜನ ವಿಧವೆಯರು ಕಂಡುಬಂದಿದ್ದು, ಅಕಾಲಿಕ ಮರಣ, ಅತಿಯಾದ ಕುಡಿತ ಹಾಗೂ ಇನ್ನಿತರ ದುಶ್ಚಟಗಳಿಗೆ ಒಳಗಾಗಿರುವುದು ಮತ್ತು ತಮ್ಮ ವಾಸದ ನೆಲೆ ಕೊಳಚೆ ಪ್ರದೇಶವಾಗಿರುವುದರಿಂದ ಬಹುಬೇಗ ರೋಗಕ್ಕೆ ತುತ್ತಾಗಿ ಅದನ್ನು ಪರಿಹರಿಸಿಕೊಳ್ಳಲಾಗಿದೆ ಸಾವಿಗೆ ಶರಣಾಗಿರುವುನ್ನು ಕಾಣಬಹುದು. ಅದಲ್ಲದೇ ಆರ್ಥಿಕತೆ, ಆರೋಗ್ಯ ಸೌಲಭ್ಯಗಳು ದೊರೆಯದೇ ಇರುವುದರಿಂದ ಪುರುಷರ ಅಧಿಕವಾಗಿ ಮರಣಕ್ಕೆ ಒಳಗಾಗುತ್ತಿರುವುದರಿಂದ ವಿಧವೆಯರ ಪ್ರಮಾಣ ಅಧಿಕವಾಗುತ್ತಿದೆ. ಜೊತೆಗೆ ಬೇಟೆಯ ಕೌಶಲ್ಯ ಮರೆತ ಈ ತಲೆಮಾರಿನ ಸಮುದಾಯದವರು ಊರ ಹಂದಿ ಮತ್ತು ಕುರಿ, ಕೋಳಿ ಮಾತ್ರ ಮಾಂಸಾಹಾರವನ್ನಾಗಿಸಿ ಕೊಂಡಿರುವುದರಿಂದ ಇತರೆ ರೋಗ ನಿರೋಧಕ ಶಕ್ತಿಯಿಂದ ಕೂಡಿದ ಮಾಂಸಾಹಾರವನ್ನು ನಿರ್ಲಕ್ಷಿಸಿರುವುದು ಕಾರಣವಾಗಿರಬಹುದು. ಸಜ್ಜೆ, ಶಾವೆ, ನವಣೆ, ರಾಗಿಗೆ ಬದಲಾಗಿ ಪಾಲಿಶ್ ಮಾಡಿದ ಅಕ್ಕಿಯು ಶ್ರಮಜೀವಿಗಳಾಗಿ ಬದುಕುತ್ತಿರುವ ಇವರಿಗೆ ಮರಣವನ್ನು ಬಹುಬೇಗ ತಂದೊಡ್ಡುತ್ತಿದೆ. ಇದರಿಂದಾಗಿ ಮರಣ ಪ್ರಮಾಣ ಪುರುಷರಲ್ಲಿ ಅಧಿಕವಾಗಿದ್ದು ವಿಧವೆಯರ ಸಂಖ್ಯೆ ಅಧಿಕವಾಗಿದೆ ಎಂದು ಹೇಳಬಹುದು.

| ಕೋಷ್ಟಕ ೫.೬. ವಾಸದ ನೆಲೆ | | |
|---|---|---|
| ಮನೆಯ ಸ್ವರೂಪ | ಸಂಖ್ಯೆ | ಶೇಕಡಾ |
| ಗುಡಾರ | ೨೪ | ೭.೪೭ |
| ಗುಡಿಸಲು | ೨೮ | ೮.೭೨ |
| ಟಿನ್ | ೩೯ | ೧೨.೧೪ |
| ಡಾಬ | ೮ | ೨.೪೯ |
| ಆರ್‌ಸಿಸಿ | ೨೭ | ೮.೪೧ |
| ಹೆಂಚಿನ ಮನೆ | ೧೨೦ | ೩೭.೩೮ |
| ಆಶ್ರಯ ಮನೆ | ೬೦ | ೧೮.೬೯ |
| ಇತರೆ | ೧೫ | ೪.೬೭ |
| ಒಟ್ಟು | ೩೨೧ | ೧೦೦ |

ಆದಿಮಾನವ ಮರದ ಪೊಟರೆ ಗುಹೆಗಳಲ್ಲಿ ಕಾಡುಪ್ರಾಣಿಗಳ ಜೊತೆ ಪ್ರಕೃತಿಯ ಮಡಿಲಲ್ಲಿ ಅಲೆಮಾರಿಯಾಗಿ ತಿರುಗಾಡುತ್ತಾ ಜೀವನ ನಡೆಸುತ್ತಿದ್ದ ಎಂಬುದು ತಿಳಿದಿರುವ ಸಂಗತಿಯಾಗಿದೆ. ಅನಂತರ ಮಾನವನ ಬದುಕಿನ ಸ್ಥಿತ್ಯಂತರಗಳು ಹಳ್ಳಿ, ಪಟ್ಟಣ, ನಗರ, ರಾಜ್ಯಗಳ ಪರಿಕಲ್ಪನೆಗಳು ಹುಟ್ಟಿಕೊಂಡವು. ಇಂತಹ ಸ್ಥಿತ್ಯಂತರಗಳು ಬುಡಕಟ್ಟುಗಳ ಜೀವನ ವಿಧಾನದಲ್ಲಿ ಬದಲಾವಣೆ ತಂದಿರುವುದು ಸಹಜವಾಗಿ ಕಂಡುಬರುತ್ತದೆ. ಕಾಡಿನಿಂದ ನಾಡಿಗೆ ಪಯಣ ಬೆಳೆಸಿದ ಗಿರಿಜನರು ಕಾಡನ್ನು ಬಿಟ್ಟು ನಾಡಿನ ಜನರನ್ನು ಅವಲಂಬಿಸಿ ಬದುಕಲು ಪ್ರಾರಂಭಿಸಿ ನೆಲೆನಿಂತಾಗ, ಸಹಜವಾಗಿ ಹಲವಾರು ಸಮಸ್ಯೆಗಳಿಗೆ ಒಳಗಾಗಬೇಕಾಯಿತು. ಆರೋಗ್ಯ, ಉಡುಗೆ-ತೊಡುಗೆ, ಆಹಾರ-ವಸತಿ, ಕಸುಬು ಇತ್ಯಾದಿ ಸಮಸ್ಯೆಗಳು ಇವರನ್ನು ಕಾಡಿರುವುದು ಮತ್ತು ಕಾಡುತ್ತಿರುವುದನ್ನು ಕಾಣುತ್ತಿದ್ದೇವೆ. ಬಹು ಕಾಲದ ಅಲೆಮಾರಿ ಬದುಕು ನಗರದ ಬದುಕಿಗೆ ಹೊಂದಿಕೊಳ್ಳುವಲ್ಲಿ ಎದುರಾದ ಸಮಸ್ಯೆಗಳಲ್ಲಿ ನೆಲೆಯ ಸಮಸ್ಯೆ ಪ್ರಮುಖವಾಗಿದೆ.

ಕರ್‌ಕರ್ ಮುಂಡರು ಬಹುತೇಕವಾಗಿ ತಮ್ಮ ನೆಲೆಗಳನ್ನು ಗುರುತಿಸಿಕೊಂಡಿರುವುದು ನಗರದ ಕೊಳಚೆ ಪ್ರದೇಶಗಳಲ್ಲಿಯೇ. ಮುಧೋಳ್, ಕಂಪ್ಲಿ, ಮಧುಗಿರಿ, ಕೊಪ್ಪಳಗಳಲ್ಲಿ ಇವರ ಕೊಳಚೆ ಪ್ರದೇಶದ ನೆಲೆಗಳಿಗೆ ನಿದರ್ಶನವಾಗಿ ಕಂಡುಬರುತ್ತವೆ. ಇವರು ನಗರದ ಕೊಳಚೆ ಪ್ರದೇಶಗಳಲ್ಲಿ ನೆಲೆ ನಿಲ್ಲಲು ತಮ್ಮಲ್ಲಿರುವ ಸಾಮಾಜಿಕ ಕೀಳರಿಮೆಯಾದರೆ ಮತ್ತೊಂದು ಕಾರಣ ವೃತ್ತಿಯಾಗಿದೆ. ಕೂದಲು ವ್ಯಾಪಾರ, ಟೆಂಟ್‌ಗಳ ನಿರ್ಮಾಣಕ್ಕೆ, ವಾಂತಿಮಾಡಿಕೊಳ್ಳುವ ತರಬೇತಿ, ಹಂದಿ ಸಾಕಾಣಿಕೆಗಳು ನಗರದ ಜನರಿಂದ ದೂರ ಉಳಿದು ವಾಸಿಸಲು ಕಾರಣವಾಗಿರಬಹುದಾಗಿದೆ.

ಕೋಷ್ಟಕ ೫.೫ ರ ಅನ್ವಯ ೩೨೧ ಕುಟುಂಬಗಳಲ್ಲಿ ಗುಡಾರದಲ್ಲಿ ೨೪ ಕುಟುಂಬಗಳು, ಗುಡಿಸಲಿನಲ್ಲಿ ೨೮, ಟಿನ್‌ಮನೆಗಳಲ್ಲಿ ೩೯, ದಾಬ ಅಥವಾ ಮಾಳಿಗೆ ಮನೆಯಲ್ಲಿ ೮, ಆರ್‌ಸಿಸಿಯಲ್ಲಿ ೨೭, ಹೆಂಚಿನ ಮನೆಯಲ್ಲಿ ೧೨೦, ಆಶ್ರಯಮನೆಯಲ್ಲಿ ೬೦, ಇತರೆ ಬಾಡಿಗೆ ಮನೆಗಲ್ಲಿ ೧೫ ಕುಟುಂಬಗಳು ರಾಜ್ಯಾದ್ಯಂತ ನೆಲೆಸಿರುವುದನ್ನು ಕಾಣಬಹುದಾಗಿದೆ. ಕರ್ನಾಟಕ ಮತ್ತು ಕೇಂದ್ರ ಸರ್ಕಾರಗಳು ಇಂದಿರಾ ಆವಾಸ್, ಆಶ್ರಯಮನೆ, ವಾಲ್ಮೀಕಿ ಮತ್ತು ಅಂಬೇಡ್ಕರ್ ವಸತಿ ಯೋಜನೆಗಳ ಮುಖಾಂತರ ನಗರ ಮತ್ತು ಗ್ರಾಮೀಣ ಪ್ರದೇಶದ ಜನರಿಗೆ ವಸತಿ ಸೌಲಭ್ಯ ಕಲ್ಪಿಸಿದರೂ ೨೮ ಗುಡಿಸಲು ಮತ್ತು ೨೪ ಗುಡಾರದಲ್ಲಿ ಮಧುಗಿರಿ, ನಾಯಕನಹಟ್ಟಿ, ಕಂಪ್ಲಿಗಳಲ್ಲಿ ನೆಲೆಸಿರುವುದನ್ನು ಕಾಣಬಹುದು. ಟಿನ್ ಮನೆಗಳು ೩೯ ಇದ್ದು, ಮುಧೋಳದಲ್ಲಿ ಅಧಿಕ ಸಂಖ್ಯೆಯಲ್ಲಿವೆ. ಉಳಿದಂತೆ ಆರ್‌ಸಿಸಿ ಮನೆಗಳು ಕೊಪ್ಪಳದ ಭಾಗ್ಯನಗರ ಮತ್ತು ದಾವಣಗೆರೆಯಲ್ಲಿ ಕಂಡುಬರುತ್ತವೆ. ಹೆಂಚಿನ ಮನೆಗಳ ಪ್ರಮಾಣ ೧೨೦ ಇದ್ದು ಗ್ರಾಮೀಣ ಪ್ರದೇಶದಲ್ಲಿ ಅಧಿಕ ಸಂಖ್ಯೆಯಲ್ಲಿವೆ. ಅತಿ ಹೆಚ್ಚು ಕಿತ್ತೂರು, ಮಲ್ಲಾಪುರ, ಬೈಲಹೊಂಗಲ ರಾಯಚೂರು, ಯಾದಗಿರಿ, ಕೊಂಡೆಕಲ್ಲುಗಳಲ್ಲಿ ಕಾಣಬಹುದಾಗಿದೆ. ಉಳಿದಂತೆ ೬೦ ಆಶ್ರಯ ಮನೆಗಳಲ್ಲಿ ದಾವಣಗೆರೆಯಲ್ಲಿಯೇ ಅಧಿಕವಾಗಿದ್ದು, ಉಳಿದವು ಬೆಳಗಾವಿಯ ಹಳ್ಯಾಳದಲ್ಲಿ ಕಂಡುಬರುತ್ತವೆ. ಇತರೆ ಉಳಿದ ೧೫ ಕುಟುಂಬಗಳು ಬಾಡಿಗೆ ಮನೆಯಲ್ಲಿ ವಾಸಿಸುತ್ತಾ ನಿವೇಶನ ಮತ್ತು ಕಟ್ಟಡ ಇಲ್ಲದೇ ಬದುಕುತಿರುವುದನ್ನು ಕಾಣಬಹುದು. ನೆಲೆನಿಂತ ಬಹುತೇಕ ಅಲೆಮಾರಿಗಳಲ್ಲಿ ಮುಖ್ಯವಾಗಿ ವಸತಿ ಸಮಸ್ಯೆ ಮುಖ್ಯವಾಗಿರುವುದನ್ನು ಕಾಣಬಹುದಾಗಿದೆ.

ಕೋಷ್ಟಕ ೫.೭.

| ನೆಲೆಯ ಒಡೆತನ | | |
|---|---|---|
| | ಸಂಖ್ಯೆ | ಶೇಕಡಾ |
| ಮನೆಇಲ್ಲ/ನಿವೇಶನ ಇಲ್ಲ | ೨೬ | ೮.೦೯ |
| ಸ್ವಂತದ್ದು | ೨೫೪ | ೭೯.೧೨ |
| ನಿವೇಶನ ಇದೆ ಮನೆ ಇಲ್ಲ | ೩೦ | ೯.೩೪ |
| ಬಾಡಿಗೆ | ೧೧ | ೩.೪೨ |
| ಒಟ್ಟು | ೩೨೧ | ೧೦೦ |

ಆಧುನಿಕ ಸಮಾಜದಲ್ಲಿ ಜನಸಂಖ್ಯೆ ಆಧಾರಿತವಾಗಿ ಮತ್ತು ಮೂಲ ಸಂಸ್ಕೃತಿಯಿಂದ ಬಹುಬೇಗ ನಾಡಿನ ಸಂಸ್ಕೃತಿಗೆ ಒಳಗಾದ ಸಮುದಾಯಗಳು ನೆಲೆನಿಂತ ಬದುಕಿನಲ್ಲಿ ಪ್ರಬಲ ವರ್ಗಗಳಾಗಿ ರೂಪಿತವಾಗಿರುವುದನ್ನು ಕಾಣುತ್ತೇವೆ. ಇಂತಹ ಪ್ರಬಲ ವರ್ಗಗಳು ರಾಜಕೀಯ, ಶೈಕ್ಷಣಿಕ, ಆರ್ಥಿಕ ಮತ್ತು ಸಾಮಾಜಿಕ ಸ್ಥಾನಗಳಲ್ಲಿ ಮೇಲುಸ್ತರದಲ್ಲಿ ನಿಂತು, ಜೀನೋ ಸೆಂಟ್ರಿಜಂ ಮನೋಭಾವನೆಯಿಂದ ಅಲ್ಪಸಂಖ್ಯಾತ, ಅಲಕ್ಷಿತ, ಅಥವಾ ತಳಸಮುದಾಯಗಳನ್ನು ಬೆಳೆಯಲು ಬಿಡದೆ ಆಲದ ಮರದಂತೆ ಎಲ್ಲಾ ಸರ್ಕಾರಿ ಸೌಲಭ್ಯಗಳನ್ನು ತಾವೇ ಆಕ್ರಮಿಸಿಕೊಂಡು ಕುರುಚಲು ಗಿಡಗಳಂತೆ ಅಲ್ಪಸಂಖ್ಯಾತ ಸಮುದಾಯಗಳನ್ನು ಕಾಣುತ್ತಿರುವುದು ವಿಷಾದನೀಯವಾಗಿದೆ. ಸರ್ವರಿಗೂ ಸಮಬಾಳು ಎಂದು ಹೇಳುವ ಮನಸ್ಥಿತಿಗಳು ಹೇಳಿಕೆಗಳಿಗೆ ಸೀಮಿತವಾಗಿವೆ. ಪ್ರಜಾಪ್ರಭುತ್ವ ದೇಶವಾದ ಭಾರತದಲ್ಲಿ ಜನರಿಂದ, ಜನರಿಗಾಗಿ, ಜನರಿಗೋಸ್ಕರ ಇರುವ ಆಡಳಿತ ವ್ಯವಸ್ಥೆಯಿದ್ದು, ಇಂದು ಅಧಿಕಾರ ಪಡೆಯಲು ಜಾತಿ ರಾಜಕಾರಣ ಬಹು ಸಂಖ್ಯಾತ ವರ್ಗಗಳ ಅಸ್ತ್ರವಾಗುತ್ತಿದೆ. ಅಧಿಕಾರದ ಪಡೆಯುವುದಕ್ಕಾಗಿ ಪ್ರಬಲ ವರ್ಗಗಳ ಓಲೈಕೆಗಾಗಿಯೇ ಯೋಜನೆಗಳು ಸಿದ್ಧವಾಗುವಂತಿದೆ. ಕಡಿಮೆ ಸಂಖ್ಯೆಯ ಅಲೆಮಾರಿಗಳು ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಸೌಲಭ್ಯಗಳಲ್ಲಿ ಹಿಂದುಳಿದಿದ್ದು ಈ ಸ್ಥಿತಿಯಿಂದ ಮೇಲೆತ್ತಲು ಸರ್ಕಾರಗಳು ಏನೇ ಯೋಜನೆಗಳನ್ನು ಕೈಗೊಂಡರೂ ಅನುಷ್ಠಾನ ಮತ್ತು ಮೀಸಲಾತಿಯ ತಪ್ಪಾದ ಗ್ರಹಿಕೆಗಳು ಪ್ರಬಲವರ್ಗಗಳ ಪಾಲಾಗುತ್ತಿದ್ದು ಅಲೆಮಾರಿಗಳ ಪಾಲಾಗದೇ ಇರುವುದು ಪಿಷಾದನೀಯವಾಗಿದೆ.

೨೧ ನೇ ಶತಮಾನದ ಆಧುನಿಕ ಸಮಾಜದಲ್ಲಿಯೂ ಪ್ರಬಲ ವರ್ಗಗಳ ದುರಾಸೆಯಿಂದ ಬಾಳು, ಬಾಳಲು ಬಿಡು ಎಂಬ ಮಾನವೀಯ ಮೌಲ್ಯಗಳು ಮರೆಯಾಗಿ ತಳಸಮುದಾಯಗಳು ಮೂಲಭೂತ ಸೌಲಭ್ಯಗಳಿಂದ ವಂಚಿತವಾಗಿರುವುದನ್ನು ಕಾಣುತ್ತೇವೆ. ಇಂತಹ ಸಮಸ್ಯೆಗಳಲ್ಲಿ ವಸತಿ ಸಮಸ್ಯೆಯ ಒಂದಾಗಿದ್ದು ಕರ್‌ಕರ್ ಮುಂಡರಲ್ಲಿಯೂ ಸಹ ಕಂಡು ಬರುವುದನ್ನು ಕಾಣಬಹುದು. ನೆಲೆಯ ಪ್ರಮಾಣವನ್ನು ಕೋಷ್ಟಕ ೫.೭ ರಲ್ಲಿ ಸೂಚಿಸಲಾಗಿದ್ದು ಸ್ವಂತದಾಗಿ ಅಥವಾ ಆಶ್ರಮ ಮನೆಗಳಲ್ಲಿ ವಾಸಿಸುವರ ಪ್ರಮಾಣ ೨೫೪ ಕುಟುಂಬಗಳು ಮುಂದುವರಿದ ನಗರಗಳಲ್ಲಿ ಸ್ವಲ್ಪಮಟ್ಟಿನ ರಾಜಕೀಯ ಸಹಭಾಗಿತ್ವದಿಂದಾಗಿ ದಾವಣಗೆರೆ ಮತ್ತು ಕಿತ್ತೂರಿನ ಮಲ್ಲಾಪುರ, ಬೈಲಹೊಂಗಲ, ಬಾಗಲಕೋಟೆಗಳಲ್ಲಿ ನಿವೇಶನ ಮತ್ತು ಆಶ್ರಯ ಮನೆಗಳನ್ನು ಪಡೆದು ಜೀವಿಸುತ್ತಿದ್ದಾರೆ. ನಿವೇಶನ ಮತ್ತು ಮನೆಯ ಸಮಸ್ಯೆಯಿಂದ ಅಥವಾ ಬಾಡಿಗೆ ಮನೆಯಲ್ಲಿ ೬೭ ಕುಟುಂಬಗಳು ಅತಂತ್ರವಾಗಿರುವುದನ್ನು ಕಾಣುಬಹುದು.ಕಡಿಮೆ ಜನಸಂಖ್ಯೆ ಇರುವುದು ಈ ಸಮುದಾಯವನ್ನು ನಿರ್ಲಕ್ಷಿಸಿರುವುದು ಮತ್ತು ಯೋಜನೆಗಳನ್ನು ಪ್ರಬಲವರ್ಗಗಳು ಪಡೆಯುತ್ತಿರುವುದಕ್ಕೆ ಕಾರಣವಾಗಿದೆ. ಸಮುದಾಯದ ಗುರುತಿನ ಸಮಸ್ಯೆಯಿಂದ ಯೋಜನೆಗಳನ್ನು ಪಡೆಯುವಲ್ಲಿ ಈ ಸಮುದಾಯ ವಿಫಲವಾಗಿರುವುದನ್ನು ಕಾಣಬಹುದಾಗಿದೆ.

ಕೋಷ್ಟಕ ೫.೮.

| ಪಶುಸಂಪತ್ತು | ಸಂಖ್ಯೆ |
|---|---|
| ಎತ್ತು | ೧ |
| ಆಕಳು | ೨ |
| ಕುರಿಗಳು | ೭ |
| ಮೇಕೆ | ೨೦ |
| ಕೋಳಿ | ೩೬ |
| ಹಂದಿ | ೫೩ |
| ಕೌಜುಗ | ೪೨ |
| ಇತರ ಪ್ರಾಣಿಗಳು | ೩೭ |
| ಒಟ್ಟು | ೧೯೮ |

ಕೃಷಿಯನ್ನೇ ಅರಿಯದ ಅಲೆಮಾರಿ ಸಮುದಾಯಗಳು ಬೇಟೆ ಮತ್ತು ಪಶುಪಾಲನೆಯಿಂದಲೇ ಅಂದು ಜೀವನ ನಿರ್ವಹಿಸುತ್ತಿದ್ದವು. ರಾಜರುಗಳಆಳ್ವಿಕೆಯ ಸಂದರ್ಭದಲ್ಲಿ ಸೈನಿಕ ವೃತ್ತಿ, ಗೂಢಾಚಾರಿ, ಪ್ರದರ್ಶನ ಕಲೆಗಳ ಮೂಲಕ ಮನರಂಜನೆ ನೀಡುತ್ತಾ ಹಾಗೂ ಕರಕುಶಲ ಕಲೆಗಳಿಂದಲೇ ಕೃಷಿ ಪ್ರಧಾನ ವರ್ಗಗಳನ್ನು ಅವಲಂಬಿಸಿ ಬದುಕಿದ್ದನ್ನು ಕಾಣುತ್ತೇವೆ. ಇವರ ಪ್ರಾಮಾಣಿಕತೆ, ಧೈರ್ಯ, ಸಾಹಸ, ಮನರಂಜನೆ ಇತ್ಯಾದಿ ಮಾನವೀಯ ಗುಣಗಳನ್ನು ಮೆಚ್ಚಿದ ರಾಜರು ನೀಡಿದ ಇನಾಮು ಭೂಮಿಗಳನ್ನೇ ಮರೆತು ಅಲೆಮಾರಿತನದಿಂದಲೇ ಜೀವನ ಕಳೆದವರಾಗಿದ್ದಾರೆ. ಸರ್ಕಾರವು ಜಾರಿಗೆ ತಂದ ಯಾವುದೇ ಕಾನೂನುಗಳಿಗೂ ಸಕ್ರೀಯವಾಗಿ ಒಳಗಾಗಿದ ಇವರು ದಿನ ಕಳೆದಂತೆ ಬೇಟೆಯನ್ನು ಪಾರಂಪರಿಕ ವೃತ್ತಿಗೆ ಬದಲು ಹವ್ಯಾಸಿ ಮತ್ತು ಧಾರ್ಮಿಕ ಕಾರಣಗಳಿಂದ ರೂಢಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಕರ್‌ಕರ್‌ಮುಂಡರ ಬೆಡಗುಗಳು ಮೂಲತಃ ಪಶುಪಾಲಕರಾಗಿದ್ದವರು ಎಂದು ತಿಳಿಸುತ್ತವೆ. ಇವರ ಅಲೆಮಾರಿತನದ ಜೊತೆಯಲ್ಲಿಯೇ ಪಶುಸಂಪತ್ತು ಜೊತೆಯಾಗಿ ಬರುತ್ತಿದ್ದುದ್ದನ್ನು ಗುರುತಿಸಬಹುದಾಗಿದೆ. ಕೆಲವೊಂದು ಸಮುದಾಯಗಳಿಗೆ ಕೋತಿ, ಹಾವು, ಕರಡಿ, ಕತ್ತೆ, ಕುದುರೆ, ಓಂಟೆ, ಎತ್ತುಗಳು ಜೀವನಾಧಾರವಾಗಿ ಕಂಡುಬರುತ್ತವೆ. ಮತ್ತೆ ಕೆಲವು ಆಹಾರ ಕ್ರಮದಿಂದ ಜೊತೆಯಾಗಿರುತ್ತವೆ. ಕುರಿ, ಕೋಳಿ, ಹಂದಿ, ಕೌಜುಗ, ಮೇಕೆ, ಆಕಳು ಉದಾಹರಣೆಯಾಗಿ ಕಂಡುಬರುತ್ತವೆ. ಕರ್‌ಕರ್ ಮುಂಡರಲ್ಲಿ ಪಶುಸಂಪತ್ತು ಆಹಾರ ಕಾರಣದಿಂದ ಜೊತೆಯಾಗಿರುವುದನ್ನು ಕಾಣಬಹುದಾಗಿದೆ. ಮೇಕೆಗಳನ್ನು ಸಾಕುವ ಮತ್ತು ಆಹಾರವಾಗಿ ಸ್ವೀಕರಿಸಿರುವ ಕಾರಣದಿಂದ ಮ್ಯಾಕ್ಲೋಲ್ ಎಂಬ ಬೆಡಗು ಸೃಷ್ಟಿಯಾಗಿದ್ದು, ಮತ್ತೆ ಅದರಲ್ಲಿ ಮತ್ತೊಂದು ಬೆಡಗು ವಿಭಜನೆಯಾಗಿ ತೆಲ್ಲಮ್ಯಾಕ್ಲೋಳ್ ಎಂದು ನಾಮಕರಣಗೊಂಡಿರುವುದನ್ನು ಮಾಹಿತಿದಾರರಿಂದ ತಿಳಿಯಬಹುದು. ಇಂದು ಸಹ ಮೇಕೆಗಳ ಸಾಕಾಣಿಕೆಯನ್ನು ಗುರುತಿಸಬಹುದಾಗಿದ್ದು, ೨೦ ಮೇಕೆಗಳನ್ನು ಸಾಕಿರುವುದನ್ನು ಈ ಸಮುದಾಯದಲ್ಲಿ ಕಾಣಬಹುದಾಗಿದೆ. ಕೃಷಿಯ ಜ್ಞಾನದ ಕೊರತೆಯಿಂದಾಗಿ ಅಥವಾ ಅದನ್ನು ಅವಲಂಬಿಸಿ ಬದುಕುವ ಪಾರಂಪರಿಕ ಕಲೆಯು ಇಲ್ಲದಿರುವುದರಿಂದ ಕೇವಲ ಒಂದು ಎತ್ತು ಕಂಡುಬಂದಿದೆ. ೨ ಆಕಳು ಕಂಡುಬರುತ್ತವೆ. ಎತ್ತು ಮತ್ತು ಆಕಳು ಕುಂಬಾರಹಳ್ಳದ ಕುಟುಂಬಗಳಲ್ಲಿ ಕಾಣಬಹುದು. ಕರ್‌ಕರ್ ಮುಂಡರು ಸ್ತ್ರೀದೇವತೆಗಳ ಆರಾಧಕರಾಗಿದ್ದು ಅವುಗಳನ್ನು ತೃಪ್ತಿಪಡಿಸಲು ಹರಕೆಗಳ ಮೂಲಕ ಕುರಿ, ಕೋಳಿ, ಓತಗಳನ್ನು ಬಲಿಕೊಡುವುದನ್ನು ಕಾಣಬಹುದಾಗಿದೆ. ಓಂದೆ ಹಂದಿಗಳ ಬಲಿ ಸಹಜವಾಗಿದ್ದು, ಇಂದು ಹಂದಿಯು

ವ್ಯಾಪಾರದ ಸರಕಾಗಿ ಮಾತ್ರ ಕಂಡುಬರುವುದು. ಬಲಿ ನೀಡಲು ಅನುಕೂಲವಾಗುವಂತೆ ದೇವರ ಹೆಸರಿನಲ್ಲಿಯೇ ಕುರಿ, ಕೋಳಿ, ಓತಗಳನ್ನು ಸಾಕುವರು. ಅದರಂತೆ ಉತ್ತರ ಕರ್ನಾಟಕ ಬಹುತೇಕ ಕರ್‌ಕರ್ ಮುಂಡರು ಈ ಪ್ರಾಣಿಗಳನ್ನು ಸಾಕುವ ಮೂಲಕ ಬಲಿ ನೀಡುವುದನ್ನು ಕಾಣಬಹುದಾಗಿದೆ. ಕೋಷ್ಟಕ ೫.೮ರಂತೆ ೭ ಕುರಿ, ೩೬ ಕೋಳಿ, ಇತರ ಪ್ರಾಣಿಗಳಲ್ಲಿ ೩೭ ಓತಗಳನ್ನು ಕಾಣಬಹುದು. ಹಂದಿಯು ಧಾರ್ಮಿಕ ಆಚರಣೆಯ ಭಾಗದಿಂದ ಇಂದು ಆರ್ಥಿಕತೆಯ ಮೂಲವಾಗಿ ರೂಪಿತವಾಗಿದ್ದು ಕಿತ್ತೂರು, ಮುಧೋಳ್, ಹಳ್ಯಾಳ, ಬೈಲಹೊಂಗಲ ಮತ್ತು ದಾವಣಗೆರೆಗಳಲ್ಲಿ ಒಟ್ಟು ೫೩ ಹಂದಿಗಳನ್ನು ಕಾಣಬಹುದಾಗಿದೆ. ಕೌಜುಗಳು ಬೇಟೆಗೆ ಸಹಾಯಕವಾಗಿದ್ದು, ಅವುಗಳಿಂದಲೇ ಕೌಜುಗಳನ್ನು ಹಿಡಿಯುವ ತಂತ್ರಗಾರಿಕೆಯಿಂದ ಪಂಜರದಲ್ಲಿ ಒಟ್ಟು ೪೨ ಕೌಜುಗಳನ್ನು ಸಾಕಿರುವರು. ಇದರಿಂದ ಬೇಟೆ ಇಂದಿಗೂ ಜೀವಂತವಾಗಿದೆ ಎಂದು ತಿಳಿಯಬಹುದು.

ಕೋಷ್ಟಕ 5.9.

| ಜೀವನಾಧಾರ ವೃತ್ತಿಗಳು | | | | | |
|---|---|---|---|---|---|
| | ಪುರುಷರು | | ಮಹಿಳೆಯರು | | |
| | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ | ಒಟ್ಟು ಶೇಕಡಾ |
| ಕೂಲಿ | 261 | 16.6 | 148 | 9.4 | 26.00 |
| ಸರಕಾರಿ ನೌಕರರು | 4 | 0.20 | 1 | 0.1 | 0.30 |
| ಗೃಹಿಣಿ | 0 | 0 | 171 | 11 | 11 |
| ಡ್ರೈವರ್ | 5 | 0.31 | 0 | 0 | 0.31 |
| ವಿದ್ಯಾರ್ಥಿ | 213 | 13.70 | 208 | 13.3 | 27 |
| ಭಿಕ್ಷಾಟನೆ | 12 | 0.70 | 06 | 0.3 | 1 |
| ಖಾಸಗಿ ಉದ್ಯೋಗ | 3 | 0.10 | 1 | 0.1 | 0.2 |
| ಕೂದಲು ವ್ಯಾಪಾರ | 122 | 8.00 | 102 | 6.5 | 14.5 |
| ವ್ಯವಹಾರ | 1 | 0.10 | 0 | 0 | 0.1 |
| ಅವಲಂಬಿತರು | 144 | 9.1 | 167 | 10.6 | 19.7 |
| ಒಟ್ಟು | 764 | | 805 | | 100 |

ಆಧುನಿಕ ಸಮಾಜದ ವ್ಯಕ್ತಿಯ ಅಥವಾ ಕುಟುಂಬದ ಸ್ಥಾನಮಾನವನ್ನು ಆರ್ಥಿಕತೆ ನಿರ್ಧರಿಸುವುದು. ವೈಧಿಕ ಯುಗದ ವರ್ಣಾಶ್ರಮ ವ್ಯವಸ್ಥೆಯಲ್ಲಿ ವ್ಯಕ್ತಿಯ ಮಾಡುವ ವೃತ್ತಿಗಳ ಹಿನ್ನೆಲೆಯಲ್ಲಿ ಸಾಮಾಜಿಕ ಸ್ಥಾನಮಾನಗಳು ನಿರ್ಧರಿತವಾಗುತ್ತಿದ್ದವು. ವೃತ್ತಿಗಳು ಜಾತಿಗಳಾದಾಗ ಕೆಲವೊಂದು ಸಮುದಾಯಗಳಿಗೆ ಕಳಂಕಿತವಾಗಿ ಕೆಳದೂಡಲ್ಪಟ್ಟರೆ ಮತ್ತೆ ಕೆಲವು ವೃತ್ತಿಗಳು ಮೇಲ್ಮಟ್ಟದ ಸ್ಥಾನಮಾನ ಪಡೆದವು. ಆದರೆ ಆ ವೃತ್ತಿಗಳು ಜೀವನಾಧಾರ ವೃತ್ತಿಗಳಾಗಿ ಅನಿವಾರ್ಯತೆಯನ್ನು ಸೃಷ್ಟಿಸಿದ್ದು ಅಲೆಮಾರಿ ಸಮುದಾಯಗಳಲ್ಲಿ ಅಧಿಕವಾಗಿ ಕಂಡುಬರುತ್ತದೆ. ಅನಿವಾರ್ಯತೆಯು ಆರ್ಥಿಕತೆಯಾಗಿ ನಿರ್ಧರಿಸಲು ಪ್ರಾರಂಭವಾದ ಆಧುನಿಕ ಸಮಾಜದಲ್ಲಿ ಪ್ರತಿಯೊಂದು ವೃತ್ತಿಯು ಸಮುದಾಯದ ಉಪಜೀವನಕ್ಕೆ ಅನಿವಾರ್ಯತೆ ಸೃಷ್ಟಿಸಿದ ಬೆನ್ನಲ್ಲೇ, ಪರ್ಯಾಯ ವೃತ್ತಿಗಳು ಇತರ ಸಮುದಾಯಗಳಿಂದ ಎರವಲಾಗಿ ಪಡೆದಿರುವುದನ್ನು ಕಾಣಬಹುದು. ಒಂದು ಸಮುದಾಯದ ಪಾರಂಪರಿಕ ವೃತ್ತಿ ಒಂದು ಕಾಲಮಾನದಲ್ಲಿ ಉನ್ನತ ಮಾನ್ಯತೆ ಪಡೆದರೆ ಅದೇ ವೃತ್ತಿ ಮತ್ತೊಂದು ಕಾಲದಲ್ಲಿ ತಳಮಟ್ಟಕ್ಕೆ ಬಂದಿರುವುದನ್ನು ಸಹ ಕಾಣಬಹುದು. ಅದಕ್ಕಾಗಿ ವೃತ್ತಿಗಳ ಅನುಸರಣೆ ಸಹಜವಾಗಿಯೇ ಮುಂದುವರೆಸಿಕೊಂಡು ಪಾರಂಪರಿಕ ವೃತ್ತಿಗಳು ಮಾಯವಾಗಿ ಪರ್ಯಾಯ ವೃತ್ತಿಗಳು ಸೃಷ್ಟಿಯಾಗಿರುವುದನ್ನು ಕಾಣಬಹುದು. ಇದೇ ರೀತಿಯಲ್ಲಿ ಕರ್‌ಕರ್ ಮುಂಡರಿಗೆ ಪಾರಂಪರಿಕ ವೃತ್ತಿಯ ಜೊತೆಗೆ ಪರ್ಯಾಯ ವೃತ್ತಿಗಳು ಉಪ ಜೀವನಕ್ಕೆ ಬೆನ್ನೆಲುಬಾಗಿ ಮತ್ತು ಅನಿವಾರ್ಯವಾಗಿರುವುದನ್ನು ಕಾಣುತ್ತೇವೆ. ನೂರಕ್ಕೆ ನೂರರಷ್ಟು ಕೃಷಿ ಭೂಮಿ ಇಲ್ಲದ ಇವರು ಕೂಲಿಯನ್ನು ನೆಚ್ಚಿಕೊಂಡು ಬದುಕುವುದನ್ನು ಗ್ರಾಮೀಣ ಪ್ರದೇಶದ, ಹಳ್ಯಾಲ, ಕಿತ್ತೂರು, ಮಲ್ಲಾಪುರ, ರಾಯಚೂರು, ಚಿಕ್ಕಹಳ್ಳಿ ಕುಂಬಾರಹಳ್ಳ, ಬೀಳಗಿ, ಮಧುಗಿರಿ, ನಾಯಕನ ಹಟ್ಟಿಗಳಲ್ಲಿನ ೩೦೯ ಜನರನ್ನು ಕಾಣಬಹುದಾಗಿದೆ. ಅದರಲ್ಲಿ ಪುರುಷರು ೨೬೧, ಮಹಿಳೆಯರು ೧೪೮ ಜನರಿರುವುದನ್ನು ಕಾಣಬಹುದು. ಕೃಷಿ ಸಂಬಂಧಿ ಕೂಲಿ ಇಲ್ಲವೆ ಕಟ್ಟಡ ಕೆಲಸಗಳಲ್ಲಿ ದಿನಗೂಲಿಗಳಾಗುವ ಮೂಲಕ ಜೀವನ ನಡೆಸುತ್ತಿರುವರು. ಇದುವರೆಗೆ ಔಪಚಾರಿಕ ಶಿಕ್ಷಣದ ಕೊರತೆಯಿಂದ ಹೆಚ್ಚಿನ ಸಂಖ್ಯೆಯ ಸರ್ಕಾರಿ ನೌಕರರು ಇಲ್ಲವಾಗಿರುವುದರಿಂದ ಕೇವಲ ೫ ಜನ ಪೋಲಿಸ್ ಇಲಾಖೆ ಮತ್ತು ಮುನ್ಸಿಪಾಲಿಟಿಗಳಲ್ಲಿ ನೌಕರಿ ಪಡೆದಿರುವುದೇ ದೊಡ್ಡದೆನಿಸಿದೆ. ಕೊಪ್ಪಳ, ಇಳಕಲ್, ದಾವಣಗೆರೆ ಭಾಗದಲ್ಲಿರುವವರು ಆರ್ಥಿಕ ಸದೃಡವಾಗಿರುವುದರಿಂದ ೧೭೧ ಮಹಿಳೆಯರು ಗೃಹಿಣಿಯಾಗಿ ಮನೆಯ ಕೆಲಸ ಕಾರ್ಯದಲ್ಲಿ ಸಹಭಾಗಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಮುದಾಯದ ನಾಯಕನಹಟ್ಟಿ, ಮುಧೋಳ್ ಮತ್ತು ಮಲ್ಲಾಪುರದಲ್ಲಿನ ೫ ಜನರು ಆಟೋ ಡ್ರೈವರ್ ವೃತ್ತಿಯಲ್ಲಿ ತೊಡಗಿರುವರು. ಇತ್ತೀಚಿನ ದಿನಮಾನದಲ್ಲಿ ಹೊಸತಲೆಮಾರಿತನವರು ಶಿಕ್ಷಣದ ಅರಿವು ಮತ್ತು ಸರ್ಕಾರದ ಉಚಿತ

ಸಾರ್ವತ್ರಿಕ, ಕಡ್ಡಾಯ ಶಿಕ್ಷಣ ನೀತಿಯಿಂದ ೪೨೧ ಮಕ್ಕಳು ಶಿಕ್ಷಣ ಪ್ರಕ್ರಿಯೆಗೆ ಒಳಗಾಗಿದ್ದು, ಇದರ ಜೊತೆಗೆ ೩೧೧ ಜನರು ಅವಲಂಬಿತರು ಅಂದರೆ ವಯಸ್ಸಾದವರು, ಅಂಗವಿಕಲರು ಕಂಡುಬರುವರು.

ಕರ್‌ಕರ್ ಮುಂಡರ ಪಾರಂಪರಿಕ ಭಿಕ್ಷಾಟನಾ ವೃತ್ತಿಯು ಕೆಲವರಲ್ಲಿ ವರ್ಷಕ್ಕೊಮ್ಮೆ ಹವ್ಯಾಸಿಯಾಗಿದೆ. ಮತ್ತೆ ಕೆಲವರು ಜೀವನಾಧಾರ ವೃತ್ತಿಯಾಗಿ ವರ್ಷ ಪೂರ್ತಿ ನಿರ್ವಹಿಸುವರು. ಅಂತವರಲ್ಲಿ ೧೮ ಜನ ಸಂತೆ, ಜಾತ್ರೆ, ಹಬ್ಬ ಉತ್ಸವಗಳಲ್ಲಿ ಇಂದಿಗೂ ಭಿಕ್ಷಾಟನೆಯನ್ನು ಅವಲಂಬಿಸಿ ಬದುಕುತ್ತಿರುವರು. ಶಿಕ್ಷಣ ಕುಂಠಿತವಾಗಿ ಮಧುಗಿರಿ, ಮುಧೋಳ್ ದಾವಣಗೆರೆಯಲ್ಲಿ ೪ ಜನ ಖಾಸಗಿ ಉದ್ಯೋಗ ಮಾಡುತ್ತಿರುವರು. ಕೊಪ್ಪಳದಲ್ಲಿ ಒಬ್ಬರು ಫೈನಾನ್ಸ್ ವ್ಯವಹಾರ ಮಾಡುತ್ತಿದ್ದು, ಬಹುತೇಕ ಜನರು ಪೂರ್ಣ ಪ್ರಮಾಣದಲ್ಲಿ ಕೂದಲು ಸಂಗ್ರಹ ಮತ್ತು ಮಾರಾಟದಲ್ಲಿ ತೊಡಗಿರುವುದನ್ನು ಕಾಣಬಹುದು. ಸ್ಟೇಷನರಿ ವ್ಯಾಪಾರವೆಂದು ಕರೆಯುವ ಕೂದಲು ವ್ಯಾಪಾರವು ಹೈದ್ರಾಬಾದಿನವರೆಗೂ ವಿಸ್ತರಿಸಿದ್ದು ಉಪಜೀವನಕ್ಕೆ ಕೂಲಿ ಹೊರತುಪಡಿಸಿದರೆ ಪರ್ಯಾಯವಾಗಿ ಉಳಿದ ಮಾರ್ಗವೇ ಕೂದಲು ವ್ಯಾಪಾರವೆಂದರೂ ತಪ್ಪಾಗಲಿಕ್ಕಿಲ್ಲ. ಕರ್ನಾಟಕದ ಕೂದಲು ವ್ಯಾಪಾರದಲ್ಲಿ ಕರ್‌ಕರ್ ಮುಂಡರೇ ಅಧಿಕ ಸಂಖ್ಯೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಒಟ್ಟಾರೆಯಾಗಿ ಕರ್‌ಕರ್‌ಮುಂಡರ ಆರ್ಥಿಕತೆಯು ಕೂಲಿ ಮತ್ತು ಕೂದಲು ವ್ಯಾಪಾರವನ್ನು ನಿರ್ಧರಿಸಿದೆ ಎಂದರೂ ತಪ್ಪಿಲ್ಲ. ಆ ಮೂಲಕವಾಗಿ ಇವರ ಉಪಜೀವನ ಕ್ರಮ ನಿರಂತರವಾಗಿ ಸಾಗಿಬರುತ್ತಿದ್ದು ಇದಕ್ಕಾಗಿ ಉದ್ಯೋಗ ತರಬೇತಿ ಕೌಶಲ್ಯಗಳನ್ನು ಜಾಗತೀಕರಣ ಸಂದರ್ಭದಲ್ಲಿ ನೀಡುವ ಅವಶ್ಯಕತೆ ಇದೆ ಎಂದು ಹೇಳಬಹುದು.

ಕೋಷ್ಟಕ 5.10

| ಶೈಕ್ಷಣಿಕ ಸ್ಥಿತಿಗತಿ | | | | | |
|---|---|---|---|---|---|
| | ಪುರುಷರು | | ಮಹಿಳೆಯರು | | |
| | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ | ಒಟ್ಟು ಶೇಕಡಾ |
| ಅನಕ್ಷರಸ್ಥರು | 335 | 21.3 | 395 | 25.1 | 46.4 |
| ಪ್ರಾಥಮಿಕ (1ರಿಂದ 8) | 264 | 6.8 | 255 | 16.2 | 33.0 |
| ಪ್ರೌಢಶಾಲೆ (9–10) | 63 | 4.0 | 53 | 3.3 | 7.3 |
| ಪಿಯುಸಿ | 16 | 1 | 14 | 0.8 | 1.8 |
| ಪದವಿ | 12 | 0.7 | 3 | 0.1 | 0.8 |
| ಇಂಜನಿಯರಿಂಗ್ | 0 | 0 | 1 | 0.20 | 0.20 |
| ಐಟಿಐ/ಡಿಪ್ಲೋಮಾ | 2 | 0.1 | 2 | 0.1 | 0.2 |
| 6 ವರ್ಷ ಒಳಗಿನವರು (ಬಾಲವಾಡಿ/ಅಂಗನವಾಡಿ) | 72 | 4.8 | 82 | 5.5 | 10.3 |
| ಸಾಕ್ಷರತೆ | 357 | 12.60 | 477 | 20.07 | 32.67 |
| ಒಟ್ಟು | 764 | 48.70 | 805 | 51.30 | 100 |

ಭಾರತೀಯ ಚರಿತ್ರೆಯನ್ನು ಗಮನಿಸಿದಾಗ ಸಿಂಧೂ ಬಯಲಿನ ನಾಗರಿಕತೆಯಿಂದ ಇಂದಿನವರೆಗೂ ಜ್ಞಾನವನ್ನು ಅನೇಕ ಪರಿಭಾಷೆಗಳಲ್ಲಿ ಮುಂದುವರೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಅದು ಗುರುಕುಲದಿಂದ ಅಗ್ರಹಾರ, ಮದರಾಸ, ಚೈತ್ಯಾಲಯ, ಬೌದ್ಧಸ್ತಪಗಳ ಮೂಲಕ ತಿಳುವಳಿಕೆಯನ್ನು ಕಲಿಯಲಾಗುತಿತ್ತು. ಕಲಿಕಾ ಮಾಧ್ಯಮ ಅವರವರ ಅರಿವಿನ ಭಾಷೆಯ ಮೂಲಕ ನಡೆಯುತ್ತಿತ್ತು. ಅಂದು ಸಂಸ್ಕೃತ, ಬ್ರಾಹ್ಮೀ, ದೇವನಗರಿ, ಉರ್ದು, ಕನ್ನಡ, ತಮಿಳು, ಹಿಂದಿ, ತೆಲುಗು ಎಂಬ ಇತ್ಯಾಧಿ ಭಾಷೆಗಳು ಪ್ರಧಾನವಾಗಿದ್ದವು. ಬ್ರಿಟಿಷರ ವಸಹಾತುಶಾಹಿ ನೀತಿಯ ಪರಿಣಾಮ ಭಾರತದಲ್ಲಿ ಇಂಗ್ಲಿಷ್ ಶಿಕ್ಷಣ ಕ್ರಮ ಜಾರಿಯಾದಾಗ ಜ್ಞಾನದ ಅರಿವು ಜಾಗತಿಕ ಮಟ್ಟಕ್ಕೇರಿತು. ಅಂದಿನಿಂದ ಔಪಚಾರಿಕ ಶಿಕ್ಷಣ ಕ್ರಮ ರೂಢಿಯಾಯಿತು ಎಂದು ಹೇಳಬಹುದು. ಬ್ರಿಟಿಷರ ಕಾಲಾವಧಿಯಲ್ಲಿ ರಾಜಾರಾಂ ಮೋಹನ್‌ರಾಯ್, ಅನಿಬೆಸೆಂಟ್, ಜ್ಯೋತಿಬಾಪುಲೆ ಆತ್ಮರಾಮಪಾಂಡುರಂಗ ಇತ್ಯಾದಿ ಪುನರುಜ್ಜೀವನದ ಮಹಾಪುರುಷರಿಂದ ಸಾಮಾಜಿಕ ಶುದ್ಧೀಕರಣ ಚಳುವಳಿಗಳು ಆರಂಭವಾದವು. ಅದಕ್ಕೆ ಪೂರಕವಾಗಿ ಬ್ರಿಟಿಷರು ಮೆಕಾಲೆ ವರದಿ, ಅನಂತರದ ಚಾರ್ಟರ್ ಆಕ್ಟ್‌ಗಳನ್ನು ಜಾರಿಗೊಳಿಸಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವುದರ ಮೂಲಕ ಭಾರತೀಯರ ಬೌದ್ಧಿಕ ಮಟ್ಟವನ್ನು ವಿಸ್ತಾರಗೊಳಿಸುವಲ್ಲಿ ನೆರವಾದರು ಎಂದು ಹೇಳಬಹುದು. ಭಾರತದ ರಾಷ್ಟ್ರೀಯ ಚಳುವಳಿಗೆ ಕಾರಣವಾದ ಅಂಶಗಳಲ್ಲಿ ಇಂಗ್ಲೀಷ್ ಶಿಕ್ಷಣ ಜಾರಿಯು ಒಂದಾಗಿರುವುದನ್ನು ಗಮನಿಸಬಹುದು. ಭಾರತದ ಸ್ವಾತಂತ್ರ್ಯ ನಂತರದಲ್ಲಿ ಸುಮಾರು ೨೨ ಅನುಸೂಚಿತ ಭಾಷೆಗಳನ್ನು ಸಂವಿಧಾನದಲ್ಲಿ ಅಳವಡಿಸಿ ಅವುಗಳ ಮೂಲಕ ಶಿಕ್ಷಣ ಕ್ರಮವನ್ನು ಜಾರಿಗೊಳಿಸಲಾಯಿತು. ಸಂವಿಧಾನದ ೪೫ನೇ ವಿಧಿಯು ಉಚಿತ ಕಡ್ಡಾಯ ಸಾರ್ವತ್ರಿಕ ಶಿಕ್ಷಣ ಪದ್ಧತಿಯನ್ನು ಜಾರಿಗೊಳಿಸಿರುವುದನ್ನು ಕಾಣಬಹುದು. ಎಂಭತ್ತರ ದಶಕದಲ್ಲಿ ವಯಸ್ಕರ ಶಿಕ್ಷಣ ಕ್ರಮಕ್ಕೂ ಆದ್ಯತೆ ನೀಡಲಾಯಿತು.

ಭಾರತದಲ್ಲಿನ ಜಾತಿ ವ್ಯವಸ್ಥೆಯು ಆನೇಕ ಸಮುದಾಗಳನ್ನು ಶೋಷಣೆ ಮಾಡಿ ತಳಮಟ್ಟಕ್ಕೆ ತಳ್ಳಲಾಯಿತು. ಇಂತಹ ಶೋಷಿತ ಸಮುದಾಯಗಳ ಅಭಿವೃದ್ಧಿಯಾಗಬೇಕಾದರೆ ಶಿಕ್ಷಣ ಪ್ರಮುಖ ಅಸ್ತ್ರವಾಗಬೇಕು ಅದರಿಂದಲೇ ಸಮುದಾಯಗಳ ಅಭಿವೃದ್ಧಿ ಸಾಧ್ಯ ಎಂಬುದನ್ನು ಅಂಬೇಡ್ಕರ್‌ರವರು ಶಿಕ್ಷಣ, ಸಂಘಟನೆ, ಹೋರಾಟ ಎಂಬ ವ್ಯಾಖ್ಯಾನ ನೀಡಿ ತಳಸಮುದಾಯದ ಏಳಿಗೆಗೆ ಕಾರಣವಾದರು. ಅಂಬೇಡ್ಕರ್‌ರವರ ತಳಸ್ಪರ್ಷಿಯ ಚಿಂತನೆಯಿಂದ ರೂಪಿತವಾದ ಭಾರತೀಯ ಸಂವಿಧಾನವು ಹಿಂದುಳಿದ, ಅಲ್ಪಸಂಖ್ಯಾತ, ಶೋಷಿತ ವರ್ಗಗಳಿಗೆ ವಿಶೇಷ ಸವಲತ್ತುಗಳನ್ನು ನೀಡಿತು. ಸಂವಿಧಾನ ಬದ್ದ ಹಕ್ಕುಗಳನ್ನು ಪಡೆಯುವ

ಮತ್ತು ಕೇಳುವ ಶಕ್ತಿ ಸಮುದಾಯಗಳಲ್ಲಿ ಬರಬೇಕೆಂದರೆ ಅದು ಶಿಕ್ಷಣದ ಅರಿವಿನ ವಿಸ್ತಾರದಿಂದ ಮಾತ್ರ ಸಾಧ್ಯ. ಆ ಹಿನ್ನೆಲೆಯಲ್ಲಿ ಪ್ರಕೃತಿ ಜ್ಞಾನವನ್ನು ಆಧರಿಸಿ, ಚೌಕಟ್ಟಿನ ಜ್ಞಾನದ ಅರಿವಿನಿಂದ ದೂರವಿದ್ದ ಬುಡಕಟ್ಟುಗಳು ಶೈಕ್ಷಣಿಕವಾಗಿ ಮೇಲ್ಮಟ್ಟಕ್ಕೇಳಲು ಪ್ರಯತ್ನಿಸುತ್ತಿವೆ. ಕೆಲವು ಸಫಲವಾಗಿದ್ದು ಮತ್ತೆ ಕೆಲವು ಸಫಲತೆಯ ಹಾದಿಯಲ್ಲಿವೆ. ಅಲ್ಪಸಂಖ್ಯೆಯ ಅಲೆಮಾರಿತನ ಸಮುದಾಯಗಳು ಇದರಿಂದ ಇನ್ನೂ ಬಹುದೂರ ಉಳಿದಿವೆ ಎಂದು ಹೇಳಬಹುದು. ಅದರಲ್ಲಿ ಕರ್‌ಕರ್ ಮುಂಡ ಸಮುದಾಯವು ಸಹ ಅಭಿವೃದ್ಧಿಗೆ ಮುಖ ಮಾಡುತ್ತಿರುವ ಕಾರಣ ಶಿಕ್ಷಣದಲ್ಲಿ ಪ್ರಗತಿ ಸಾಧಿಸಬೇಕಾಗಿದೆ. ದಿನೇ ದಿನೇ ಶೈಕ್ಷಣಿಕ ಮಹತ್ವ ಅಧಿಕವಾಗುತ್ತಿದ್ದು ಜ್ಞಾನ ಸಂಪಾದನೆಗಾಗಿ ಶಿಕ್ಷಣ, ಇಂದು ಉದ್ಯೋಗಕ್ಕಾಗಿ ಎಂಬಂತೆ ರೂಪಿತವಾಗುತ್ತಿದೆ. ಭಾರತೀಯ ಶೈಕ್ಷಣಿಕ ರಚನೆಯನ್ನು ಪೂರ್ವಪ್ರಾಥಮಿಕ, ಪ್ರಾಥಮಿಕ, ಪ್ರೌಢಶಾಲೆ, ಪದವಿಪೂರ್ವ, ಪದವಿ ಎಂಬ ಹಂತಗಳಲ್ಲಿ ವರ್ಗೀಕರಿಸಲಾಗಿದೆ. ಕೋಷ್ಟಕ ೫.೧೦ ಪ್ರಕಾರವಾಗಿ ಕರ್‌ಕರ್ ಮುಂಡರಲ್ಲಿ ಶೇಕಡಾ ೩೨.೬೭ರಷ್ಟು ಜನರು ಸಾಕ್ಷರತೆ ಹೊಂದಿದ್ದು ಅದರಲ್ಲಿ ಪುರುಷರು ಶೇ. ೧೨.೬೦ರಷ್ಟು ಸಾಕ್ಷರರಾಗಿದ್ದಾರೆ. ಶೇ ೨೦.೦೭ರಷ್ಟು ಮಹಿಳೆಯರು ಅಕ್ಷರಬಲ್ಲವರಾಗಿದ್ದಾರೆ. ಉಳಿದಂತೆ ಶೇ. ೬೭.೩೩ ಜನರು ನಿರಕ್ಷರಿಗಳಾಗಿದ್ದಾರೆ. ಭಾರತ ಮತ್ತು ಕರ್ನಾಟಕ ಸರ್ಕಾರಗಳು ಯಾವೆಲ್ಲಾ ಯೋಜನೆಗಳನ್ನು ರೂಪಿಸಿ ಶೈಕ್ಷಣಿಕ ಮಟ್ಟ ಸುಧಾರಿಸಲು ಪ್ರಯತ್ನಿಸಿದರೂ ಸಮುದಾಯದಲ್ಲಿ ಶೈಕ್ಷಣಿಕ ಪ್ರಗತಿ ಸಾಧ್ಯವಾಗಿಲ್ಲ ಎಂದು ಹೇಳಬಹುದು. ಕಾರಣ ಅಲೆಮಾರಿತನದ ಬದುಕು ಮತ್ತು ಅಂದೇ ದುಡಿದು ಅಂದೇ ತಿನ್ನುವ ಕ್ರಮಗಳು ಶಿಕ್ಷಣ ಅರಿವಿನ ಕೊರತೆಗೆ ಕಾರಣವಾಗಿರಬಹುದಾಗಿದೆ ಮತ್ತು ಸ್ಥಿರಗೊಂಡು ಚೌಕಟ್ಟಿನೊಳಗಿನ ಶಿಕ್ಷಣ ಕ್ರಮ ಇವರಿಗೆ ಅಪೇಕ್ಷಿಣಿಯವಾಗಿಲ್ಲದೆ ಇರುವುದು ಕಾರಣವಾಗಿರಬಹುದು. ಹೊಸತಲೆಮಾರಿನ ಸಮುದಾಯದವರು ಶಿಕ್ಷಣಕ್ಕೆ ಒತ್ತು ನೀಡುತ್ತಿರುವುದರಿಂದ ೧–೮ನೇ ತರಗತಿಯಲ್ಲಿ ಕಲಿಯುವವರ ಸಂಖ್ಯೆ ಶೇಕಡಾ ೩೩, ಪ್ರೌಢಶಾಲ ಶಿಕ್ಷಣ ೭.೩, ಪಿಯುಸಿ ೧.೮, ಡಿಗ್ರಿ ೦.೮ ಶೇಕಡಾ ಪ್ರಮಾಣವನ್ನು ಕಾಣಬಹುದಾಗಿದೆ. ಈ ಎಲ್ಲಾ ಅಂಕಿ–ಅಂಶಗಳಲ್ಲಿ ಮಹಿಳೆಯ ಶೈಕ್ಷಣಿಕ ಪ್ರಗತಿ ಪುರುಷನಿಗಿಂತ ಕಡಿಮೆ ಇದ್ದು, ಮಹಿಳೆಯು ಕುಟುಂಬದ ನಿರ್ವಹಣೆಯಲ್ಲಿ ಪುರುಷನಷ್ಟೇ ಸಮಪಾಲು ನೀಡುತ್ತಿರುವುದು ಮತ್ತು ಮಹಿಳಾ ಶಿಕ್ಷಣದ ಅರಿವು ಇಲ್ಲದಿರುವುದು ಕಾರಣವಾಗಿರಬಹುದಾಗಿದೆ. ಇತ್ತೀಚಿನ ಶಿಕ್ಷಣ ಯೋಜನೆಗಳು ಈ ಸಮುದಾಯದಲ್ಲಿ ಒಳಹೊಕ್ಕಿದ್ದು, ಶಿಕ್ಷಣ ಕುಂಠಿತವಾಗಿ ಬಾಲಕಾರ್ಮಿಕರು ಉಂಟಾಗದಂತೆ ಸರ್ಕಾರವು ಅಪವ್ಯಯ ಮತ್ತು ನಿಲುಗಡೆಗಳನ್ನು ತಡೆಯಲು ಪ್ರಯತ್ನಿಸಿ ಶಿಕ್ಷಣ ಸೌಲಭ್ಯಗಳನ್ನು ನೀಡುತ್ತಿರುವುದು ಕಂಡುಬಂದಿದೆ.

ಕೋಷ್ಟಕ ೫.೧೧

| ಸರ್ಕಾರಿ ಸೌಲಭ್ಯಗಳು | | | | |
|---|---|---|---|---|
| | ಪುರುಷರು | | ಮಹಿಳೆಯರು | |
| | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ |
| ಮತದಾನದ ಚೀಟಿ | ೩೯೫ | | ೩೭೪ | |
| ಶಿಷ್ಯವೇತನ | ೩೪೭ | | ೪೮ | |
| ಆಧಾರ್ ಕಾರ್ಡ್ | ೪೪೫ | | ೪೪೨ | |
| ಜಾಬ್‌ಕಾರ್ಡ್ | ೧೨ | | ೧೫ | |
| ಪಡಿತರ ಚೀಟಿ | ೨೧೫ | | ೫೫ | |

ಭಾರತವು ಪ್ರಜಾಪ್ರಭುತ್ವ ದೇಶವಾಗಿದ್ದು, ಆಡಳಿತದಲ್ಲಿ ವಿಕೇಂದ್ರಿಕರಣ ಪದ್ಧತಿಯನ್ನು ಕಾಣಬಹುದಾಗಿದೆ. ರಾಜ್ಯಗಳ ಒಕ್ಕೂಟ ವ್ಯವಸ್ಥೆಯಾಗಿರುವ ಭಾರತವು ಲಿಖಿತ ಸಂವಿಧಾನದ ಅನ್ವಯ ಆಡಳಿತ ನಡೆಸುತ್ತಿದೆ. ಕೇಂದ್ರ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳೆಂಬ ವಿಭಾಗೀಕರಣದ ಹಿನ್ನೆಲೆಯಲ್ಲಿ ಪ್ರಜಾಪ್ರತಿನಿಧಿಗಳಿಂದ ಮತ್ತು ಸಲಹಾ ವರ್ಗಗಳಿಂದ ಆಡಳಿತಯಂತ್ರ ನಡೆಯುತ್ತಿದೆ. ಈ ವಿಕೇಂದ್ರಿಕರಣದ ಆಡಳಿತವನ್ನು ನಗರ ಮತ್ತು ಗ್ರಾಮೀಣ ಸ್ಥಳೀಯ ಸರ್ಕಾರಗಳ ಮೂಲಕ ತಿಳಿಯುಬಹುದಾಗಿದೆ. ನಗರ ಪ್ರದೇಶದಲ್ಲಿ ಬೃಹತ್ ಮಹಾನಗರಪಾಲಿಕೆ, ಮಹಾನಗರಪಾಲಿಕೆ, ನಗರಸಭೆ, ಪುರಸಭೆ, ಪಟ್ಟಣಪಂಚಾಯ್ತಿ ಎಂತಲೂ, ಗ್ರಾಮೀಣ ಪ್ರದೇಶದಲ್ಲಿ ಜಿಲ್ಲಾ ಪಂಚಾಯ್ತಿ, ತಾಲೂಕು ಪಂಚಾಯ್ತಿ, ಗ್ರಾಮಪಂಚಾಯ್ತಿ ಎಂದು ಅಧಿಕಾರ ವಿಕೇಂದ್ರಿಕರಣಗೊಂಡಿರುವುದನ್ನು ಕಾಣಬಹುದಾಗಿದೆ. ಇದರಂತೆಯೇ ಶಾಸಕರು, ಸಂಸದರು, ಮುಖ್ಯಮಂತ್ರಿ ಮತ್ತು ಪ್ರಧಾನಮಂತ್ರಿಗಳು ಶಾಸಕಾಂಗದ ಭಾಗವಾಗಿ ಆಡಳಿತ ನಡೆಸುವರು ಈ ಎಲ್ಲಾ ಜನಪ್ರತಿನಿಧಿಗಳನ್ನೊಳಗೊಂಡ ಸಂಸತ್ತು ಮತ್ತು ವಿಧಾನಸಭೆಗೂ ವಿಧಾನ ಪರಿಷತ್‌ಗಳು ಜನತೆಯ ಕಲ್ಯಾಣಕ್ಕಾಗಿಯೇ ಕಾರ್ಯ ನಿರ್ವಹಿಸಬೇಕಾಗಿದೆ.

ಜನರ ಕಲ್ಯಾಣಕ್ಕಾಗಿ ಹಲವಾರು ಕ್ಷೇತ್ರಗಳಾಗಿ ವಿಂಗಡಿಸಿಕೊಂಡು "ರಾಜ್ಯಪಟ್ಟಿಯಲ್ಲಿ ೬೧ ಕ್ಷೇತ್ರಗಳು, ಕೇಂದ್ರಪಟ್ಟಿಯಲ್ಲಿ ೧೦೦ ವಿಷಯಗಳು, ಸಮವರ್ತಿ ಪಟ್ಟಿಯಲ್ಲಿ ೫೨ ವಿಷಯಗಳನ್ನು" ಗುರುತಿಸಲಾಗಿದೆ. (ಗಂಗಾಧರ ಪಿ.ಎಸ್:೨೦೧೪:೯೨-೯೩) ಈ ಪಟ್ಟಿಯಲ್ಲಿನ ವಿಷಯಗಳ ಅನ್ವಯ ಪ್ರತ್ಯೇಕ ಸಚಿವಾಲಯ ಇಲಾಖೆ ಆಯೋಗಗಳ ಅಭಿವೃದ್ಧಿ ಯೋಜನೆಗಳನ್ನು ಜಾರಿಗೊಳಿಸಲಾಗುತ್ತದೆ. ಅಧಿಕಾರ ವಿಕೇಂದ್ರಿಕರಣದಿಂದಾಗಿಕಾರ್ಯವಿಳಂಬತೆ ಮತ್ತು ಭ್ರಷ್ಟಾಚಾರಗಳು ಅಂಚಿನ ಜನರನ್ನು ಸೇರದೆ ಇರುವುದು ಪ್ರಜಾಪ್ರಭುತ್ವದ ಬಹುದೊಡ್ಡ ಮಿತಿಯಾಗಿದೆ. ಕಾರಣ ಪ್ರಬಲವರ್ಗಗಳ ಬಹುಸಂಖ್ಯೆಯ ಮತ ಬ್ಯಾಂಕ್‌ಗಳು ಇದಕ್ಕೆ ತಡೆಯೊಡ್ಡುತ್ತಿವೆ ಮತ್ತು ಕ್ಷೇತ್ರಾಧಾರಿತ ಯೋಜನೆಗಳು ಇಲ್ಲದೇ ಇರುವುದು ಮತ್ತೊಂದು ಅಂಶವಾಗಿದೆ ಎಂದರೂ ತಪ್ಪಿಲ್ಲ.

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಕೆಲವೊಂದು ಅರ್ಹತೆಗಳನ್ನು ಆಧರಿಸಿ ಸೌಲಭ್ಯದ ಕಾರ್ಡುಗಳನ್ನು ನೀಡುತ್ತಿದ್ದು,ಆ ಕಾರ್ಡ್‌ಗಳನ್ನು ಪಡೆದವರು ಮಾತ್ರ ಆಯೋಜನೆಯ ಸೌಲಭ್ಯ ಪಡೆಯಬಹುದಾಗಿದೆ. ಭಾರತವು ಏಕ ಪೌರತ್ವವನ್ನು ಹೊಂದಿದ್ದು ಆ ಪೌರತ್ವ ಮಂಜೂರಾಗಲು ಮತದಾರ ಚೀಟಿಗಳನ್ನು ನೀಡುತ್ತದೆ. ಅದು ಭಾರತೀಯನಾಗಿರುವ ಎಲ್ಲರಿಗೂ ಇರುವಂತಹದ್ದು ಮತದಾನದ ಜೊತೆಗೆ ಇತರೆ ಆರ್ಥಿಕ ರಾಜಕೀಯ, ಶೈಕ್ಷಣಿಕ ಸೌಲಭ್ಯ ಪಡೆಯಲು ಅನಿವಾರ್ಯ ವಾಗಿರುವಂತಹದ್ದು ಇಂತಹ ಮತದಾನದ ಚೀಟಿಯನ್ನು ಶೇಕಡಾ ೪೯.೦೧ ರಷ್ಟು ಕರ್‌ಕರ್ ಮುಂಡ ಸಮುದಾಯದ ಜನರು ಪಡೆದರಿವರು. ಇದಕ್ಕೆ ಪೂರಕವಾಗಿ ಆಧಾರ್‌ಕಾರ್ಡ್‌ನನ್ನು ಕೇಂದ್ರ ಸರ್ಕಾರ ನೀಡುತ್ತಿದ್ದು ನಕಲಿ ಮತದಾರರ ಚೀಟಿಯ ಹಾವಳಿ ತಡೆಯಲು ವ್ಯಕ್ತಿಯ ಹೆಬ್ಬೆರಳು, ಕಣ್ಣು ಭಾವಚಿತ್ರಗಳನ್ನೊಳಗೊಂಡ ಚೀಟಿಯನ್ನು ಜನತೆ ನೀಡುತ್ತಿದೆ. ಇಂದಿನ ದಿನಮಾನದಲ್ಲಿ ಇದು ಅನಿವಾರ್ಯ ಗುರುತಿನ ಚೀಟಿಯಾಗಿದೆ. ಶೇಕಡಾ ೫೬.೫೩ ಜನರು ಈ ಕಾರ್ಡನ್ನು ಹೊಂದಿರುವರು. ಇದರಂತೆಯೇ ಮಹಾತ್ಮಗಾಂಧಿ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯ ಮೂಲಕ ಕೇಂದ್ರ ಸರ್ಕಾರವು ದುಡಿಯುವ ವರ್ಗಗಳಿಗೆ ವರ್ಷದಲ್ಲಿ ಇಂತಿಷ್ಟು ದಿನವೆಂದು ಕೆಲಸ ನೀಡುವುದರ ಮೂಲಕ ಗ್ರಾಮೀಣ ಪ್ರದೇಶದ ಜನರ ಬದುಕಿನಲ್ಲಿ ನೆರವಾಗುತ್ತಿದೆ. ಈ ಯೋಜನೆಯ ಸೌಲಭ್ಯ ಪಡೆಯಲು ಜಾಬ್‌ಕಾರ್ಡ್ ಎಂಬ ಪತ್ರವನ್ನು ನೀಡುವುದು. ಈ ಕಾರ್ಡ್ ಉಳ್ಳವರು ತಮ್ಮ ಬಿಡುವಿನ ದಿನಗಳಲ್ಲಿ

ಕೆಲಸ ಮಾಡಿ ಯೋಗ್ಯ ಕೂಲಿ ಪಡೆಯಬಹುದು. ಇಂತಹ ಕಾರ್ಡ್‌ನ್ನು ಕರ್‌ಕರ್ ಮುಂಡರಲ್ಲಿ ಶೇಕಡಾ ೧.೭೨ ಜನರು ಪಡೆದುಕೊಂಡಿದ್ದಾರೆ. ಇವರು ಕಿತ್ತೂರಿನ ಮಲ್ಲಾಪುರ, ಹಳ್ಯಾಲದಲ್ಲಿ ಕಂಡುಬರುವರು. ಕರ್ನಾಟಕ ಸರ್ಕಾರ ನ್ಯಾಯಬೆಲೆ ಅಂಗಡಿಗಳ ಮೂಲಕ ಆಹಾರದ ಕೊರತೆಯನ್ನು ನೀಗಿಸಲು ಬಡವರಿಗೆ ಪಡಿತರ ಚೀಟಿಯನ್ನು ನೀಡಿ ಕಡಿಮೆ ಬೆಲೆಗೆ ಆಹಾರ ಧಾನ್ಯಗಳನ್ನು ಒದಗಿಸುತ್ತಿದೆ. ಜನತೆಯ ಆರ್ಥಿಕತೆಗೆ ಅನುಗುಣವಾಗಿ ಎ.ಪಿ.ಎಲ್., ಬಿ.ಪಿ.ಎಲ್, ಅಂತ್ಯೋದಯ ಕಾರ್ಡುಗಳ ನೀಡುತ್ತಿದೆ. ಆ ಮೂಲಕ ಖಾಸಗಿ ವ್ಯಾಪಾರಿಗಳ ಮತ್ತು ದಲ್ಲಾಳಿಗಳ ದುಬಾರಿ ಬೆಲೆಯ ಆಹಾರ ಧಾನ್ಯಗಳ ಸರಬರಾಜನ್ನು ನಿಯಂತ್ರಿಸಿ ಕಡಿಮೆ ದರದಲ್ಲಿ ಬಡವರಿಗೆ ಆಹಾರಧಾನ್ಯ ಒದಗಿಸುವುದು ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ. ಪ್ರಸ್ತುತದಲ್ಲಿ ಅನ್ನಭಾಗ್ಯ ಯೋಜನೆಯು ೧ ರೂಪಾಯಿಗೆ ಒಂದು ಕೆ.ಜಿ. ಅಕ್ಕಿ ನೀಡುತ್ತಾ ಜನರ ಹಸಿವನ್ನು ನಿವಾರಿಸುವ ಕಾರ್ಯಮಾಡಿದೆ. ಈ ಯೋಜನೆಗೆ ಪೂರಕವಾದ ಪಡಿತರ ಚೀಟಿ ಹೊಂದಿರುವವರು ಸಂಖ್ಯೆ ಶೇಕಡಾ ೧೭.೨೦ ರಷ್ಟು ಜನರು ಈ ಸಮುದಾಯದಲ್ಲಿ ಕಂಡುಬರುತ್ತಾರೆ. ಪಡಿತರ ಚೀಟಿ ವಿತರಣೆಯ ಸಮಸ್ಯೆಯು ಅಧಿಕ ಪ್ರಮಾಣದಲ್ಲಿ ಕಂಡುಬಂದಿದ್ದು ಇವರನ್ನು ಗುರುತಿಸಿ ಸೌಲಭ್ಯ ಕಲ್ಪಿಸುವ ಜನಪ್ರತಿನಿಧಿಗಳ ಮತ್ತು ಅಧಿಕಾರಿಗಳ ಕೊರತೆ, ಜೊತೆಗೆ ಸೌಲಭ್ಯಗಳ ಅರಿವು ಇವರಲ್ಲಿ ಇಲ್ಲದೆ ಇರುವುದು ಕಾರಣವಾಗಿರಬಹುದು.

ಮತದಾರರ ಚೀಟಿಯು ೧೮ ವರ್ಷ ವಯಸ್ಸಿನವರಿಗೆ ನೀಡುವ ಗುರುತಿನ ಪತ್ರವಾಗಿದ್ದು, ವ್ಯಕ್ತಿಗತವಾಗಿದೆ. ಅದೇ ತರಹದ ಆಧಾರ್ ವೈಯಕ್ತಿಕ ಗುರುತಿನ ಚೀಟಿ ಆಗಿದ್ದರೂ ವಯೋಮಾನದ ಪರಿಮಿತಿಗೆ ಒಳಪಟ್ಟಿಲ್ಲ. ಇವೆಲ್ಲವುಗಳ ಜೊತೆಗೆ ಇತ್ತೀಚೆಗೆ ಶಿಕ್ಷಣದ ಕಡೆ ಮುಖಮಾಡಿರುವ ಈ ಸಮುದಾಯವು ಪಡೆಯುತ್ತಿರುವ ಶೈಕ್ಷಣಿಕ ಸೌಲಭ್ಯಗಳನ್ನು ತಿಳಿದಾಗ ಶೇಕಡಾ ೫.೪೧ ಇದೆ. ಇದಕ್ಕೆ ಮುಖ್ಯ ಕಾರಣ ಖಜಜಟಣುಣಥಿ ಸಮಸ್ಯೆ ಮತ್ತು ಶಾಲೆಗೆ ಹೋಗಿ ಅರ್ಧಕ್ಕೆ ಶಿಕ್ಷಣ ನಿಲ್ಲಿಸಿರುವ ಪ್ರಮಾಣ ಅಧಿಕವಾಗಿರುವುದು ಕಂಡುಬರುತ್ತದೆ.

ಮಧುಗಿರಿ ಸೇರಿದಂತೆ ಇತರೆ ಪ್ರದೇಶಗಳಲ್ಲಿ ಕರ್‌ಕರ್ ಮುಂಡ ಸಮುದಾಯದವರಿಗೆ ವಸತಿ ನೆಲೆಗಳಿಲ್ಲ ಆದರೂ ಮತದಾನದ ಚೀಟಿ, ಆಧಾರ್ ಕಾರ್ಡ್‌ಗಳಿದ್ದು, ಓಟ್ ಬ್ಯಾಂಕ್ ರಾಜಕಾರಣಕ್ಕೆ ಒಳಗಾಗಿ ಸಮಸ್ಯೆಗಳಿಂದ ಬದುಕುತ್ತಿರುವುದು ಕಂಡುಬಂದಿದೆ.

ಕೋಷ್ಟಕ ೫.೧೨.

| ಮನೆಯಲ್ಲಿನ ಮೂಲಭೂತ ಸೌಲಭ್ಯಗಳು | | |
|---|---|---|
| **ಸೌಲಭ್ಯಗಳು** | **ಕುಟುಂಬಗಳ ಸಂಖ್ಯೆ** | **ಶೇಕಡಾ** |
| ವಿದ್ಯುತ್ ಸೌಲಭ್ಯ | ೨೧೧ | ೬೫.೭೩ |
| ಭಾಗ್ಯಜ್ಯೋತಿ | ೪೯ | ೧೫.೨೬ |
| ಗ್ಯಾಸ್ | ೩೬ | ೧೧.೨೧ |
| ನಲ್ಲಿ | ೩೧ | ೯.೬೫ |
| ಶೌಚಾಲಯ | ೩೦ | ೯.೩೪ |
| ಸ್ನಾನಗೃಹ | ೩೨ | ೯.೯೬ |
| ಸೈಕಲ್/ಮೋಟಾರ್‌ಬೈಕು | ೧೫೭ | ೪೮.೯೦ |
| ರೇಡಿಯೋ | ೭ | ೨.೧೮ |
| ಟೇಪ್‌ರೆಕಾರ್ಡ್‌ರ್ | ೮ | ೨.೪೯ |
| ಟಿ.ವಿ. | ೧೭೨ | ೫೩.೫೮ |
| ಮೋಬೈಲ್ | ೨೧೪ | ೬೬.೬೬ |
| | ೩೨೧ | |

ಕರ್‌ಕರ್ ಮುಂಡರು ಗುಡಾರ, ಗುಡಿಸಲು, ಟಿನ್, ಆರ್‌ಸಿಸಿ, ಆಶ್ರಯ ಮತ್ತು ಬಾಡಿಗೆ ಮನೆಗಳಲ್ಲಿ ಆಶ್ರಯ ಕಂಡುಕೊಂಡಿರುವುದು ಕಂಡು ಬರುತ್ತದೆ. ಈ ರೀತಿಯಾಗಿ ಆಶ್ರಯ ಪಡೆದಿರುವ ವಸತಿಗಳಲ್ಲಿ ಇರಬಹುದಾದ ' ಮೂಲಭೂತ ಸೌಲಭ್ಯಗಳನ್ನು ತಿಳಿಯುವುದು ಪ್ರಮುಖವಾಗಿದೆ. ಆಧುನಿಕ ಮಾನವನ ಯಂತ್ರ ಮತ್ತು ತಂತ್ರ ಶಕ್ತಿಯಿಂದ ಸುಖಜೀವನ ಮತ್ತು ಯಾಂತ್ರಿಕ ಬದುಕಿಗೆ ಒಳಗಾಗಿರುವ

ಸಂದರ್ಭದಲ್ಲಿ, ನೆಲೆಗೊಂಡಿರುವ ಅಲೆಮಾರಿ ಸಮುದಾಯಗಳು ಹೇಗೆ ಆಧುನೀಕರಣದ ಕಡೆ ಮುಖಮಾಡಿವೆ ಎಂಬುದನ್ನು ತಿಳಿಯಲು ಮನೆಯಲ್ಲಿನ ಸೌಲಭ್ಯಗಳ ನೆರವಾಗುತ್ತವೆ ಎಂದು ಹೇಳಬಹುದು. ಒಟ್ಟು ೩೨೧ ಕುಟುಂಬಗಳಲ್ಲಿ ವಿದ್ಯುತ್ ಸೌಲಭ್ಯ ಪಡೆದಿರುವ ಕುಟುಂಬಗಳ ಶೇಕಡಾ ಪ್ರಮಾಣ ೮೦.೯ ಇದೆ. ಇದರಲ್ಲಿ ೧೫.೨೬ ಜನರು ಭಾಗ್ಯಜ್ಯೋತಿ ವಿದ್ಯುತ್ ಸೌಲಭ್ಯ ಪಡೆದವರಾಗಿದ್ದಾರೆ. ನಗರದ ಅಂಚಿನ ಬದುಕಿನಲ್ಲಿರುವ ಇವರಲ್ಲಿ ಶೇಕಡಾ ೧೧.೨೧ ಕುಟುಂಬಗಳು ಗ್ಯಾಸ್‌ನ್ನು ಉರುವಲಾಗಿ ಬಳಸಿದರೆ, ಉಳಿದವರು ಕಟ್ಟಿಗೆಯನ್ನು ಉರುವಲಾಗಿ ಬಳಸುವುದು ಕಂಡುಬರುತ್ತದೆ. ಕೊಪ್ಪಳ, ದಾವಣಗೆರೆಯಂತಹ ಆರ್ಥಿಕವಾಗಿ ಸದೃಡರಾಗಿರುವ ಈ ಸಮುದಾಯದ ಶೇಕಡಾ ೯.೬೫ ಜನರು ಖಾಸಗಿ ನಲ್ಲಿಗಳನ್ನು ಹಾಕಿಸಿಕೊಂಡಿರುವುದನ್ನು ಕಾಣಬಹುದಾಗಿದೆ. ಇದರ ಜೊತೆಗೆ ಆರ್‌ಸಿಸಿ ಮನೆಯಲ್ಲಿ ವಾಸಿಸುತ್ತಿರುವವರು ಶೇಕಡಾ ೯.೩೪ ಕುಟುಂಬಗಳು ಶೌಚಾಲಯ ವ್ಯವಸ್ಥೆ ಹೊಂದಿರುವುದನ್ನು ತಿಳಿಯಬಹುದಾಗಿದೆ. ಶೌಚಾಲಯ, ಗ್ಯಾಸ್, ನಲ್ಲಿಯ ಜೊತೆಗೆ ಪ್ರತ್ಯೇಕ ಸ್ನಾನಗೃಹಗಳನ್ನು ನಿರ್ಮಿಸಿಕೊಂಡು ಐಶಾರಾಮಿ ಬದುಕು ಸಾಗಿಸಿದರೆ ಉಳಿದ ಗ್ರಾಮೀಣ ಪ್ರದೇಶದಲ್ಲಿರುವ ಹೆಚ್ಚಿನ ಜನರು ಗುಡಾರ, ಗುಡಿಸಲು, ವಾಸಿಗಳು ನೆರಕೆ, ಸೀರೆಯಿಂದ ನಿರ್ಮಿಸಿದ ಸ್ನಾನಗೃಹಗಳನ್ನು ಹೊಂದಿರುವರು.

ಕರ್‌ಕರ್ ಮುಡಂರು ಊರೂರು ಅಲೆದು ಸ್ಟೇಷನರಿ (ಕೂದಲು) ವ್ಯಾಪಾರ ಮಾಡುವುದರಿಂದ ಸಹಜವಾಗಿಯೇ ಸೈಕಲ್/ಸೈಕಲ್ ಮೋಟರ್‌ಗಳನ್ನು ಶೇಕಡಾ ೪೮.೯೦ ಕುಟುಂಬಗಳ ಜನರು ಈ ಸೌಲಭ್ಯವನ್ನು ಹೊಂದಿರುವರು. ಬಿಡುವಿನ ವೇಳೆಯ ಮನರಂಜನೆಗಾಗಿ ರೇಡಿಯೋ ೨.೧೮, ಟೇಪ್‌ರೇಕಾರ್ಡ್ ೨.೪೯, ಟಿವಿಯನ್ನು ೫೩.೫೮ ಕುಟುಂಬಗಳು ಹೊಂದುವ ಮೂಲಕ ಆಧುನಿಕತೆಯ ಕಡೆಗೆ ಮುಖಮಾಡಿರುವುದು ಕಂಡು ಬರುತ್ತದೆ. ಜಾಗತೀಕರಣದ ಸಂದರ್ಭದಲ್ಲಿ ಮೋಬೈಲ್‌ಜ್ಞಾನ ಇಲ್ಲದವರು ಅನಕ್ಷರಸ್ಥರು ಎಂಬಂತಾಗಿದೆ. ಈ ಸಮುದಾಯದಲ್ಲಿ ಮೋಬೈಲ್ ಬಳಕೆಯು ಅಧಿಕವಾಗಿದ್ದು, ೬೬.೬೬ ಜನರು ಮೊಬೈಲ್ ಬಳಕೆದಾರರಾಗಿದ್ದಾರೆ. ಒಟ್ಟಾರೆ ಜಾಗತೀಕರಣದ ಪ್ರಭಾವದಿಂದ ಮೇಲ್ಕಂಡ ಎಲ್ಲಾ ವಸ್ತುಗಳು ಅವರವರ ಆರ್ಥಿಕ ಸಧೃಡತೆಯ ಮೇಲೆ ಅಲ್ಲದೆ ಸಾಲಮಾಡಿಯಾದರೂ ಪಡೆಯುವ ಗೀಳಿಗೆ ಬಲಿಯಾಗಿದ್ದಾರೆ.

ಕೋಷ್ಟಕ ೫.೧.೨.

ದೈವರಾಧನೆಯ ಸಂಖ್ಯಾವಾರು ವಿವರ

| ದೇವರ ಹೆಸರು | ಕುಟುಂಬಗಳ ಸಂಖ್ಯೆ | ಶೇಕಡಾ |
|---|---|---|
| ಮನೆದೇವರು ತಿಳಿಯದವರು ಸ್ಥಳೀಯ ದೇವರ ಆರಾಧಕರು | ೧೩೫ | ೪೨.೦೫ |
| ಆಂಜನೇಯ | ೩ | ೦.೯೩ |
| ಯಲ್ಲಮ್ಮ | ೨೩ | ೭.೧೬ |
| ಚಂದ್ರಗುತ್ತ್ಯಮ್ಮ | ೨ | ೦.೬೨ |
| ದುರ್ಗಾದೇವಿ/ದುರ್ಗಮ್ಮ ಗುತ್ತ್ಯಮ್ಮ | ೬೦ | ೧೮.೬೯ |
| | ೮ | ೨.೪೯ |
| ಹುಲಿಗೆಮ್ಮ | ೨ | ೦.೬೨ |
| ಜಲಜಮ್ಮ | ೬ | ೧.೮೬ |
| ತಿಮ್ಮಪ್ಪ | ೯ | ೨.೮೦ |
| ಕೊಲ್ಲಾಪುರದ ಮಹಾಲಕ್ಷ್ಮಿ | ೬ | ೧.೮೬ |
| ಮಾರಮ್ಮ | ೩ | ೦.೯೩ |
| ಮಸುಬ | ೨೭ | ೮.೪೧ |
| ಮುನಿಶ್ವರ | ೧ | ೦.೩೧ |
| ನರಸಿಂಹಸ್ವಾಮಿ | ೬ | ೧.೮೬ |
| ಗೌರಮ್ಮ | ೧ | ೦.೩೧ |
| ಶ್ರೀಶೈಲ ಮಲ್ಲಿಕಾರ್ಜುನ | ೧ | ೦.೩೧ |
| ಸುಂಕ್ಲಮ್ಮ | ೧೬ | ೪.೯೮ |
| ಉರವಕೊಂಡ ಈರಣ್ಣ | ೧೧ | ೩.೪೨ |
| ಯಾಸಯ್ಯ | ೧ | ೦.೩೧ |
| ಒಟ್ಟು | ೩೨೧ | ೧೦೦ |

ಕರ್ನಾಟಕದ ಬಯಲು ಸೀಮೆಯಲ್ಲಿ ಅಧಿಕವಾಗಿ ನೆಲೆನಿಂತಿರುವ ಕರ್‌ಕರ್‌ಮುಂಡ ಸಮುದಾಯವು ಗಡಿ ಅಂಚಿನ ಜಿಲ್ಲೆಗಳಾದ ಬೆಳಗಾವಿ, ತುಮಕೂರು, ರಾಯಚೂರು, ಯಾದಗಿರಿ ಜಿಲ್ಲೆಯ ಜನರು ಮಹಾರಾಷ್ಟ್ರ ಮತ್ತು ಅವಿಭಾಜಿತ ಆಂಧ್ರಪ್ರದೇಶದ ದೇವರುಗಳ ಆರಾಧನೆಯನ್ನು ಕಾಣಬಹುದು. ಅಲೆಮಾರಿಯಾಗಿದ್ದ ಇವರು ಆಯಾ ಪ್ರದೇಶದ ಸ್ಥಳೀಯ ದೇವರುಗಳ ಆರಾಧನೆಯನ್ನು ಮುಂದುವರೆಸಿಕೊಂಡು ಬಂದಿರುವುದು ಕಂಡು ಬರುತ್ತದೆ. ಮೂಲ ದೇವರುಗಳ ಹೆಸರಿನಲ್ಲಿಯೇ ತಾವಿದ್ದ ಸ್ಥಳದಲ್ಲಿಯೇ ದೇವರುಗಳನ್ನು ಸೃಷ್ಟಿಸಿಕೊಂಡು ಆರಾಧಿಸಿದವರಾಗಿದ್ದಾರೆ. ಅಲೆಮಾರಿತನದಲ್ಲಿ ತಮಗೆ ಎದುರಾದ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಸ್ಥಳೀಯ ದೈವಗಳ ಮೊರೆಹೋಗುತ್ತಾ ಸಮಸ್ಯೆಗಳಿಗೆ ಪರಿಹಾರ ದೊರೆತಾಗ ಹರಕೆಯ ರೂಪದಲ್ಲಿ ಆ ದೇವರುಗಳನ್ನು ಪರಂಪರಾಗತವಾಗಿ ನಂಬಿ ಬಾಳುತ್ತಿದ್ದ ಸಂದರ್ಭಗಳಿರುವುದನ್ನು ಕಾಣಬಹುದಾಗಿದೆ. ಕರ್‌ಕರ್ ಮುಂಡರು ಮಾಂಸಹಾರಿಗಳಾಗಿದ್ದು ದೇವರುಗಳಿಗೆ ಪ್ರಾಣಿಪಕ್ಷಿಗಳನ್ನು ಬಲಿಕೊಡುವ ಮೂಲಕ ಹರಕೆ ತಿರಿಸುತ್ತಿರುವರು. ಬಲಿ ಆಚರಣೆಯು ಹೆಚ್ಚಾಗಿ ಶಕ್ತಿದೇವತೆಗಳಿಗೆ ನೆರವೇರುವುದು ಸಾಮಾನ್ಯವಾಗಿ ಕರ್ ಕರ್ ಮುಂಡರು ಇಂದಿಗೂ ಶಕ್ತಿ ದೇವತೆಗಳನ್ನು ಆರಾಧನೆ ಮತ್ತು ಮನೆ ದೇವರುಗಳಾಗಿ ಸ್ವೀಕರಿಸಿಕೊಂಡಿರುವರು. ಉತ್ತರ ಕರ್ನಾಟಕದಲ್ಲಿ ದುರ್ಗಮ್ಮನನ್ನು ಆಧಿದೇವತೆಯಾಗಿ ಹೆಚ್ಚು ಜನರು ಸ್ವೀಕರಿಸಿರುವರು. ಮ್ಯಾಕ್ಲೋಳ್, ಎನುಮಲೋಳ್, ಕತ್ತಿಂಟಲೋಳ್ ಬೆಡಗಿನವರು ಗೂಗಲಮಾರಿ, ಮುತ್ಯಲಮಾರಿ ದುರ್ಗಮ್ಮನ್ನು ಆಧಿದೇವತೆಯಾಗಿ ಪೂಜಿಸುತ್ತಿರುವರು. ದುರ್ಗಮ್ಮನ ಆರಾಧನೆಯನ್ನು ಶೇಕಡಾ ೧೮.೬೯ ಜನರು ಸ್ವೀಕರಿಸಿರುವರು. ಹೀಗೆ ದುರ್ಗಮ್ಮದೇವಿಯು ಇಳಕಲ್, ಬಾಗಲಕೋಟೆ, ಮುಧೋಳ್, ಸುರಪುರ, ಮುದ್ದೇಬಿಹಾಳ್, ಬಾಬಾನಗರದ ಕೆಲವು ಕುಟುಂಬಗಳ ದೇವತೆಯಾಗಿದ್ದಾಳೆ. ಬೆಳಗಾವಿಯ ಪ್ರಸಿದ್ಧ ಶಕ್ತಿದೇವತೆಯಾಗಿರುವ ಎಲ್ಲಮ್ಮಳನ್ನು ೭.೧೬ ಜನರು ಆರಾಧಿಸುತ್ತಿರುವರು. ಇದರ ಜೊತೆಗೆ ಚಂದ್ರಗುತ್ತಿಯ ಚಂದ್ರಗುತ್ಯಮ್ಮಳನ್ನು ೩.೧೧ ಜನರು ಆಧಿದೇವತೆಯಾಗಿ ಸ್ವೀಕರಿಸಿ ಆರಾಧಿಸುತ್ತಿರುವರು. ಕೊಪ್ಪಳದ ೨ ಕುಟುಂಬಗಳು ಹುಲಿಗೆಮ್ಮ ದೇವಿಯನ್ನು ಆರಾಧಿಸುತ್ತಿರುವರು. ಹಳ್ಯಾಳ, ಜಮುಖಂಡಿಯ ಶೇಕಡಾ ೧.೮೬ ಜನರು ಕೊಲ್ಲಾಪುರದ ಮಹಾಲಕ್ಷ್ಮೀಯನ್ನು ಆರಾಧಿಸುತ್ತಿದ್ದಾರೆ. ಜೊತೆಯಲ್ಲಿ ಮಧುಗಿರಿಯಲ್ಲಿ ೯ ಕುಟುಂಬಗಳು ತಿಮ್ಮಪ್ಪನನ್ನು, ನಾಯಕ ಹಟ್ಟಿಯಲ್ಲಿನ ೩

ಕುಟುಂಬಗಳು ಮಾರಮ್ಮನನ್ನು ಆರಾಧಿಸುವುದನ್ನು ಕಾಣಬಹುದಾಗಿದೆ. ಇದರ ಜೊತೆಗೆ ಆರಾಧನೆಗೊಳ್ಳುತ್ತಿರುವ ಸ್ತ್ರೀ ದೇವತೆಗಳೆಂದರೆ ಗೌರಮ್ಮ ಮತ್ತು ಸುಂಕ್ಲಮ್ಮ ಈ ದೇವರನ್ನು ದಾವಣಗೆರೆ, ಕೊಪ್ಪಳದ ೫.೨೯ ಜನರು ಆರಾಧಿಸುತ್ತಿದ್ದಾರೆ. ಈ ಎಲ್ಲಾ ಸ್ತ್ರೀ ದೈವಗಳ ಜೊತೆಗೆ ಆಂಜನೇಯ, ನರಸಿಂಹಸ್ವಾಮಿ, ಉರವಕೊಂಡ ಈರಣ್ಣ, ಯಾಸಯ್ಯ, ಶ್ರೀಶೈಲ ಮಲ್ಲಿಕಾರ್ಜುನ, ಮುನಿಶ್ವರ ದೇವರುಗಳನ್ನು ಶೇಖಡಾ ೭.೧೪ ರಷ್ಟು ಜನರು ಪೂಜಿಸುತ್ತಿರುವುದು ತಿಳಿಯುತ್ತದೆ. ಈ ಎಲ್ಲಾ ದೇವರುಗಳಿಗೆ ಭಿನ್ನವಾಗಿ ಸಂಕೇಶ್ವರ ಸಮೀಪದ ಇಡಚಣಗಿ ಮಸುಬ ದೇವರು ಬೈಲಹೊಂಗಲ, ಕಿತ್ತೂರು, ಮಲ್ಲಾಪುರದ ಜನರು ಆರಾಧಿಸುವುದು ಕಂಡುಬರುತ್ತದೆ. ಮಸುಬ ಪುರುಷ ದೈವವಾಗಿದ್ದು ಹಂದಿ ಬಲಿಯನ್ನು ಶುಕ್ರವಾರ, ಮಂಗಳವಾರ ಸ್ತ್ರೀದೇವತೆಗಳ ದಿನವೇ ಪಡೆಯುತ್ತಿರುವುದು ತಿಳಿಯುತ್ತದೆ. ಈ ದೇವರನ್ನು ೮.೪೧ ಜನರು ಆರಾಧಿಸುತ್ತಿದ್ದಾರೆ. (ವಿವರಣೆಗೆ ಹಬ್ಬಗಳು ಅಧ್ಯಾಯ ೩ರಲ್ಲಿ ನೋಡಿ) ಮಹಾರಾಷ್ಟ್ರ ಸಮೀಪದ ಜನತೆ ಅಲ್ಲಿನ ದೇವತೆಗಳ ಪ್ರಭಾವಕ್ಕೂ, ಆಂಧ್ರದ ಅಂಚಿನ ಜನರು ಉರವಕೊಂಡ ಈರಣ್ಣ, ತಿರುಪತಿ ತಿಮ್ಮಪ್ಪ, ಶ್ರೀಶೈಲಮಲ್ಲಿಕಾಜುನ, ನರಸಿಂಹಸ್ವಾಮಿಯ ಆರಾಧನೆ ಮಾಡುತ್ತಿರುವರು. ಕೋಷ್ಟಕ ೫.೧೨ರ ಅನ್ವಯ ಶೇಕಡಾ ೪೨.೦೫ರಷ್ಟು ಜನರು ನಿರ್ಧಿಷ್ಟ ಅಧಿದೈವಗಳನ್ನು ಹೊಂದಿರದೇ ಸ್ಥಳೀಯ ದೇವರುಗಳನ್ನೇ ಆರಾಧಿಸುತ್ತಿರುವರು. ಉದಾಹರಣೆಗೆ ಅರಕೇರೆ ಅಮೋಘಸಿದ್ಧ, ನಾಯಕನಹಟ್ಟಿ ತಿಪ್ಪೇಸ್ವಾಮಿ ದೇವರುಗಳನ್ನು ಕಾಣಬಹುದಾಗಿದೆ. ಮೂಲತಹ ಅಲೆಮಾರಿಗಳಾಗಿದ್ದ ಇವರ ಬದುಕು ಸ್ಥಿತ್ಯಂತರಗೊಂಡಂತೆ ದೇವರುಗಳ ಆರಾಧನೆಯು ಸ್ಥಿತ್ಯಂತರಗೊಂಡಿದೆ. ಸ್ಥಳೀಯ ಜಾತ್ರೆಗಳಲ್ಲಿ ಭಿಕ್ಷೆ ಬೇಡುವಾಗ ದಿಕ್ಕುಗಳನ್ನು ಹಂಚಿಕೊಂಡು ಭಿಕ್ಷೆ ಬೇಡುವಾಗ ಆರೋಗ್ಯದಲ್ಲಿ ಏರುಪೇರಾದರೆ ಆ ದೇವರನ್ನೇ ಹರಸಿಕೊಂಡು ಹರಕೆಮಾಡಿಕೊಳ್ಳುತ್ತಿದ್ದರು. ಆ ದೇವರಿಂದ ಗುಣಮುಖ ಅಥವಾ ಒಳ್ಳೆಯದಾದರೆ ಆ ದೇವರನ್ನೇ ಪೂಜಿಸುತ್ತಾ ಮುಂದುವರೆಸಿಕೊಂಡು ಬಂದಿರುವರು ಎಂದು ಮಾಹಿತಿದಾರರು ಅಭಿಪ್ರಾಯ ಪಡುವರು. ಕರ್‌ಕರ್‌ಮುಂಡರು ಮಾತೃದೇವತೆಗಳ ಆರಾಧನೆಯ ಜೊತೆಗೆ ಶೈವೀಕರಣ ಮತ್ತು ವೈಷ್ಣವೀಕರಣಗೊಂಡಿರುವುದು ಇವರು ಆರಾಧಿಸುವ ದೇವರುಗಳಿಂದತಿಳಿಯಲು ಈ ಕೋಷ್ಟಕ ನೆರವಾಗಿಗುವುದು.

ಕೋಷ್ಟಕ ೫.೧೩

ಬೆಡಗುವಾರು ಕುಟುಂಬಗಳ ಪ್ರಮಾಣ

| ಬೆಡಗುಗಳು | ಕುಟುಂಬ ಸಂಖ್ಯೆ | ಶೇಕಡಾ |
|---|---|---|
| ಮ್ಯಾಕ್ಲೋಳ್ | ೮ | ೨.೪೯ |
| ಎನುಮಲೋಳ್ | ೩೧ | ೧೯.೦೦ |
| ಮಂಡ್ಲರು | ೪೦ | ೧೨.೪೬ |
| ಗೋಸೋಳ್ | ೨ | ೦.೬೨ |
| ಯರಗೊಂಡ್ಲೋಳ್ | ೧೨ | ೩.೭೩ |
| ಯನಗೊಂಡ್ಲೋಳ್ | ೧೮ | ೫.೬೦ |
| ಗುಜ್ಜಲರು (ಗುಜ್ಜಿಲೋಳ್) | ೩೧ | ೯.೬೫ |
| ಚಿನ್ನಗುಂಜಿಲೋಳ್ | ೨೭ | ೮.೪೧ |
| ಶೆಟ್ಟಿಯೋಳ್ | ೧೪ | ೪.೩೬ |
| ಚಿನ್ನ ಶೆಟ್ಟಿಯೋಳ್ | ೨ | ೦.೬೨ |
| ಪೆದ್ದ ಶೆಟ್ಟಿಯೋಳ್ | ೨೧ | ೬.೫೪ |
| ಕತ್ತಿಂಟ್ಲೋಳ್(ಕಟ್ಟಿಮನೆಯವರು) | ೪ | ೧.೨೪ |
| ಪಿಕಲೋಳ್ | ೩೫ | ೧೦.೯೦ |
| ಬೊಜ್ಜೋಳ್ | ೩೫ | ೧೦.೯೦ |
| ಪೋಗರ್ತೋಳ್ | ೩ | ೦.೯೩ |
| ಪಿನ್ನಾರು | ೩ | ೦.೯೩ |
| ಪಾನಿಗಿಟ್ಟರ್ | ೨ | ೦.೬೨ |
| ಚಿಮ್ಮ | ೧ | ೦.೩೧ |
| ಬೂಸಿ | ೨ | ೦.೬೨ |
| ಒಟ್ಟು | ೩೨೧ | ೧೦೦ |

ಕೋಷ್ಟಕ ೫.೧೩ ಬೆಡಗುವಾರು ಜನಸಂಖ್ಯೆಯನ್ನು ತಿಳಿಯಲು ನೆರವಾಗುವುದು. ಬೆಡಗುಗಳು ಸಮುದಾಯದ ಚಹರೆಗಳಾಗಿ ಅನಾದಿ ಕಾಲದಿಂದಲೂ ಬಂದಿರುವಂತವು. ದೈವಗಳು ಬಲಾಗಬಹುದು ಆದರೆ ಬೆಡಗುಗಳು ಸ್ಥಿತ್ಯಂತರ ಹೊಂದಲು ಸಾಧ್ಯವಿಲ್ಲ. ಯಾವುದೇ ಸಮುದಾಯ ಬೆಡಗುಗಳನ್ನು ಕಳೆದುಕೊಳ್ಳಲು ಸಾಧ್ಯವಿಲ್ಲ. ಒಂದು ವೇಳೆ ಕಳೆದುಕೊಂಡರೆ ಆ ಸಮುದಾಯದ ಅಸ್ತಿತ್ವವೇ ಇಲ್ಲವೆಂದು ಹೇಳಬಹುದು.. ಬೆಡಗುಗಳು ಸಮುದಾಯದ ಜೀವನಾವರ್ತನ ಮತ್ತು ವಾರ್ಷಿಕಾವರ್ತನ ಆಚರಣೆಗಳಲ್ಲಿ ಅನಿವಾರ್ಯ ಪಾತ್ರಗಳನ್ನು ನಿರ್ವಹಿಸುತ್ತವೆ. ಕರ್‌ಕರ್‌ಮುಂಡ ಸಮುದಾಯದ ಒಟ್ಟು ೧೫೪೯ ಜನಸಂಖ್ಯೆಯಲ್ಲಿ ೩೨೧ ಕುಟುಂಬಗಳು ಕಂಡುಬಂದಿವೆ. ಕರ್‌ಕರ್ ಮುಂಡರ ಬಹುತೇಕ ಬೆಡಗುಗಳು ಪಶುಪಾಲಕರ ಬೆಡಗುಗಳಾಗಿರುವುದು ಕಂಡುಬರುತ್ತದೆ. ಬೆಡಗುಗಳ ವಿಂಗಡನೆಯನ್ನು ಗಮನಿಸಿದಾಗ ಮ್ಯಾಕ್ಲೋಳ್ ಶೇಕಡಾ ೨.೪೯, ಎನುಮಲೋಳ್ ೧೯.೦೦, ಮುಂದ್ಲರು ೧೨.೪೬, ಗೋಸೋಳ್ ೦.೬, ಯರಗೊಂಡಲೋಳ್ ೩.೭೩, ಹೀಗೆ ಒಟ್ಟು ಬೆಡಗುಗಳಲ್ಲಿ ೮೫.೬೨ ಕುಟುಂಬಗಳು ಪಶುಪಾಲಕರ ಬೆಡಗುಗಳಾಗಿದ್ದು ಇವೆಲ್ಲವು ಬೇಡ ಸಮುದಾಯದಲ್ಲಿ ಕಂಡುಬರುವುದರಿಂದ ಹಿಂದಿನ ಅಧ್ಯಯನ ಕಾರರು ತಿಳಿಸಿದಂತೆ ಕರ್‌ಕರ್ ಮುಂಡ ಸಮುದಾಯ ಬೇಡ ಸಮುದಾಯದ ಒಳಪಂಗಡವಾಗಿದೆಎಂಬ ಹೇಳಕೆಗೆ ಪುಷ್ಠೀಕರಣ ನೀಡುತ್ತವೆ. ಉಳಿದಂತೆ ಬೊಜ್ಜೋಳ್, ಪೋಗತೋಳ್, ಪಿನ್ನಾಲು, ಪಾನಿಗಿಟ್ಟರ್, ಚಿಮ್ಮಿ, ಬುಸಿ ಒಟ್ಟು ೧೪.೩೮ ಕುಟುಂಬಗಳು ಆಂಧ್ರದಿಂದ ವಲಸೆ ಬಂದಿರುವ ಮುಂಡಾಲಬಂಡ ಎಂಬ ಹೆಸರಿನ ಈ ಸಮುದಾಯದವರಲ್ಲಿ ಹಾಗೂ ತಮಿಳುನಾಡಿನಿಂದ ಬಂದಿರುವಕೊಪ್ಪಳದ ಕುಟುಂಬಗಳ ಬೆಡಗುಗಳಾಗಿವೆ. ಇವು ನೂತನವಾಗಿ ಬಂದು ಸೇರಿರುವ ಬೆಡಗುಗಳಾಗಿದ್ದು ಅವುಗಳು ಹೇಗೆ ರೂಪಿತವಾದವು ಎಂಬುದು ಸಮುದಾಯದವರ ಅರಿವಿನ ಮಿತಿಯಾಗಿದೆ. ಈ ಬೆಡಗುಗಳು ಆಂಧ್ರ ಮತ್ತು ತಮಿಳುನಾಡಿನ ಮೂಲದವುಗಳಾಗಿರುವ ಸಾಧ್ಯತೆ ಇದ್ದು, ಇದರಿಂದ ಬಂಡ ಸಮುದಾಯದಲ್ಲಿ ಇತರೆ ಸಮುದಾಯಗಳು ಬಂದು ಸೇರಿರುವ ಸಾಧ್ಯತೆಗಳು ಇರಬಹುದಾಗಿದೆ. ೮೫.೬೨ (೨೭೫ ಕುಟುಂಬಗಳ) ಪಶುಪಾಲಕರ ಬೆಡಗುಗಳನ್ನು ಹೊಂದಿರುವ ಕರ್‌ಕರ್ ಮುಂಡರು ಬೇಡ ಸಮುದಾಯದವರ ಅಣ್ಣತಮ್ಮಂದಿರು, ನೆಂಟರು ಎಂದು ಗುರುತಿಸಿಕೊಳ್ಳುತ್ತಿರುವುದು ಮಾಹಿತಿದಾರರ ತಿಳುವಳಿಕೆಯಾಗಿದೆ.

ಕರ್‌ಕರ್ ಮುಂಡರ ಪ್ರಸ್ತುತ ಸ್ಥಿತಿಗತಿಗಳು ಎಂಬ ಅಧ್ಯಾಯವು ಕರ್‌ಕರ್ ಮುಂಡ ಸಮುದಾಯದ ಪ್ರದೇಶವಾರು ಜನಸಂಖ್ಯೆ, ಲಿಂಗಾನುಪಾತದ ವಿವರ,

ಜಿಲ್ಲಾವಾರು ನೆಲೆ ಮತ್ತು ಹಂಚಿಕೆ, ಪರ್ಯಾಯ ಹೆಸರುಗಳಲ್ಲಿ ಹಂಚಿಕೆಯಾಗಿರುವ ಜನಸಂಖ್ಯೆಯ ಪ್ರಮಾಣ, ವಯೋಮಾನದ ವಿವರ, ವಾಸಿಸುವ ನೆಲೆಯ ಸ್ವರೂಪ ಮತ್ತು ಒಡೆತನದ ವಿವರ, ಪಶುಸಂಪತ್ತಿನ ವಿವರಣೆ, ಆರ್ಥಿಕ ಉಪಜೀವನಕ್ಕಾಗಿ ಅನುಸರಿಸುತ್ತಿರುವ ವೃತ್ತಿಗಳು, ವೈವಾಹಿಕ ಸ್ಥಾನಮಾನ, ಶೈಕ್ಷಣಿಕ ಸ್ಥಿತಿಗತಿ ಮತ್ತು ಸಂವಿಧಾನ ಬದ್ದ ಸೌಲಭ್ಯಗಳನ್ನು ಪಡೆಯುತ್ತಿರುವ ಅಂಕಿ-ಅಂಶಗಳು, ದೇವರ ಆರಾಧನೆ ಮತ್ತು ಬೆಡಗುವಾರು ಜನಸಂಖ್ಯೆಯನ್ನು ಕೋಷ್ಟಕಗಳ ಮೂಲಕ ಅಂಕಿ-ಅಂಶಗಳ ಮೂಲಕ ವಿವರಣೆ ನೀಡುವುದರ ಜೊತೆಗೆ ಸಮುದಾಯದ ಹಿಂದಿಳಿದಿರುವಿಕೆ ಮತ್ತು ಗುರುತನ್ನು ತಿಳಿಯಲು ನೆರವಾಗುವುದು.ಆರ್ಥಿಕತೆಗಾಗಿ ಪರ್ಯಾಯ ವೃತ್ತಿಗಳನ್ನು ಅವಲಂಬಿಸಿದ್ದು, ಅದ ಸಾಕಾಗದೆ ವಸತಿ, ಆರೋಗ್ಯ, ಶೈಕ್ಷಣಿಕ ಸ್ಥಿತಿಗತಿಗಳಲ್ಲಿ ಹಿಂದುಳಿದಿರುವುದು ಕಂಡು ಬರುತ್ತದೆ. ಪಾರಂಪರಿಕ ವೃತ್ತಿಗಳ ಸ್ಥಾನಮಾನ ಕುಂದಿರುವ ಕಾರಣ ಅವುಗಳನ್ನು ಅವಲಂಬಿಸಿ ಬದುಕುವವರ ಪ್ರಮಾಣ ಕಡಿಮೆಯಾಗುತ್ತಿದೆ. ಸರ್ಕಾರಿ ಸೌಲಭ್ಯಗಳು ಪ್ರಬಲ ವರ್ಗಗಳ ಪಾಲಾಗಿದ್ದು ಇದಕ್ಕೆ ಕಾರಣ ಸಮುದಾಯದ ಛಿದ್ರೀಕರಣದಿಂದ ಸಂಘಟನೆ ಇಲ್ಲದಿರುವುದಾಗಿದೆ. ಶೈಕ್ಷಣಿಕವಾಗಿ ಹಿಂದುಳಿದು ಅಲ್ಪಸಂಖ್ಯಾತವಾಗಿರುವುದರಿಂದ ರಾಜಕಾರಣದಲ್ಲಿ ಪಾಲ್ಗೊಳ್ಳುವಿಕೆ ಇಲ್ಲವಾಗಿದೆ. ಇಂತಹ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಶೈಕ್ಷಣಿಕ ಸಮಸ್ಯೆಗಳನ್ನು ಎದುರುಸುತ್ತಿರುವ ಈ ಸಮುದಾಯದ ಸಮಸ್ಯೆಗಳ ಪರಿಹಾರಕ್ಕೆ ಸಮುದಾಯದಲ್ಲಿ ಸಂಘಟನೆಯ ಅಗತ್ಯತೆ ಇದೆ. ಚದುರಿಸುವ ಜನರು ಒಂದಾಗಿ ಹಕ್ಕು ಮತ್ತು ಸೌಲಭ್ಯಗಳನ್ನು ಪಡೆಯಲು ಶೈಕ್ಷಣಿಕ ಮಹತ್ವ ತಿಳಿಯಬೇಕಾಗಿದೆ. ಇತರ ಅಲೆಮಾರಿ ಸಮುದಾಯದ ಕುರಿತಾಗಿ ನಡೆದ ಅಧ್ಯಯನ, ಸಮೀಕ್ಷೆಗಳು, ಸಂಘಟನೆಗಳು ಈ ಆಗದಿರುವುದರಿಂದ ಅತಂತ್ರ ಬದುಕಿಗೆ ಒಳಗಾಗಿ ಕ್ಷೀಣಿಸುತ್ತಿರುವುದು ಕಂಡು ಬಂದಿದ್ದು, ಈ ಸಮುದಾಯದ ಅಭಿವೃದ್ಧಿಗೆ ಪ್ರಸ್ತುತ ಅಧ್ಯಯನವು ಪೂರಕವಾಗಬಹುದು ಎಂಬ ಆಶಯ ಈ ಅಧ್ಯಯನದ ಮುಖ್ಯ ಭಾಗವಾಗಿದೆ.

## ಅಧ್ಯಾಯ ಆರು

## ಸಮಾರೋಪ

ಭಾರತವು ವಿಶಾಲವಾದ ಭೂ ಪ್ರದೇಶ ಹೊಂದಿದ್ದು, ಜಗತ್ತಿನ ಏಳನೇ ಅತಿ ದೊಡ್ಡ ದೇಶವೆಂದು ಹಾಗೂ ಜನಸಂಖ್ಯೆಯಲ್ಲಿ ಎರಡನೆಯ ಅತಿದೊಡ್ಡ ದೇಶವೆಂದು ಜಾಗತಿಕ ಮಟ್ಟದಲ್ಲಿ ಗುರುತಿಸಲ್ಪಟ್ಟಿದೆ. ಇಲ್ಲಿನ ಸಂಸ್ಕೃತಿಯು ವೈವಿಧ್ಯಮಯವಾಗಿದ್ದು, ಸರ್ವಧರ್ಮಗಳ ಸಮನ್ವಯವೆಂದು ಹೇಳಲಾಗುತ್ತದೆ. ಭಾರತವನ್ನು "ಆರ್ಯ, ಶಕ, ಹೂಣ, ಪೋರ್ಚುಗೀಸ್, ಡಚ್, ಗ್ರೀಕ್, ಅರಬ್, ಮುಸ್ಲಿಂ ಮುಂತಾದವರು ವಿವಿಧ ಪ್ರದೇಶ ಹಾಗೂ ಧರ್ಮಜನಾಂಗಗಳಿಗೆ ಸೇರಿದವರು" ಅನಾದಿ ಕಾಲದಿಂದಲೂ (ವೆಂಕಟೇಶ್ ಎಚ್.ಎಲ್:೨೦೧೦:೪೫) ಆಕ್ರಮಣ ಮಾಡಿರುವುದು ಕಾರಣವಾಗಿದೆ ಎಂದು ಹೇಳಬಹುದು. ಅವರ ಆಕ್ರಮಣದಿಂದ ಸಂಸ್ಕೃತಿಯ ಕುರುಹುಗಳು ಇಲ್ಲಿಯೇ ಉಳಿದಿರುವುದನ್ನು ಕಾಣುತ್ತೇವೆ. ಇದರಿಂದ ಮೂಲ ಸಂಸ್ಕೃತಿಯ ಮೇಲೆ ಹೇರಿರುವ ಪರಿಣಾಮಗಳು ಇಂದಿನ ವೈವಿಧ್ಯಮಯ ಸಂಸ್ಕೃತಿಗೆ ಕಾರಣವಾಗಿವೆ ಎಂದು ತಿಳಿಯಬಹುದು. ಈ ಎಲ್ಲಾ ಪರಿಣಾಮಗಳಿಂದ ಭಾರತದ ಮೂಲನಿವಾಸಿಗಳ ಸಂಸ್ಕೃತಿಯು ಅವಜ್ಞೆಗೆಒಳಗಾಗುತ್ತಲೇ ಬಂದಿರುವುದು ಎನ್.ಆರ್. ಪಾಂಡೆಯವರು "ಭಾರತಕ್ಕೆ ಬಂದವರೆಲ್ಲ ಹೊರಗಿನವರು. ಇಲ್ಲಿಯ ಮೂಲ ನಿವಾಸಿಗಳೆಂದರೆ ಬುಡಕಟ್ಟು ಪಂಗಡಗಳು" (ಅದೇ:೪೫) ಎಂದು ಪ್ರತಿಪಾದಿಸಿರುವರು.

ಭಾರತವು ಮೇಲಿನವರ ಆಕ್ರಮಗಳಿಗೆ ತುತ್ತಾದಾಗ ಇಲ್ಲಿನ ಮೂಲನಿವಾಸಿಗಲಾದ ಬುಡಕಟ್ಟು ಸಮುದಾಯಗಳು ಭಾರತದಾದ್ಯಂತ ಚದುರಿರುವುದನ್ನು ಕಾಣುತ್ತೇವೆ. ವಲಸೆ ಪ್ರಕ್ರಿಯೆ ಉತ್ತರದಿಂದ ದಕ್ಷಿಣ, ಈಶಾನ್ಯ, ಪಶ್ಚಿಮಗಳ ಕಡೆಗೆ ಆರಂಭವಾಗಿರುವುದನ್ನು ತಿಳಿಯಬಹುದು. ಈ ಚದುರುವಿಕೆಯನ್ನು ಆಧರಿಸಿ ಮುಂಜುದಾರ್ ಅವರು ಮೂರು ವಲಯಗಳಾಗಿ ವಿಂಗಡಸಿ ಗುರುತಿಸಿರುವುದನ್ನು

ಕಾಣಬಹುದಾಗಿದೆ. "ಮೊದಲನೆಯದು ಈಶಾನ್ಯ ವಲಯ ಹಿಮಾಲಯದ ಪರ್ವತಶ್ರೇಣಿ ಮತ್ತು ಪೂರ್ವದ ಬ್ರಹ್ಮಪುತ್ರ ನದಿಯ ಉಪನದಿಗಳಾದ ಜಮುನಾ, ಪದ್ಮಾ ನದಿಗಳ ಭಾಗಗಳು ಈ ವಲಯದ ವ್ಯಾಪ್ತಿಗೆ ಸೇರಿವೆ. ಈ ವಲಯದಲ್ಲಿ ಖಾಸಿ, ನಾಗ, ಗಾರೊ, ಡಾಪ್ಲಾ, ಮಿಸ್ಸಿಮಿ, ಚಕ್ಮಾ, ಕಚಾರಿ, ರಬಾ, , ಲೆಪ್ಪು, ಗುರಂಗ ಇತ್ಯಾದಿ ಬುಡಕಟ್ಟುಗಳು ನೆಲೆಸಿವೆ. ಎರಡನೆಯದು ಮಧ್ಯವಲಯ ಗಂಗಾ ನದಿಯ ಸಮತಟ್ಟ ಭಾಗದಿಂದ ದಕ್ಷಿಣದ ಕೃಷ್ಣಾನದಿಯವರೆಗಿನ ವಿಸ್ತಾರವಾದ ಭಾಗವಾಗಿದೆ. ಈ ವಲಯದಲ್ಲಿ ಅಪಾರ ಸಂಖ್ಯೆಯ ಬುಡಕಟ್ಟುಗಳು ವಾಸವಾಗಿದ್ದಾರೆ. ಸಂತಾಲ, ಬಿಲ್, ಗೊಂಡಾ, ಮುಂಡಾ, ಹೊಂ, ಜಂಗ್, ಕೋಲ್ ಇತ್ಯಾದಿ, ಮೂರನೆಯದು ದಕ್ಷಿಣವಲಯ ದಕ್ಷಿಣ ಭಾರತದಲ್ಲಿರುವ ಚೆಂಚು, ಕೆದಾರ್, ತೋಡಾ, ಕೋಟಾ, ಬಡಗ, ಉರಾಲಿ, ಕಾಣಿಕ್ಕರ್ ಇತ್ಯಾದಿ ಬುಡಕಟ್ಟುಗಳು ನೆಲೆಸಿವೆ. ಈ ಮೂರು ವಲಯಗಳಲ್ಲದೆ ಅಂಡಮಾನ್ ನಿಕೋಬಾರ್ ದ್ವೀಪಸಮೂಹ ನಾಲ್ಕನೆಯ ವಲಯವಾಗಿ ಪರಿಗಣಿಸಲಾಗಿದೆ. ಇಲ್ಲಿ ಜಸ್ವಾ, ಪೊಂಗೆ, ಬುಡಕಟ್ಟುಗಳು ನೆಲೆಸಿವೆ. (ಸಣ್ಣರಾಮ:೨೦೦೧:೩-೪) ಎಂದು ತಿಳಿಸಿರುವರು. ಈ ಮೇಲ್ಕೈ ಬುಡಕಟ್ಟುಗಳ ಹೊರತಾಗಿಯೂ ಕರ್ನಾಟಕ ಆಂಧ್ರ, ಓರಿಸ್ಸಾ, ತಮಿಳುನಾಡಿನ ಅನೇಕ ಬುಡಕಟ್ಟುಗಳು ಅವಜ್ಞೆಗೆ ಒಳಗಾಗಿದ್ದು ಇದು ಆ ಕಾಲಘಟ್ಟದ ಅಧ್ಯಯನಕಾರರ ಮಿತಿಗಳಾಗಿವೆ. ಸಮುದಾಯ ಮುಖಿಯಾಗಿರದ ಇಂತಹ ಅಧ್ಯಯನಗಳಿಗೆ ತಿರುಗೇಟು ನೀಡುವ ಸಲುವಾಗಿ ಆರಂಭಗೊಂಡ ತಳಸ್ಪರ್ಷಿಯ (ಸಬಾಲ್ಟನ್) ಅಧ್ಯಯನಗಳು ಭಾರತದಲ್ಲಿ ಇತ್ತೀಚೆಗೆ ಹೆಚ್ಚಿನ ಮನ್ನಣೆ ಪಡೆದು ಪ್ರತಿ ಸಂಸ್ಕೃತಿಗೆ ಕಾರಣವಾಗುತ್ತಿವೆ. ಮೇಲೆ ತಿಳಿಸಿದ ಎಲ್ಲಾ ಬುಡಕಟ್ಟುಗಳು ನಾಡಿಗೆ ದೂರವಾಗಿ ಕಾಡನ್ನೇ ಅವಲಂಬಿಸಿ ಬದುಕುವ ಕಾಲಘಟ್ಟದ ಚಹರೆಯನ್ನು ಸೂಚಿಸುತ್ತವೆ. ಆದರೆ ಬ್ರಿಟಿಷರ ನೀತಿಗಳು ವೈದಿಕತೆಯ ಪ್ರಭಾವ ಇಂತಹ ಬುಡಕಟ್ಟುಗಳನ್ನು ವಿಂಗಡಣೆಗೊಳಿಸಿ ನಾಡಿಗೆ ಕರೆತಂದಿರುವುದನ್ನು ಕಾಣಬಹುದು. ಅದರ ಪರಿಣಾಮವಾಗಿ ನಾಡಿನ ವರ್ಗಗಳಿಗೆ ಪೂರಕವಾಗಿ ಕಾಯನಿರ್ವಹಿಸಿ ಅಂತಿಮವಾಗಿ ಅಲೆದಾಟದ ಬದುಕಿಗೆ ಕಾರಣವಾಗಿವೆ. ಈ ಅಲೆದಾಟದ ಬದುಕಿಗೆ ಒಳಗಾಗಿರುವ ಬಹುತೇಕ ಸಮುದಾಯಗಳು ಮೂಲ ಬುಡಕಟ್ಟುಗಳಿಂದ ವಿಘಟನೆಹೊಂದಿ ಪ್ರಬಲರ ಶೋಷಣೆಗಳಿಂದ ಬೇಸತ್ತು ದಕ್ಷಿಣದ ಭಾರತದ ಕರ್ನಾಟಕ, ಆಂಧ್ರಪ್ರದೇಶದಲ್ಲಿ ನೆಲೆ ನಿಂತಿರುವುದು ವಿಶೇಷವಾಗಿದೆ. ಹಲವಾರು ಹೆಸರುಗಳಲ್ಲಿ ಚದುರಿ ಹೋಗಿರುವ ಈ ಅಲೆಮಾರಿತನದ ಬುಡಕಟ್ಟುಗಳು ಕರ್ನಾಟಕದಲ್ಲಿ ಅಲೆಮಾರಿ ಸಮುದಾಯಗಳೆಂದು ಕರೆಯಲ್ಪಟ್ಟರೆ ಆಂಧ್ರಪ್ರದೇಶದಲ್ಲಿ

ಸಂಚಾರಿ ಜಾತುಲು ಎಂಬ ನಾಮಧೇಯ ಹೊಂದಿವೆ. ಕರ್ನಾಟಕದಲ್ಲಿನ ಬಹುತೇಕ ಅಲೆಮಾರಿ ಸಮುದಾಯಗಳು ಅರಸೊತ್ತಿಗೆ ನಾಶದಿಂದ ಬೀದಿಗೆ ಬಂದು ಅಲೆದಾಟಕ್ಕೆ ನಿಂತಿರುವಂತಿದೆ. ಇವರ ಮೂಲ ಆಂಧ್ರಪ್ರದೇಶವೆಂತಲೇ ಇಂದಿಗೂ ಹೇಳುವರು. ಅಂತಹ ಅಲೆಮಾರಿ ಸಮುದಾಯಗಳಲ್ಲಿ ಕರ್‌ಕರ್ ಮುಂಡ ಸಮುದಾಯವು ಒಂದಾಗಿದ್ದು, ಅವಜ್ಞೆ ಒಳಗಾಗಿ ಇದುವರೆಗೂ ಯಾವುದೇ ಅಧ್ಯಯನಗಳು ನಡೆಯದೇ ಇರುವುದು ಅಧ್ಯಯನಕಾರರ ಮಿತಿಯನ್ನು ತಿಳಿಸುತ್ತದೆ. ಅಧ್ಯಯನ ನಡೆಯದ ಮತ್ತು ಅಲಕ್ಷತೆಗೆ ಒಳಗಾಗಿರುವ ಈ ಸಮುದಾಯದ ಕುರಿತು ಸಾಮಾಜಿಕವಾಗಿ ಅಧ್ಯಯನ ಕೈಗೊಳ್ಳಲಾಗಿದೆ. ಗೊಂದಲಿಗ, ದುರುಗಮುರುಗಿ, ಸಮುದಾಯಗಳಂತೆ ಗೂಢಾಚಾರಿ ವೃತ್ತಿ ಮಾಡುತ್ತಿದ್ದ ಈ ಸಮುದಾಯವು ನಾಗರಿಕ ಬದುಕಿಗೆ ಬಹು ಬೇಗನೇ ಹೊಂದಿಕೊಂಡ ಸಮುದಾಯುಗಳಿಂದ ಹೆಚ್ಚಿನ ಸ್ಥಿತ್ಯಂತರಕ್ಕೆ ಒಳಗಾಗಿದೆ.ಅಧ್ಯಯನ ವ್ಯಾಪ್ತಿಯಲ್ಲಿ ತಿಳಿಸಿರುವಂತೆ ಐಡೆಂಡಿಟಿ ಸಮಸ್ಯೆಯನ್ನು ಎದುರಿಸುತ್ತಿರುವ ಕರ್ನಾಟಕದ ಬೆಳಗಾವಿ, ಕೊಪ್ಪಳ, ಬಾಗಲಕೋಟೆ, ಯಾದಗಿರಿ, ಹಾವೇರಿ, ಧಾರವಾಡ, ದಾವಣಗೆರೆ, ಚಿತ್ರದುರ್ಗ, ತುಮಕೂರು, ಬಳ್ಳಾರಿ ಜಿಲ್ಲೆಗಳಲ್ಲಿನ ಈ ಸಮುದಾಯದವರನ್ನು ಕೇಂದ್ರಿಕರಿಸಿ ಅಧ್ಯಯನ ಕೈಗೊಂಡಾಗ ಪ್ರಾಕಲ್ಪನೆಗೆ ಭಿನ್ನವಾದ ಅಂಶಗಳು ಕಂಡುಬಂದಿದ್ದು ಅವುಗಳನ್ನು ತಿಳಿಯುವುದು ಪ್ರಮುಖವಾಗಿದೆ.

**ಅಧ್ಯಯನದ ಫಲಿತಗಳು**

ಪ್ರಸ್ತುತ ಅಧ್ಯಯನವು ಕರ್ನಾಟಕದಲ್ಲಿನ ೩೨೧ ಕುಟುಂಬಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಮತ್ತು ಆಂಧ್ರಪ್ರದೇಶದ ಕೆಲವು ತಿಳುವಳಿಕೆದಾರರ ಮಾಹಿತಿ ಆಧರಿಸಿ ಅಧ್ಯಯನ ಫಲಿತಗಳನ್ನು ಗುರುತಿಸಲಾಗಿದೆ.

ಮೊಂಡರು ಎಂಬ ಸಮುದಾಯ ಬೇಡ ಸಮುದಾಯದ ಒಳಪಂಗಡವಾಗಿದೆ. ಮೊಂಡರಲ್ಲಿ ನಾಲ್ಕು ಒಳಪಂಡಗಳಿದ್ದು, ಅದರಲ್ಲಿ ಕರ್‌ಕರ್‌ಮುಂಡ ಅಥವಾ ಊರಮೊಂಡ ಸಮುದಾಯ ಒಂದಾಗಿದೆ.

ಕರ್‌ಕರ್ ಮುಂಡರ ಮಾತೃಭಾಷೆ ತೆಲುಗು ಆಗಿದ್ದು, ಅವರ ಜೀವನಾವರ್ತನ ಮತ್ತು ವಾರ್ಷಿಕಾವರ್ತನ ಆಚರಣೆಗಳು ಮತ್ತು ಬೆಡಗುಗಳಲ್ಲಿ ತೆಲುಗು ಪದಗಳು ಪ್ರಚಲಿತದಲ್ಲಿವೆ.

ಕರ್‌ಕರ್ ಮೊಂಡರಲ್ಲಿ ೨೩ ಬೆಡಗುಗಳು ಇದ್ದು, ಅದರಲ್ಲಿ ೧೯ ಬೆಡಗುಗಳು ಬೇಡರ ಬೆಡಗುಗಳಂತೆ ಕಂಡುಬರುತ್ತವೆ. ಉಳಿದ ೪ ಬೆಡಗುಗಳು ಆಂಧ್ರಪ್ರದೇಶ

ಮತ್ತು ತಮಿಳುನಾಡಿನ ವೈವಾಹಿಕ ಸಂಬಂಧದಿಂದ ವಲಸೆ ಬಂದಿದ್ದು ಇವುಗಳು ಅನ್ಯ ಸಮುದಾಯ ಒಳಗೊಂಡಿರುವ ಸಂದೇಹಕ್ಕೆ ಆಸ್ಪದ ನೀಡುತ್ತದೆ.

ಕರ್‌ಕರ್ ಮುಂಡರು ಕರ್ನಾಟಕದಲ್ಲಿ ಪರ್ಯಾಯ ಹೆಸರುಗಳಿಂದ ಚದುರಿಹೋಗಿದ್ದು, ವೃತ್ತಿ ಬೆಡಗುಗಳು ಒಂದೇ ಆಗಿವೆ. ಮುಂಡಾಲಬಂಡಾ, ಮೊಂಡ ಬೇಡ, ಕರ್‌ಕರ್ ಮುಂಡ ಹೆಸರುಗಳು ಒಂದೇ ಆಗಿವೆ. ಮುಂಡಾಲ ಎಂಬ ಹೆಸರಿನ ಆದಿ ದ್ರಾವಿಡ ಸಮುದಾಯ ಒಳಪಂಗಡ ಮತ್ತು ಮುಂಡಾಲಬಂಡಾ ಸಮುದಾಯ ಬೇರೆ ಆಗಿದೆ.

ಕರ್‌ಕರ್ ಮುಂಡರ ಮೂಲ ಶ್ರೀಶೈಲ ಪರ್ವತವೆಂದು ತಿಳಿಯಲಾಗಿದೆ.

ಕರ್‌ಕರ್ ಮುಂಡರು ಕಿತ್ತೂರು, ಸುರಪುರ ಸಂಸ್ಥಾನಗಳಲ್ಲಿ ಗೂಢಾಚಾರರಾಗಿದ್ದು, ಸಂಸ್ಥಾನಗಳ ಅವನತಿ ನಂತರ ರಜಾಕಾರರ ಹಾವಳಿಯಿಂದ ಇತರೆ ಭಾಗಗಳಿಗೆ ಚದುರಿರುವುದು ಕಂಡುಬಂದಿದೆ.

ರಜಾಕಾರರ ಹಾವಳಿಯಿಂದ ತಪ್ಪಿಸಿಕೊಳ್ಳಲು ವಲಸೆ ಆರಂಭಿಸಿದರೆ ಮತಾಂತರದಿಂದ ಪಾರಾಗಲು ಹಂದಿ ಸೇವನೆ ಮಾಡಿರುವುದು ಕಂಡುಬರುತ್ತದೆ.

ಹಂದಿ ಆಹಾರವಾಗಿ ರೂಪಿತವಾದಗಲೇ ಬೇಡ ಸಮುದಾಯದಿಂದ ಬೇರ್ಪಟ್ಟಿರುವ ಸಾಧ್ಯತೆಯಿದೆ. ಬ್ರಿಟಿಷರಿಗೆ ಸಹಕರಿಸದೇ ವಿರೋಧಿಯಾಗಿ ಕಾರ್ಯನಿರ್ವಹಿಸಿದ ಸಮುದಾಯಗಳಿಗೆ ಅವರು ನೀಡಿದ ಹಣೆಪಟ್ಟಿ ಅಪರಾಧಿ ಬುಡಕಟ್ಟುಗಳು ೧೮೭೧ರ ಅಪರಾಧಿ ಬುಡಕಟ್ಟು ಕಾಯ್ದೆಯಲ್ಲಿ ಈ ಸಮುದಾಯದ ಹೆಸರಿಲ್ಲ ಬದಲಿಗೆ ಬೇಡರ ಹೆಸರಿದೆ. ಇದರಿಂದ ಆ ಸಂದರ್ಭದಲ್ಲಿ ಅದು ಇನ್ನೂ ಬೇರ್ಪಡೆಯಾಗದೆ ಬೇಡ ಸಮುದಾಯದಲ್ಲಿತ್ತು ಎಂದು ತಿಳಿಯಬಹುದು.

ಕರ್‌ಕರ್ ಮುಂಡರು ಶಕ್ತಿ ದೇವತೆಗಳ ಆರಾಧಕರಾಗಿದ್ದಾರೆ.

ಅಲೆಮಾರಿ ಬದುಕು ಮನೆದೇವರುಗಳನ್ನು ಇಲ್ಲವಾಗಿಸಿ ಸ್ಥಳೀಯ ದೇವರುಗಳನ್ನು ಆರಾಧಿಸುತ್ತಾ ಬಲಿ ಆಚರಣೆ ರೂಢಿಯಲ್ಲಿದೆ.

ದುರುಗಮ್ಮ, ಸುಂಕ್ಲಮ್ಮ, ಹುಲಿಗೆಮ್ಮ, ಮಾರಮ್ಮ, ಚೌಡಮ್ಮ, ಕೊಲ್ಲಾಪುರದ ಮಹಾಲಕ್ಷ್ಮಿ ದೇವತೆಗಳ ಜೊತೆಗೆ ಆಂಜನೇಯ, ತಿರುಪತಿ ತಿಮ್ಮಪ್ಪ, ನರಸಿಂಹಸ್ವಾಮಿ, ಸಂಕೇಶ್ವರದ ಮಸುಬ, ಅರಕೆರೆ ಅಮೋಘಸಿದ್ಧ, ಮುನೀಶ್ವರ, ಉರವಕೊಂಡ ಈರಣ್ಣ ಇತ್ಯಾದಿ ದೇವರುಗಳನ್ನು ಪೂಜಿಸುವರು.

ಕರ್‌ಕರ್ ಮುಂಡರ ಹುಟ್ಟು, ಋತುಮತಿ, ವಿವಾಹ, ಶವಸಂಸ್ಕಾರ ಆಚರಣೆಗಳು ಊರಬೇಡ ಮತ್ತು ಮ್ಯಾಸಬೇಡರ ಆಚರಣೆಗಳಂತಿವೆ.

ದಕ್ಷಿಣ ಕರ್ನಾಟಕದ ಮೊಂಡ ಬೇಡರನ್ನು ನಮ್ಮ ಅಣ್ಣತಮ್ಮಂದಿರು ಎಂದು ಚಿತ್ರದುರ್ಗ, ತುಮಕೂರು ಭಾಗದ ಬೇಡರು ಸ್ವೀಕರಿಸಿದ್ದು ಜನಸಂಖ್ಯೆ ವಿರಳವಾಗುತ್ತಿರುವುದಕ್ಕೆ ಕಾರಣವಾಗಿದೆ.

ಉತ್ತರ ಕರ್ನಾಟಕ ಕರ್‌ಕರ್ ಮುಂಡರು ಇತ್ತೀಚಿನ ದಿನಮಾನಗಳಲ್ಲಿ ಸಮುದಾಯದಿಂದ ಬೇರೆ ಸಮುದಾಯಗಳಲ್ಲಿ ಸೇರಿಕೊಳ್ಳುತ್ತಿರುವರು.

ಕರ್‌ಕರ್ ಮುಂಡರು ಅಸ್ಪೃಶ್ಯತೆಯನ್ನು ಎದುರಿಸುತ್ತಿಲ್ಲ.

ವಿಜಯದಶಮಿ, ಯುಗಾದಿಯಲ್ಲಿ ಹಿರಿಯರ ಹಬ್ಬ ಮಾಡುವ ಮೂಲಕ ಪೂರ್ವಿಕರ ಪ್ರತಿರೂಪಗಳಾದ ಮುಖಪದ್ಮಗಳನ್ನು ಆಸ್ತಿಯಾಗಿ ಹಂಚಿಕೊಳ್ಳುವರು.

ಹಂದಿಬೇಟೆ ಪರಂಪರಾಗತವಾಗಿ ಬಂದಿದ್ದು ಇಂದು ಸಾಕಿದ ಹಂದಿಗಳ ಬಲಿ ಮಸುಬ ದೇವರಿಗೆ ಮತ್ತು ಜೀವನಾವರ್ತನ ಆಚರಣೆಗಳಲ್ಲಿ ವಿಶೇಷವಾಗಿದೆ.

ಬೇಟೆ ಸಂಸ್ಕೃತಿಯು ಪರ್ಯಾಯ ವೃತ್ತಿಗಳ ಅವಲಂಬನೆಯಿಂದ ಮತ್ತು ಕಾನೂನುಗಳಿಂದ ಮಾಯವಾಗುತ್ತಿದ್ದು, ಯುಗಾದಿ ಬೇಟೆ ವಿಶೇಷವಾಗಿದ್ದು, ದಿನನಿತ್ಯದ ಬೇಟೆ ಜಾರಿಯಲ್ಲಿತ್ತು.

ಪಾರಂಪರಿಕ ಮಕರ್‌ಗ್ಯಾಲೋ ಭಿಕ್ಷಾವೃತ್ತಿ ಇಂದಿಗೂ ಜೀವಂತವಾಗಿದ್ದು, ಜಾತ್ರೆ, ಉತ್ಸವ, ಹಬ್ಬಗಳಲ್ಲಿ ಹಿರಿಯ ತಲೆಮಾರಿನವರಿಂದ ರೂಢಿಯಲ್ಲಿದೆ. ಉತ್ತರ ಕರ್ನಾಟಕದಲ್ಲಿ ಮಹಿಳೆಯರು ಪುರುಷರಿಗಿಂತ ಹೆಚ್ಚು ಈ ಭಿಕ್ಷಾವೃತ್ತಿಯಲ್ಲಿ ತೊಡಗಿಕೊಂಡಿರುವರು.

ಕರ್‌ಕರ್ ಮುಂಡರು ಕೂದಲು ವ್ಯಾಪಾರದಲ್ಲಿ ಅಧಿಕ ಸಂಖ್ಯೆಯಲ್ಲಿ ತೊಡಗಿಕೊಂಡಿದ್ದು ಹಂದಿ ಸಾಕಾಣಿಕೆ, ಗುಜರಿ ವ್ಯಾಪಾರ, ವಾಹನ ಚಾಲನಾ ವೃತ್ತಿ, ಹಮಾಲಿ, ಮೀನುಗಾರಿಕೆಗಳನ್ನು ಪರ್ಯಾಯ ವೃತ್ತಿಗಳನ್ನಾಗಿಸಿಕೊಂಡು ಬದುಕುತ್ತಿದ್ದಾರೆ.

ಕರ್ನಾಟಕದ ಕೂದಲು ಉದ್ಯಮದಲ್ಲಿ ತೊಡಗಿರುವ ಜನರಲ್ಲಿ ಈ ಸಮುದಾಯದವರೇ ಹೆಚ್ಚು ತೊಡಗಿಕೊಂಡಿದ್ದು, ಆರ್ಥಿಕತೆಯ ಮೂಲ ಇದಾಗಿದೆ. ಇದರಲ್ಲಿ ಕೂದಲು ಸಂಗ್ರಹಣಾ ಕಾರ್ಯ ಮಹಿಳೆಯರಾದ್ದಾಗಿದ್ದರೆ ಉಳಿದಂತಹ ಚಟುವಟಿಕೆಗಳು ಪುರುಷರದ್ದಾಗಿದೆ. ಈ ಉದ್ಯಮ ಕೊಪ್ಪಳದಿಂದ ಹೈದ್ರಾಬಾದ್ ಮತ್ತು ಗುಂಟೂರುವರೆಗೆ ವ್ಯಾಪಿಸಿದೆ.

ಕರ್‌ಕರ್ ಮುಂಡರ ನೆಲೆಗಳು ನಗರದ ಕೊಳಚೆ ಪ್ರದೇಶಗಳಾಗಿವೆ. ಬಹುಪಾಲು ಜನರು ಗುಡಾರ, ಗುಡಿಸಲು ಟಿನ್ ಮನೆಗಳಲ್ಲಿಯೇ ಬದುಕುತ್ತಿರುವರು.

ಗ್ರಾಮೀಣ ಪ್ರದೇಶದ ಕರ್‌ಕರ್ ಮುಂಡರು ಆಶ್ರಯ ಮನೆಗಳಲ್ಲಿ ಬದುಕು ಸಾಗಿಸುತ್ತಿರುವರು.

ಕರ್‌ಕರ್ ಮುಂಡರಲ್ಲಿ ರಾಜಕೀಯ ಸಹಭಾಗಿತ್ವ ಇಲ್ಲದಿರುವುದರಿಂದ ಯಾವುದೇ ಸ್ಥಾನಮಾನ ಪಡೆದಿಲ್ಲ.

ಮೀಸಲಾತಿ ಪಟ್ಟಿಯ ಒ.ಬಿ.ಸಿಯ ೨-ಎ ನಲ್ಲಿ ಇರುವುದರಿಂದ ಮೀಸಲಾತಿ ಸೌಲಭ್ಯಗಳು ಪ್ರಭಲ ವರ್ಗದವರ ಪಾಲಾಗಿದ್ದು ಪೈಪೋಟಿ ನಡೆಸಲು ಅಶಕ್ತರಾಗಿರುವರು.

ಕರ್‌ಕರ್ ಮುಂಡರಲ್ಲಿ ಶೇಕಡಾ ೬೭.೩೩ ಜನರು ನಿರಕ್ಷರಿಗಳಾಗಿದ್ದು ಇದರಲ್ಲಿ ಶೇ. ೩೨.೬೭ ಅಕ್ಷರಬಲ್ಲವರಾಗಿದ್ದಾರೆ.

ಚಿಕ್ಕವಯಸ್ಸಿನ ವಿವಾಹ, ಪುರುಷರು ಅಧಿಕ ದುಶ್ಚಟಗಳಿಗೆ ಒಳಗಾಗಿರುವುದು ಮತ್ತು ಆರೋಗ್ಯ ಸೌಲಭ್ಯಗಳ ಕೊರತೆಯಿಂದ ವಿಧವೆಯರ ಪ್ರಮಾಣ ಶೇ ೫.೫ ಕಂಡುಬರುತ್ತದೆ.

ಉಪಜೀವನಕ್ಕಾಗಿ ಪಾರಂಪರಿಕ ವೃತ್ತಿಗೆ ಬದಲಾಗಿ ಪರ್ಯಾಯ ವೃತ್ತಿಗಳನ್ನು ಅನುಸರಿಸಿದರೂ ಆರ್ಥಿಕವಾಗಿ ಸಭಲರಾಗಿಲ್ಲ. ಕಾರಣ ಹಂದಿ ಸಾಕಾಣಿಕೆಯು ಪ್ರಮುಖವಾಗಿದೆ. ನಗರಗಳಲ್ಲಿನ ಹಂದಿ ಸಾಕಾಣಿಕೆ ನಿಷೇಧಿಸುತ್ತಿರುವುದು ಇವರ ಆರ್ಥಿಕತೆಗೆ ಸವಾಲಾಗಿದೆ. ಕೂದಲು ವ್ಯಾಪಾರದಲ್ಲಿ ಬಂಡವಾಳಶಾಯಿಗಳ ಪ್ರವೇಶವಾಗಿರುವುದರಿಂದ ಶಿಕ್ಷಣದ ಕೊರತೆಯಿಂದ ಮೇಲ್ಮಟ್ಟ ವ್ಯಾಪಾರ ವೈಹಿವಾಟಿನಲ್ಲಿ ಹಿಂದುಳಿಯುತ್ತಿದ್ದಾರೆ.

ಸಾಮಾಜಿಕವಾಗಿ ಕರ್‌ಕರ್ ಮುಂಡರು ಕೊಳಕರು, ದರೋಡೆಕೊರರು ಎಂಬ ಸಾಮಾಜಿಕ ಹಣೆಪಟ್ಟಿ ಕಟ್ಟಿಕೊಂಡಿರುವರು.

ಸರ್ಕಾರಿ ಸೌಲಭ್ಯಗಳನ್ನು ಪಡೆಯಲು ಚಹರೆ ಸಮಸ್ಯೆ ಅತಿಯಾಗಿ ಕಾಡುತ್ತಿದೆ. ಮತ ಬ್ಯಾಂಕ್ ರಾಜಕಾರಣಕ್ಕಾಗಿ ಆಧಾರ್‌ಕಾರ್ಡ್, ಮತದಾರರ ಕಾರ್ಡ್ ಪಡೆದಿರುವರು.

ಕೊಪ್ಪಳದ ಭಾಗ್ಯನಗರವನ್ನು ಹೊರತುಪಡಿಸಿದರೆ ಉಳಿದ ಎಲ್ಲಾ ಪ್ರದೇಶದ ಕರ್‌ಕರ್ ಮುಂಡರು ಆರ್ಥಿಕವಾಗಿ ಹಿಂದುಳಿದಿದ್ದಾರೆ.

ಕರ್‌ಕರ್ ಮುಂಡ ಸಮುದಾಯವು ಶೈವೀಕರಣ ಮತ್ತು ಆರ್ಯೀಕರಣದಿಂದ ಸ್ಥಿತ್ಯಂತರಕ್ಕೆ ಒಳಗಾಗಿರುವುದು ಕಂಡುಬರುತ್ತದೆ.

ಕರ್‌ಕರ್ ಮುಂಡರ ಗುರಿಕಾರ ಅಥವಾ ಕುಲಸ್ಥಡು ಇವರ ಆಚರಣೆಗಳಲ್ಲಿ ಮತ್ತು ಕುಲಂಪಂಚಾಯ್ತಿಗಳಲ್ಲಿ ವಿಶೇಷ ಸ್ಥಾನಮಾನ ಹೊಂದಿದ್ದು ಆಧುನೀಕರಣದಿಂದ ಮಾಯವಾಗುತ್ತಲಿದೆ.

ಸಮುದಾಯದ ಶುದ್ಧತೆ ಮತ್ತು ನಿಷೇಧದಿಂದ ಹಾಗೂ ಸಾಮಾಜಿಕ ಸ್ಥಾನಮಾನದಿಂದ ಅಂತರ್‌ಜಾತಿಯ ವಿವಾಹಗಳು ಕಂಡುಬಂದಿಲ್ಲ.

ಕರ್‌ಕರ್ ಮುಂಡರು ಪುರುಷ ಪ್ರಧಾನ ಕೌಟುಂಬಿಕ ವ್ಯವಸ್ಥೆ ಹೊಂದಿದ್ದು, ಆರ್ಥಿಕತೆ ಮತ್ತು ಶ್ರಮದಲ್ಲಿ ಸ್ತ್ರೀಯ ಪಾತ್ರ ಪುರುಷನಿಗಿಂತ ಅಧಿಕವಾಗಿದೆ.

**ಸಲಹೆಗಳು**

ಕರ್ನಾಟಕದಾದ್ಯಂತ ಪರ್ಯಾಯ ಹೆಸರುಗಳಲ್ಲಿರುವ ಕರ್‌ಕರ್ ಮುಂಡ ಸಮುದಾಯವನ್ನು ಒಟ್ಟುಗೂಡಿಸಿ ಚಹರೆ ನೀಡುವುದರಿಂದ ಜನಸಂಖ್ಯೆಯ ಇಳಿಮುಖವಾಗುವುದನ್ನು ತಡೆಯಬಹುದು. ಸಂಘಟಿಸುವುದರ ಜೊತೆಗೆ ಚಾರಿತ್ರಿಕ ಹಿನ್ನೆಲೆಯನ್ನು ಗ್ರಹಿಸಿ ಬುಡಕಟ್ಟು ಸ್ಥಾನಮಾನ ನೀಡುವ ಅಗತ್ಯತೆ ಇದೆ.

ಗುಡಾರ, ಗುಡಿಸಲುಗಳಲ್ಲಿ ವಾಸಿಸುವ ಇವರಿಗೆ ನಿವೇಶನ ಮತ್ತು ವಸತಿ ಸೌಲಭ್ಯ ಕಲ್ಪಿಸುವುದು ಆ ಮೂಲಕ ಮೂಲಭೂತ ಸೌಲಭ್ಯಗಳಾದ ವಿದ್ಯುತ್, ಕುಡಿಯುವ ನೀರು, ಪಡಿತರ ಚೀಟಿ ನೀಡುವುದು.

ಕೂದಲು ವ್ಯಾಪಾರದಲ್ಲಿ ಬಹುಪಾಲು ಜನರು ತೊಡಗಿರುವುದರಿಂದ ಸಾಲ ಸೌಲಭ್ಯ ಮತ್ತು ವ್ಯಾಪಾರದ ಪರವಾನಗಿ ಪತ್ರ ನೀಡುವುದು.

ಶೈಕ್ಷಣಿಕ ಮಹತ್ವ ತಿಳಿಸುವುದರ ಜೊತೆಗೆ ಬಾಲ ಕಾರ್ಮಿಕರಾಗದಂತೆ ಮತ್ತು ಚಿಕ್ಕವಯಸ್ಸಿನ ವಿವಾಹಗಳನ್ನು ತಡೆಯಬಹುದು.

ಶಿಕ್ಷಣದ ಅರಿವಿನೊಂದಿಗೆ ಸಮುದಾಯದ ಸಂಘಟನೆ ಮತ್ತು ಹಕ್ಕುಗಳ ಕುರಿತು ತಿಳುವಳಿಕೆ ಮತ್ತು ಹೋರಾಟದ ಅಗತ್ಯತೆ ಇದೆ.

ಸಮುದಾಯದ ಚಾರಿತ್ರಿಕ ಹಿನ್ನೆಲೆಯನ್ನು ಅರಿಯದ ಇವರಿಗೆ ಸಮುದಾಯ ಪ್ರಜ್ಞೆಯ ಮೂಡಿಸುವ ಅಗತ್ಯತೆ ಇದೆ.

ಪಾರಂಪರಿಕ ವೃತ್ತಿಗಳು ಮಾನ್ಯತೆ ಕಳೆದುಕೊಂಡಿರುವುದರಿಂದ ಪರ್ಯಾಯ ವೃತ್ತಿಗಳ ಕಡೆ ಮುಖಮಾಡಬೇಕು.

ಹಂದಿ ಸಾಕಾಣಿಕೆ ವೃತ್ತಿಯಲ್ಲಿ ತೊಡಗಿರುವುದರಿಂದ ಈ ವೃತ್ತಿಯನ್ನು ಉದ್ಯಮವಾಗಿಸಿಕೊಳ್ಳಲು ಆರ್ಥಿಕ ನೆರವಿನ ಯೋಜನೆಗಳನ್ನು ನೀಡಬೇಕಾಗಿದೆ.

ಮತ ಹಾಕಲು ಮಾತ್ರ ಮತದಾನದ ಚೀಟಿ ಪಡೆದಿರುವ ಇವರು ಚುನಾವಣೆಯಲ್ಲಿ ಸ್ಪರ್ಧಿಸುವುದರೊಂದಿಗೆ ರಾಜಕಾರಣದ ಹಿನ್ನೆಲೆಯಲ್ಲಿ ಭದ್ರತೆಯ ಜೀವನ ಕಂಡುಕೊಳ್ಳಬಹುದಾಗಿದೆ.

ಕಡಿಮೆ ಜನಸಂಖ್ಯೆ ಹೊಂದಿರುವ ಇವರಿಗೆ ವಿಶೇಷ ಮೀಸಲಾತಿ ನೀಡುವುದರ ಮೂಲಕ ಅಭಿವೃದ್ಧಿಯೆಡೆಗೆ ಕೊಂಡೊಯ್ಯಬೇಕಾಗಿದೆ.

ಯಾವುದೇ ಮೀಸಲಾತಿ ಪಟ್ಟಿಯಲ್ಲಿದ್ದರೂ ಸ್ಪರ್ಧಾತ್ಮಕ ಯುಗವಾಗಿರುವುದರಿಂದ ಜಾಗತೀಕರಣದ ಸವಾಲುಗಳನ್ನು ಮೆಟ್ಟಿ ನಿಲ್ಲುವ ಮಾನಸಿಕ ಸಾಮರ್ಥ್ಯ ಮತ್ತು ಬೌದ್ಧಿಕತೆಗೆ ಶಿಕ್ಷಣದ ಮೊರೆಹೋಗಬೇಕಾಗಿದೆ.

ಆರೋಗ್ಯ ಮತ್ತು ನೈರ್ಮಲ್ಯದ ಕುರಿತು ತಿಳುವಳಿಕೆ ಮೂಡಿಸುವುದರಿಂದ ಆರೋಗ್ಯ ಸಂಬಂಧಿ ಸಮಸ್ಯೆಗಳನ್ನು ತಡೆಯಬಹುದು.

ಕೊಳಚೆ ಪ್ರದೇಶಗಳಲ್ಲಿ ವಾಸಿಸುವ ಇವರ ನೆಲೆಗಳನ್ನು ಬೇರೆಡೆ ನಿಯೋಜಿಸಿ ಮೂಲಭೂತ ಅವಶ್ಯಕತೆಗಳನ್ನು ಒದಗಿಸುವುದರಿಂದ ಕೊಂಚ ಮಟ್ಟಿಗೆ ಇವರ ಬದುಕನ್ನು ಸುಧಾರಿಸಬಹುದು.

ಬೇಟೆ ಸಂಸ್ಕೃತಿಯಿಂದ ಪಡೆಯುತ್ತಿದ್ದ ಸತ್ವಯುತ ಆಹಾರ ಕ್ರಮದಿಂದ ಇಂದಿನ ಹೈಬ್ರಿಡ್ ತಳಿಯ ಆಹಾರಕ್ಕೆ ತಂದು ನಿಲ್ಲಿಸಿರುವುದರಿಂದ ದೈಹಿಕವಾಗಿ ಕುಗ್ಗುತ್ತಿರುವ ಇವರಿಗೆ ದುಃಶ್ಚಟಗಳಿಗೆ ಬಲಿಯಾಗುತ್ತಿರುವುದನ್ನು ತಡೆಯಲು ಮನಃ ಪರಿವರ್ತನೆ ಮಾಡುವ ಅಗತ್ಯತೆ ಇದೆ.

ಕ್ಷೇತ್ರಕಾರ್ಯ ಆಧಾರಿತವಾದ ಮತ್ತು ಸಮಾಜ ಮುಖಿಯಾದ ಯೋಜನೆಗಳು ಜಾರಿಯಾಗಿ ಇಂತಹ ಸಮುದಾಯಗಳನ್ನು ಕೇಂದ್ರೀಕರಿಸಬೇಕಾಗಿದೆ.

ಸಮುದಾಯ ಭವನಗಳನ್ನು ನಿರ್ಮಿಸುವುದರ ಮೂಲಕ ಸಮುದಾಯಗಳ ಸಮಸ್ಯೆ ಮತ್ತು ಸವಾಲುಗಳನ್ನು ಕುರಿತು ಚರ್ಚಿಸಲು ನಿಗದಿತವಾದ ಸ್ಥಳ

ದೊರೆತಂತಾಗುವುದು, ಇದರ ಜೊತೆಗೆ ಗ್ರಂಥಾಲಯಗಳ ಸ್ಥಾಪನೆಯಿಂದ ಇವರ ಬೌದ್ಧಿಕ ಮಟ್ಟವನ್ನು ವಿಸ್ತರಿಸಿ ಸ್ಪರ್ಧಾತ್ಮಕ ಯುಗದೊಂದಿಗೆ ಹೊಂದಿಕೊಳ್ಳಲು ನೆರವಾಗುವುದು. ಪಾರಂಪರಿಕ ವೃತ್ತಿಗಳು ಅಸ್ತಿತ್ವ ಕಳೆದುಕೊಂಡಿದ್ದು, ಬಂಡವಾಳದ ಕೊರತೆ ಇರುವುದರಿಂದ ಗುಡಿ ಕೈಗಾರಿಕೆಗಳ ಕೌಶಲ್ಯ ತರಬೇತಿ ನೀಡುವುದು ಉತ್ತಮವಾಗಬಹುದು.

ಕರ್ನಾಟಕದಲ್ಲಿ ಕರ್‌ಕರ್ ಮುಂಡ ಸಮುದಾಯದ ಕುರಿತಾದ ಈ ಅಧ್ಯಯನವು ಗುರುತಿಸಿರುವ ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಆರ್ಥಿಕ ಸಮಸ್ಯೆಗಳನ್ನು ಈ ಮೇಲ್ಕಂಡ ಸಲಹೆಗಳನ್ನು ಆಧರಿಸಿ ಪರಿಹಾರ ಕಲ್ಪಿಸಲು, ಸಮುದಾಯಗಳು, ಸರ್ಕಾರ, ಸಂಘ-ಸಂಸ್ಥೆಗಳು ಮಾನವೀಯ ನೆಲೆಯಲ್ಲಿ ಚಿಂತಿಸಿ ಅಭಿವೃದ್ಧಿಗೆ ಶ್ರಮಿಸುವ ಅಗತ್ಯತೆ ಅನಿವಾರ್ಯವಾಗಿದೆ.

**ಮುಂದಿನ ಅಧ್ಯಯನದ ಸಾಧ್ಯತೆಗಳು**

ಕರ್ನಾಟಕವನ್ನು ಕೇಂದ್ರಿಕರಿಸಿ ಕರ್‌ಕರ್ ಮುಂಡರ ಸಾಮಾಜಿಕ ಅಧ್ಯಯನ ಎಂಬ ಶೀರ್ಷಿಕೆ ಅಡಿಯಲ್ಲಿ ಸಮಾಜಶಾಸ್ತ್ರೀಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಇದೇ ಸಮುದಾಯವನ್ನು ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕವಾಗಿ ಹಾಗೂ ಮಾನವಶಾಸ್ತ್ರೀಯ ಹಿನ್ನೆಲೆಯಲ್ಲಿ ಇನ್ನು ಹೆಚ್ಚಿನ ಅಧ್ಯಯನ ಮಾಡಬಹುದಾಗಿದೆ. ಇದುವರೆಗೂ ಗುರುತಿಸದೆ ಅವಜ್ಞೆಗೆ ಒಳಗಾಗಿದ್ದ ಕರ್‌ಕರ್ ಮುಂಡರ ಕುರಿತಾಗಿ ನಡೆದ ಸಂಶೋಧನೆ ಮೊದಲನೆಯದ್ದಾಗಿದೆ. ಮೊದಲ ಪ್ರಯತ್ನದಲ್ಲಿ ಸ್ಪರ್ಷಿಸಲಾಗದ ತೆರೆಮರೆಯಲ್ಲಿರುವ ಸಾಂಸ್ಕೃತಿಕ ಅಂಶಗಳನ್ನು ಆಸಕ್ತ ಅಧ್ಯಯನಕಾರರು ಹೆಚ್ಚಿನ ಅಧ್ಯಯನ ಮಾಡಬಹುದಾಗಿದೆ. ಒಟ್ಟಿನಲ್ಲಿ ಕರ್‌ಕರ್ ಮುಂಡರ ಅಧ್ಯಯನವು ನನ್ನ ಅಧ್ಯಯನ ಮಿತಿಯಲ್ಲಿ ಸಮುದಾಯದ ಅನಾವರಣ ಮತ್ತು ಅಭಿವೃದ್ಧಿಯ ಹಿನ್ನೆಲೆಯಲ್ಲಿ ಸಮಾಜ ಮುಖಿಯಾಗಲೆಂಬ ಆಶಯದೊಂದಿಗೆ ಈ ಸಂಶೋಧನಾ ಚಟುವಟಿಕೆಯನ್ನು ಕೈಗೊಳ್ಳಲಾಗಿದೆ.

ಸಂಶೋಧನೆಯು ನಿರಂತರ ಪ್ರಕ್ರಿಯೆಯಾಗಿದ್ದು ಅದು ಸಮುದಾಯದ ಸ್ಥಿತ್ಯಂತರಗಳೊಂದಿಗೆ ಸಾಗುವಂತಾಗಬೇಕು. ಇದುವರೆಗೂ ಸಂಶೋಧಕರಿಗೆ ನಿಲುಕದೇ ನೆಲೆನಿಂತ ಜಗತ್ತಿನ ನಡುವೆ ಇದ್ದರೂ ವಾಸ್ತವ ಬದುಕನ್ನು ಕಟ್ಟಿಕೊಳ್ಳಲಾಗದ ಈ ಅಲೆಮಾರಿ ಸಮುದಾಯದ ಚಹರೆ ಮತ್ತು ಸಂಸ್ಕೃತಿಯ ಸ್ಥಿತ್ಯಂತರವನ್ನು ಕಟ್ಟಿಕೊಡುವ

ಪ್ರಯತ್ನ ಮಾಡಲಾಗಿದೆ. ಇದೇ ಅಂತಿಮವಲ್ಲ ನಾನು ಇಲ್ಲಿ ನೀಡಿರುವ ಕೆಲವು ಸುಳಿವುಗಳು ಮುಂದೆ ವಿಭಿನ್ನ ದೃಷ್ಟಿಕೋನಗಳಿಂದ ನಡೆಯಬಹುದಾದ ಅಧ್ಯಯನಗಳಿಗೆ ಪೂರಕವಾಗಬಲ್ಲದು ಎಂಬ ಶೈಕ್ಷಣಿಕ ಉದ್ದೇಶದಿಂದ ಅಧ್ಯಯನಗೊಂಡಿದ್ದರೂ ಸಮುದಾಯದ ಪರವಾದ ಸಾಮಾಜಿಕ ಆಶಯಗಳಿಂದ ಈ ಮಹಾಪ್ರಬಂಧವನ್ನು ರೂಪಿಸಲಾಗಿದೆ.

# ಅನುಬಂಧಗಳು

ಬೇಡಸಮುದಾಯದ ಬೆಡಗುಗಳು
ಅಯ್ಯಂಗಾರ್ ವರದಿ(೧೯೪೯-೫೦)
ಪರಾಮರ್ಶನ ಗ್ರಂಥಗಳು
ವಕ್ತೃಗಳ ವಿವರ
ಪ್ರಶ್ನಾವಳಿ
ಕೋಷ್ಟಕದ ವಿವರ
ಛಾಯಾಚಿತ್ರಗಳು

## ಬೇಡ ಸಮುದಾಯದ ಬೆಡಗುಗಳು

### ಸೂರ್ಯವಂಶದವರು

**ಸಹಕೇತು ಗೋತ್ರ :** (ಪ್ರಥಮ ಭಾಗ) ಇದರಲ್ಲಿ ಇಂದ್ರ ಸೂತ್ರ ಶಾಖೆಗಳ ಪ್ರಕರಾ ಮೂರು ಬೆಡಗುಗಳು ಇರತ್ತವೆ. ೧. ಸಾಕೇಲವರು ೨. ಶೆಟ್ಟಿಲವರು ೩. ಪಾಮಡ್ಲವರು.

**ದೇವರು :** ದಾರು ಮಾದಲಿಂಗ ಪೆಟ್ಟಿಗೆ.

**ಸ್ಥಳ :** ಇವರು ಅಯೋಧ್ಯಾ ದೇಶದ ರಾಜವಂಶಸ್ಥರು.

**ಸಹಕೆತು ಗೋತ್ರ :** (ದ್ವಿತೀಯಭಾಗ) ಸನಾತನ ಸೂತ್ರ ಶಾಖೆಗಳ ಪ್ರಕಾರ ಇದರಲ್ಲಿ ಮೂರು ಬೆಡಗುಗಳು ಇರುತ್ತವೆ. ೪. ತೇರು ಸಾಮಂತರು, ೫. ಸಾರ್ಜರು, ೬. ಸಾತ್ವಿಕರು.

**ದೇವರು :** ದಾರು ಮಾದಲಿಂಗ ಪೆಟ್ಟಿಗೆ.

**ಸ್ಥಳ :** ಇವರು ಸಿಂಹಳ ದೇಶದ ಅರಸುಮಕ್ಕಳು

**ಕಂಕಾಳ ಸಹಕೇತು ಗೋತ್ರ :** ಕಲ್ಮಷಸೂತ್ರ ಶಾಖೆಗಳು ಪ್ರಕಾರ ಇದರಲ್ಲಿ ಮೂರು ಬೆಡಗುಗಳು ಇರುತ್ತವೆ. ೭. ಕಿರಾತರು, ೮. ಕಲ್ಮಷರು, ೯. ಕಾಡುಚರರು.

**ದೇವರು :** ದಾರುಲಿಂಗ ಪೆಟ್ಟಿಗೆ ದೇವರು.

**ಸ್ಥಳ :** ಇವರು ಕಿರಾತ ದೇಶದ ವಂಶಜರು.

**ಕುರಂಗ ಸಹಕೇತು ಗೋತ್ರ :** ಇಂದ್ರ ಸೂತ್ರ ಶಾಖೆಗಳ ಪ್ರಕಾರ ಇದಲ್ಲಿಯೂ ಮೂರು ಬೆಡಗುಗಳು ಬರುತತ್ತವೆ. ೧೦. ಕುಳಿಂದರು, ೧೧. ಉರಿಸಿಂಗರು, ೧೨. ಕುರುಂಜರು.

**ದೇವರು :** ಭೂದೇವಿರಾಜರ ಪೆಟ್ಟಿಗೆ ದೇವರು.

**ಸ್ಥಳ :** ಇವರು ಕುರು ಕುರುದೇಶದ ರಾಜವಂಶದವರು ಇರುತ್ತಾರೆ.

**ಕಿನ್ನರ ಗೋತ್ರ :** ಕಿಲ್ಬಿಷ ಸೂತ್ರ ಶಾಖೆಗಳ ಪ್ರಕಾರ ಇದರಲ್ಲಿ ಮೂರು ಬೆಡಗುಗಳು ಇರುತ್ತವೆ. ೧೩. ಕಂಕುಲದವರು, ೧೪. ಕಿನ್ನರರು, ೧೫. ಕಿಲ್ಬಿಷರು.

**ದೇವರು :** ವೃಷಭರಾಜರ ಪೆಟ್ಟಿಗೆ ದೇವರು

**ಸ್ಥಳ :** ಇವರು ಕಳಿಂಗ ರಾಜವಂಶದವರು.

ಭೂಚಕ್ರಗೋತ್ರ : ಭೋಜಕ ಸೂತ್ರ ಶಾಖೆಗಳ ಪ್ರಕಾರ ಇದರಲ್ಲೂ ಹನ್ನೆರಡು ಬೆಡಗುಗಳು ಇರುತ್ತವೆ. ೧೬ ರಾಜ ಬುಡಕಲು ೧೭, ರಾಜಧಾನಿಯವರು, ೧೮. ರಾಘವಬುಟಕಲು, ೧೯. ದೇವಲವರು, ೨೦. ಕಲಶದವರು, ೨೧. ಸಿದ್ಧಕಲ್ಲು ಬುಟಕಲು, ೨೨. ಅಕ್ಕಲೋರ, ೨೩. ಮಾರಪ್ಪ ಬುಟಕಲು, ೨೬. ಮಾಚಿಕಲ್ಲು ಬುಟಕಲು, ೨೭. ಅಲಕತ್ತು ಬುಟಕಲು, ೨೮. ಕುರಹಟ್ಟಿ ಬುಟಕಲು.

**ದೇವರು :** ಸೂರೇ ರಾಜರ ಪೆಟ್ಟಿಗೆ ದೇವರು.

ಅಗಸ್ತ್ಯಗೋತ್ತ : ಅರ್ಕಸೂತ್ರ ಶಾಖೆಗಳ ಪ್ರಕಾರ ಇದರಲ್ಲಿ ಮೂರು ಬೆಡಗುಗಳು ಇರುತ್ತವೆ. ೨೯. ಅಂಕೇಲವರು, ೩೦. ಅಜ್ಜಮುತ್ತಿಯವರು, ೩೧. ಶಲ್ಯದವರು.

**ದೇವರು :** ಭಾನುಕೋಟಿ ಪೋತರಾಜರ ಪೆಟ್ಟಿಗೆ ದೇವರು.

**ಸ್ಥಳ :** ಇವರು ಗಾಂಧಾರ ದೇಶದ ರಾಜವಂಶಸ್ಥರು.

ರಾಧಾಕೃಷ್ಣ ವಿಠ್ಠಲಗೋತ್ರ : ರಾಮೇಶ್ವರ ಯಾತ್ರೆಯೇ ಸೂತ್ರ. ಇದರಲ್ಲಿ ಮೂರು ಬೆಡಗುಗಳು ಇರುತ್ತವೆ. ೩೨. ರಘೋಜಿಯವರು, ೩೩. ರಂಗಾಶ್ಯರು, ೩೪. ರಾಜಪುತ್ರರು.

**ದೇವರು :** ಕೃಷ್ಣರಾಜರ ಪೆಟ್ಟಿಗೆ ದೇವರು.

**ಸ್ಥಳ :** ಮಹಾರಾಷ್ಟ್ರ ದೇಶಾಧಿಪತಿ ವಂಶದವರು.

ಕೆಂಗ ಪುಟ್ಟಲ ಗೋತ್ರ : ಪಾಲಮುನಿ ಸೂತ್ರ ಶಾಖೆ ಪ್ರಕಾರ ಇದರಲ್ಲಿ ಆರು ಬೆಡಗುಗಳು ಇರುತ್ತವೆ. ೩೫. ಪುವ್ವಲವರು–ಪೂಲವರು, ಪೂಲೋರು, ಪೂಲರು, ೩೬. ಮಲ್ಲೇಲವರು, ೩೭. ಪಾಮಲವರು, ೩೮. ಗೋವಿನವರು, ೩೯. ಗೋಪಾಲಪಾತರು, ೪೦. ಮಸಗೇಲವರು.

**ದೇವರು :** ಕಂಪಳಕ್ಕೆ ಒಲಿದ ಕಾಟಮಹಾರಾಜರ ಪೆಟ್ಟಿಗೆ ದೇವರು.

**ಸ್ಥಳ :** ಹಂಪೆ, ತರೀಕೆರೆ ದೊರೆಗಳ ಸಂತತಿಯವರು.

ಪುಟ್ಟಿಲ ಗೋತ್ರ : ಕಾಶಿ ಸೂತ್ರ ಶಾಖೆಗಳ ಪ್ರಕಾರ ಇದರಲ್ಲಿ ನಾಲ್ಕು ಬೆಡಗುಗಳು ಇರುತ್ತವೆ.

೪೧. ಚಿನ್ನಮಾಲಗೆಲವರು–ಚಿನ್ನಮಾಗಲಾ, ಚಿನ್ನಮಗಳು, ಚಿನ್ನಮ ಕೋಲಾ, ೪೨. ಮಾಗೇಲವರು–ಮಾಗೇಲರು, ಮಾಗಲವರು, ೪೩. ಬಳ್ಯನವರು, ಬಳ್ಳೇಲವರು, ೪೪. ಭೀಷ್ಮಪಂಚಕದವರು.

**ದೇವರು** : ಭಾನುಕೋಟಿ ಹೋತರಾಜರ ಪೆಟ್ಟಿಗೆ ದೇವರು.

**ಸ್ಥಳ** : ವಿದರ್ಭದೇಶದ ರಾಜವಂಶರು.

ವಿಠ್ಠಲ ಪಂಡಿತ ಗೋತ್ರ : ವಿಪಿನ ಸಂಚಾರ ಸೂತ್ರ ಶಾಖೆಗಳ ಪ್ರಕಾರ ಇದರಲ್ಲಿ ನಾಲ್ಕು ಬಿಡಗುಗಳು ಬರುತತ್ತವೆ. ೪೫. ಆನಂದರು, ೪೬. ಭಿಲ್ಲರು–ಭಿಲ್ಲರ್, ೪೭. ಗಾಕಣ್ಣನವರು, ೪೮. ಲಕ್ಷೇಲವರು–ಲಕ್ಷ್ಮೈಲವರು, ಲಕ್ಷ್ಮೇರು.

**ದೇವರು** : ಭಾನುಕೋಟಿ ಹೋತರಾಜರ ಪೆಟ್ಟಿಗೆ ದೇವರು

**ಸ್ಥಳ** : ಇವರೂ ಕೂಡಾ ವಿದರ್ಭದೇಶದ ರಾಜವಂಶಜರು.

ರಾಜಶೃಂಗಗೋತ್ರ : ಭೈರ ಸೂತ್ರ ಶಾಖೆಗಳ ಪ್ರಕಾರ ಇದರಲ್ಲಿ ಮೂರು ಬೆಡಗುಗಳು ಬರುತ್ತವೆ. ೪೯. ರಾಮಾಂಕನಾಥರು ೫೦. ಭಟಜನಾಥರು, ೫೧. ಗಂಗಾನಾಥರು

**ದೇವರು** : ಭಾನುಕೋಟಿ–ಹೋತರಾಜರ ಪೆಟ್ಟಿಗೆ ದೇವರು.

**ಸ್ಥಳ** : ಪರಶುರಾಮರ ಹಾವಳಿಯಲ್ಲಿ ಮಾಳವ ದೇಶಕ್ಕೆ ಬಂದು ಸೇರಿದ ಕ್ಷತ್ರಿಯ ವಂಶದವರು.

**ಸೂರ್ಯಗೋತ್ರ** : ಅರ್ಕಸೂತ್ರ ಶಾಖೆಗಳ ಪ್ರಕಾರ ಇದರಲ್ಲಿ ಇಪ್ಪತ್ತಾರು ಬೆಡಗುಗಳು ಬರುತ್ತವೆ. ೫೨. ಎನುಮಲೋರು–ಎನುಮ್ಲಾರು, ಎಮ್ಮೆಯವರು, ಎನುಮಲು, ೫೩. ತಮಲ ಮುತ್ತೇರು, ೫೪. ಬಿಲ್ಲಿನ ಸೂರೇರು–ಭಿಲ್ಲಿನ ಸುಳ್ವೆರು, ೫೫. ಯರಕಾಟನಾಯಕರು, ೫೬. ಬಾಲನಾಯಕರು, ೫೭. ಯರಬಾಲನಾಯಕರು, ೫೮. ಓಬನಾಯಕರು, ೫೯. ಬೋಸಿ ನಾಯಕರು–ಬೋಸಿವೋರು, ಭೋಸುರ್ಲು, ಭೋಸನರು, ೬೦. ಪೆದ್ದಳ್ಳ ನಾಯಕರು–ಪೆದ್ದ ನಾಯಕನೋರು, ೬೧. ಚಿಟಗಾಟ ನಾಯಕರು, ೬೨. ಅರಕೋರು, ೬೩. ಅಜ್ಜ ಪಲ್ಲೋರು, ೬೪. ಯದ್ದಲೋರು–ಎದ್ದಲೋರು ಎದ್ದಲದವರು, ೬೫. ಪೆಯ್ಯಲವರು–ಪಯ್ಯಾಲಾ, ೬೬. ಗೌರ್ ಪೋರು, ೬೭. ನಾರಪೋರು, ೬೮. ದೇವಡಲೋರು–ದ್ಯಾವರಲೋರು, ದ್ಯಾವಲೋರು, ದೇವಲದವರು, ದೇವಲವರು, ೬೯. ಬೊಮ್ಮದೇವಡ್ಲ ನಾಯಕರು–ಬೊಮ್ಮದೇವರು, ೭೦. ಯಾಕಲೋರು,

೭೧. ಯರ್ರಪೋತಲೋನು, ೭೫. ಗಂಗೆನಾಯ್ಕ ಪೆನ್ನಯ್ಯಲೋನು, ೭೬. ಚಿನ್ನಗಟ್ಲೋನು, ಚಿನ್ನಗಟ್ಲೋರು, ೭೭. ತೊಡಲವನು.

**ದೇವರು** : ಅಜ್ಜಮಲ್ಲನಾಯಕನ ಬೊಮ್ಮದೇವರು.

**ಸ್ಥಳ** : ಜಗಳೂರು, ನಾಯಕನಹಟ್ಟಿ, ನನ್ನಿವಾಳ ಹಾಗೂ ಗೋನೂರು ಸ್ಥಳದವರು.

**ಚಂದ್ರವಂಶದವರು**

ಮಹಿಪರಿ ಗೋತ್ರ : ಮನುಮುನಿ ಸೂತ್ರಗಳ ಶಾಖೆ ಪ್ರಕಾರ ಇದರಲ್ಲಿ ಹದಿನೆಂಟು ಬೆಡಗುಗಳು ಇರುತ್ತವೆ. ೭೮. ಮಂದಲವರು, ಮಂದಾರು, ಮಂದಲೋರು, ಮಂದ್ಲೋರು, ಮುಂದೆಯವರು, ೭೯. ಕಾಮಗೇತಲವರು, ಕಾಮಕೆತಲವರು, ಕಾಮಗೇತಲು, ೮೦. ಲಿಂಗದವರು, ೮೧. ಸಂನಲವರು, ೮೨. ಮುಗಲವರು, ೮೩. ಪರಮಶಿವಲವರು, ೮೪. ಪಡ್ಡಲವರು, ಪಡಲವರು, ೮೫. ಕಾಮಲವರು–ಕಾಮನವರು, ೮೬. ಗೋಪನವರು ೮೭. ಯಮಡಲವರು, ೮೮. ಪಾವಕನವರು–ಪಾವಕಲವರು, ೮೯. ಗಡ್ಡದವರು, ೯೦. ಗಫ್ಪಡಲವರು–ಗಗ್ಗಡವರು, ೯೧. ಡಿಚ್ಚಿಟ್ಲವರು, ೯೨. ಮಾದಲವರು, ೯೩. ಬುಲ್ಲಡವರು ಉಪಶಾಖೆಗಳು–ಬುಲ್ಲಡಲು, ಭುಲ್ಲನವರು, ೯೪. ನಲಕೇತವರು, ೯೫. ಗಜ್ಜಲವರ–ಗಜ್ಜಾಲಾ.

**ದೇವರು** : ಲಕ್ಷ್ಮಿ ದೇವಿ ಹಿರೇರಾಜರ ಪೆಟ್ಟಿಗೆ ದೇವರು. ಓಬಳ ದೇವರು, ಸೂರೇದೇವರು, ಶ್ರೀರಂಗನಾಥ ದೇವರು.

**ಸ್ಥಳ** : ಇವರು ಹಸ್ತಿನಾವತಿ, ಆನೆಗೊಂದಿ ಹಾಗೂ ಚಿತ್ರದುರ್ಗದ ರಾಜವಂಶಸ್ಥರು.

**ಮತ್ಸ್ಯ ಋಷಿಗೋತ್ರ** : (ಪ್ರಥಮ ಭಾಗ) ಇದರಲ್ಲಿ ಗಾರ್ಗೇಯ ಸೂತ್ರ ಶಾಖೆಗಳ ಪ್ರಕಾರ ಹನ್ನೊಂದು ಬೆಡಗುಗಳು ಇರುತ್ತವೆ. ೯೬. ಬಳ್ಳಿಗಾರು–ಬಳ್ಳಿಗರು, ೯೭. ನಗರಾಂತಕರು, ೯೮. ಕವಾರಿಕಾರರು, ೯೯. ಗುಮ್ಮಟದವರು, ೧೦೦. ಗೊಲ್ಲಾಳರು, ೧೦೧. ಗೆದ್ದಲವರು, ೧೦೨. ಹೊಲ್ಲೆಪೂರಲವರು, ೧೦೩. ಮಿಳ್ಳೆಲವರು ೧೦೪. ಸೆಲ್ಲೇಲವರು, ಸೆಲ್ಲೆದವರು, ಸೆಲ್ಲೆಲ್ಲಾರು, ೧೦೫. ಬೊಗ್ಗೇ ಅವರು, ಬೊಗ್ಗೋಳ್ಳು, ೧೦೬. ಗೋಸಲವರು, ಗೋಸಲಿ–ಗೊಸ್ಲರು, ೧೦೭. ಮುದಗಂಟವರು.

**ದೇವರು** : ಬಂಗಾರ ಬೊಮ್ಮರಾಜ ಪೆಟ್ಟಿಗೆ ದೇವರು. ಓಬಳ ದೇವರು, ಪೆನ್ನೋಬಳ ದೇವರು.

**ಸ್ಥಳ** : ಇವರು ಗುರ್ಜರ ದೇಶದ ದೊರೆಗಳ ಸಂತತಿಗೆ ಸೇರಿದವರು.

**ಕೂಷ್ಮಾಂಡ ಋಷಿಗೋತ್ರ** : ಕುರುವಂತ ಸೂತ್ರ ಶಾಖೆಗಳ ಪ್ರಕಾರ ಇದರಲ್ಲಿ ಎಂಟು ಬೆಡಗುಗಳು ಇರುತ್ತವೆ. ೧೦೮. ಕುರುವಂತದವರು, ೧೦೯. ಕುಂತಳದವರು, ೧೧೦. ಕುಂಬಳದವರು, ೧೧೧. ಕತ್ತಿಯವರು, ೧೧೨. ಕಠಾರಿಯವರು ೧೧೩. ಈಟಿಯವರು. ೧೧೪. ಬುಂದೇಲವರು, ೧೧೫. ವೋತಲವರು.

**ದೇವರು** : ದಾರುಮಾದಲಿಂಗ ಪೆಟ್ಟಿಗೆ ದೇವರು.

**ಸ್ಥಳ** : ಬರ್ಬರ ದೇಶಾಧಿಪತಿ ವಂಶದವರು.

ರಾಜ ಮಹಾ ಕೇತುಗೋತ್ರ : ಆದಿಶಂಕರ ಸೂತ್ರ ಶಾಖೆಗಳ ಪ್ರಾಕರ ಇದರಲ್ಲಿ ನಾಲ್ಕು ಬೆಡಗುಗಳು ಇರುತ್ತವೆ. ೧೧೬. ಕುರಿಯವರು, ಕುರುಬಲು, ಕುರುಬನರು, ಕುರುಬ್ಲಾರು, ಕುರಿಯರು, ೧೧೭. ರಾಜೀಲವರು, ರಾಜೀಲರು, ೧೧೮. ರಾಣಿವೆಯವರು, ೧೧೯. ಕನ್ನೆಲೋರು.

**ದೇವರು** : ಬಂಗಾರದ ಬೊಮ್ಮರಾಜರ ಪೆಟ್ಟಿಗೆ ದೇವರು.

**ಸ್ಥಳ** : ಕೊಂಕಣ ದೇಶಾಧಿಪರ ವಂಶಜರು.

ವಿಷ್ಣುಗೋತತ್ರ : ಭಜಗೋವಿಂದ ಸೂತ್ರ ಶಾಖೆಗಳ ಪ್ರಕಾರ ಇದರಲ್ಲಿ ಮೂರು ಬೆಡಗುಗಳು ಇರುತ್ತವೆ. ೧೨೦. ಬಸವನವರು, ೧೨೧. ಭಾರಿ ಮಂಡಲೀಕರು, ೧೨೨. ಭಲ್ಲೇದವರು.

**ದೇವರು** : ಸೂರ್ಯರಾಜರ ಪೆಟ್ಟಿಗೆ ದೇವರು.

**ಸ್ಥಳ** : ಬಂಗಾಳ ದೇಶದ ರಾಜವಂಶಸ್ಥರು.

ಪಾರ್ವತಿಗೋತತ್ರ : ಪಾಲಮುನಿ ಸೂತ್ರ ಶಾಖೆಗಳ ಪ್ರಾಕರ ಇದರಲ್ಲಿ ಎರಡು ಬೆಡಗುಗಳು ಇರುತ್ತವೆ. ೧೨೩.ನಾಗರಸರು, ೧೨೪. ಲಕ್ಷ್ಮೀಲವರು.

**ದೇವರು** : ಭಾನುಕೋಟಿ ಪೋತರಾಜರ ಪೆಟ್ಟಿಗೆ ದೇವರು.

**ಸ್ಥಳ** : ಇವರು ಕೋಸಲದೇಶದ ವಂಶಸ್ಥರು.

**ಮತ್ಸ್ಯ ಋಷಿಗೋತ್ರ :** (ದ್ವಿತೀಯ ಭಾಗ) ಆದಿವಿಷ್ಣು ಸೂತ್ರ ಶಾಖೆಗಳ ಪ್ರಾಕರ ಇದರಲ್ಲಿ ಮೂರು ಬೆಡಗುಗಳು ಬರುತ್ತವೆ. ೧೨೫. ಕೌಲವರು-ಕೌಲರು, ೧೨೬. ಕನ್ನೇಲವರು, ೧೨೭. ಕಾಳಗದವರು.

**ಮತ್ಸ್ಯ ಋಷಿಗೋತ್ರ :** (ತೃತೀಯ ಭಾಗ) ಮಾರ್ಕಂಡ ಸೂತ್ರ ಶಾಖೆಗಳ ಪ್ರಕಾರ ಇದರಲ್ಲಿ ಮೂರು ಬೆಡಗುಗಳು ಇರುತ್ತವೆ. ೧೨೮. ಸಾಮುದ್ರದವರು, ೧೨೯. ಹರಿಬಲ್ಲಾಳರು, ೧೩೦. ಸಾಗರ ಚಕ್ರವರ್ತಿಗಳು.

**ದೇವರು :** ಬಂಗಾರ ವರ್ಣದ ಜಡೆಗಳ ಲಿಂಗರಾಜರ ಪೆಟ್ಟಿಗೆ ದೇವರು.

**ಸ್ಥಳ :** ಇವರು ಮತ್ಸ್ಯ ದೇಶದ ರಾಜವಂಶಸ್ಥರು, ಹಿಂದಿನ ರಾಜಸ್ಥಾನದಲ್ಲಿದ್ದರು.

ಮತ್ಸ್ಯಋಷಿ ಗೋತ್ರ : (ಚತುರ್ಥ ಭಾಗ) ಬ್ರಹ್ಮ ಸೂತ್ರ ಶಾಖೆಗಳ ಪ್ರಕಾರ ಇದರಲ್ಲಿಯೂ ಮೂರು ಬೆಡಗುಗಳು ಇರುತ್ತವೆ. ೧೩೧. ಮುಚ್ಚಲವರು, ಮುಚ್ಚಳವರು, ಮುಚ್ಚಲರು, ಮುಚ್ಚಾಲ, ಮುಚ್ಚೇಲೇರು, ಮಚ್ಚೆಲೋರು, ೧೩೨. ಮಿನಗಲವರು, ಮಿನಗಲರ, ಮಿನುಗಲಾ, ೧೩೩. ಮಳ್ಳೇಲವರು, ಮಳೇಲೋರು, ಮಳೇಲಾರ, ಮಳೇಲೇರ, ಮಳೇನೋರು, ಮಳೇಲು,

## ನಕ್ಷತ್ರ ವಂಶದವರು

### ವಾಲ್ಮೀಕಿ ಋಷಿ ಗೋತ್ರ

ಆಧುನಿಕ ಸೂತ್ರದ ಪ್ರಕಾರ ಸೂರ್ಯವಂಶದಲ್ಲಿ ಹಾಗೂ ಚಂದ್ರವಂಶದಲ್ಲಿ ಭರತಕ್ಕ ಬೆಡಗುಗಳನ್ನು ಬಿಟ್ಟು ಉಳಿದೆಲ್ಲ ಬೆಡಗುಗಳು ನಕ್ಷತ್ರ ವಂಶದಲ್ಲಿ ಸಮಾವೇಶವಾಗುತ್ತವೆ. ಇದರಲ್ಲಿ ಕೆಲವು ನೂರಾರು ಬೆಡಗುಗಳು ಬರುತ್ತವೆ.

(ಎ) ೧೩೪. ಅಗಸ್ತ್ಯನವರು, ೧೩೫. ಅನಾಲರು, ೧೩೬. ಅಚರ್ಲವರು-ಅಚಲ್ಲೋರು, ೧೩೭. ಆಕ್ಲಲೂರು, ಅಕ್ಕಲೋರು, ೧೩೮. ಅವಲೋರು, ೧೩೯. ಅನಗಾಲವರು, ೧೪೦. ಅರಸು ಆನ್ಯಾನವರು, ೧೪೧. ಅನ್ಯಾನವರ್ಲು, ೧೪೨. ಅಂದರದವರು, ೧೪೩. ಅಂಗುಮೋಲರು, ೧೪೪. ಅಂತೇಲವರು, ೧೪೫. ಆಲಕೇರು ೧೪೬. ಅವತಾಡೇನವರು.

(ಬಿ) ೧೪೭. ಬರಿಪಿಲರು, ೧೪೮. ಬಡಸಲವರು, ೧೪೯. ಬಡಕಲವರು, ೧೫೦. ಬನ್ನೇಲ್ಲರು, ೧೫೧. ಬಗರಿ ಮಂಲೀಕರವರು, ೧೫೨. ಭಾಸಲವರು-ಭಾಸಕಲವರು, ಭಾಸಲದವರು, ೧೫೩. ಭಾನೂರವರು, ೧೫೪. ಬಾನೂರು, ೧೫೫.

ಬಿದ್ದಲೋರು-ಬಿದ್ದುಡ್ಲಾ, ೧೬೧. ಬುಟುಕಲವರು-ಬುಟುಕಲೋರು, ಬುಟುಕಲಾ, ಬುಟ್ಟಿಗಲರು. ೧೬೨. ಭುಲ್ಲನವರು ೧೬೩. ಬುಡ್ಲುಬಾರನವರು, ಬುಡ್ಲುಬೋರನ್ನರು. ೧೬೪. ಬೂಚಕ್ರ ೧೬೫. ಬೆಲ್ಲೋಲರು. ೧೬೬. ಬೆಳ್ಳಳ್ಳಿಯವರು. ೧೬೭. ಬೆಳ್ಳೇರು-ಬೆಳ್ಳಿಯವರು, ಬೆಳ್ಳನವರು, ಬೆಳ್ಳಾರು, ೧೬೮. ಬೆಂಡ್ಲಾರು ೧೬೯. ಬೆಂಚಲರು ೧೭೦. ಬೆನಕನವರು ೧೭೧. ಬೋಗಿ ಮೋರು ೧೭೨. ಬೋಪಿನಾಯಕರು ೧೭೩. ಬೋನಹಳ್ಳಿ ಯೂರವರು ೧೭೪. ಬೋಡ ದಾಸರು ೧೭೫. ಬೋಡಿ ಪಾಲಲು-ಬೋಡಪಾಲು ೧೭೬. ಬೋಗಿಲೋರು-ಬೋಗಿಲ್ಲರಂ ೧೭೭. ಬಂಡೆ ಬಲದವರು ೧೭೮. ಬಂಟಲವರು-ಬಂಟಲೋರು. ೧೭೯. ಬಂಡಾರದವರು. ೧೮೦. ಬಂಗಾರನೋರು. ೧೮೨. ಬಂಟರ ಮೂಲವರು ೧೮೩. ಬಿಬ್ಲರು ೧೮೪. ಭಾಸ್ಕರ ೧೮೫. ಬಾರಂಗಿಯವರು ೧೮೬. ಬೋಗಿವೋರು ೧೮೭. ಬಿಜ್ಜಡ್ಲು-ಬಿಜ್ಜಡಲು ೧೮೮. ಬಡತಳವಾರು ೧೮೯. ಭನ್ನೇನವರು ೧೯೦. ಬೆಲ್ಲದವರು ೧೯೧. ಬಂಭಲವರು. ೧೯೨. ಬಂಡ್ಯಾನವರು.

(ಸಿ) ೧೯೩. ಚನ್ನರು. ೧೯೪. ಚಕ್ರದವರು. ೧೯೫. ಚಮಲಮುತ್ತೇರು ೧೯೬. ಚಿನಗಾಟನಾಯಕರು ೧೯೭. ಚಿಕ್ಕಲವರು (ಸಿಂಧೂರ ಲಕ್ಷ್ಮಣ) ೧೯೮. ಚಿನವಾಲರು ೧೯೯. ಚಿನಮದಿಲವರು ೨೦೦. ಚಿನಕು ಮುತ್ತಿನ ಮಳೇಲು ೨೦೧. ಚಿನ್ನ ಕಾಟನೋರು-ಚೆನ್ನಕಾಟನೋರು ೨೦೨. ಚೆಡು ಬೋತಲವರು ೨೦೩. ಚೆಡ್ಡಿಬೋತಲವರು. ೨೦೪. ಚಂದ ಬಲೆನ್ನವರು-ಚಂದಬಲೇರು ೨೦೫. ಚಂಪಲರು ೨೦೬. ಚಂದ್ರನವರು ೨೦೭. ಚಂಚಲರು-ಚುಂಚಲರು, ಚಂಚುಲವರು, ಚುಂಚಲವರು ೨೦೮. ಚುಚ್ಚಕಲವರು ೨೦೯. ಚಿತ್ರಯ್ಯರು.

(ಡಿ) ೨೧೦. ದಡ್ಯಾನವರು ೨೧೧. ದಳಮಂಡಲರು ೨೧೨. ದಡ್ಡಿದಾಸರು-ದಡ್ಡಿಮುತ್ತೇರು. ೨೧೩. ದಾಸರಾಲು ೨೧೪. ದ್ವಾರಪಾಲಕರು. ೨೧೫. ಡಾಕಲವರು ೨೧೬. ದ್ವಿರಕಲ್ಲೇರು. ೨೧೭. ದೇವರಕಲಕ್ಲೇರು ೨೧೮. ದೇವರ ಕುರಿಯವರು ೨೧೯. ದೇವರೆದ್ಲಾರು ೨೨೦. ದೇವರ ಎತ್ತಿನವರು ೨೨೧. ದೊಡ್ಡ ನಾಯಕನಾರು ೨೨೨. ಡೊಣಮಂಡ್ಲುರವರು. ೨೨೩. ದೊರಿಲವರು.

(ಜಿ) ೨೨೪. ಗಡಲವರು ೨೨೫. ಗಬ್ಬೇಲವರು-ಗಬ್ಬೆಲರು, ಗೊಬ್ಬಿಲರು ೨೨೬. ಗವಲೇರು-ಗೋಲೇರು, ಗೈಲರು, ಗೋಲಾರು. ೨೨೭. ಗನ್ನೇರು-ಗನ್ನೇರ್ಲಾ, ಗಾಣರು. ೨೨೮. ಗಡ್ಡುಬಾರಿಯಾ ೨೨೯. ಗಗ್ರಿದಾಸರು. ೨೩೦. ಗಟ್ಟಿಮುತ್ತೆಯವರು ೨೩೧. ಗಜಗಡ್ಲೋರು- ಗಜುಗುಡ್ಲರು ೨೩೨. ಗಡಪ್ಪನಾರು ೨೩೩. ಗಾರಪುಲೋರು

೨೩೪. ಗಾದ್ರಪಾಲೋರು. ೨೩೫. ಗಾಲಿಯವರು ೨೩೬. ಗಾಡವುಲು-ಗಾಡನಾರು. ೨೩೭. ಗುರುಗಲವರು ೨೩೮. ಗುಡಗಲವರು-ಗುಡುಗ್ಲೇರ ೨೩೯. ಗುತಾಮು ೨೪೦. ಗುಡಿಕೊಟ್ಟುಲಾರು ೨೪೧. ಗುಲ್ಲನವರು ೨೪೨. ಗುಡ್ಡದೆದ್ಲವರು-ಗುಡ್ಡದ ಎದ್ದಲವರು ೨೪೩. ಗುಡೇಕೋಟೆ ಮಳೇಲು ೨೪೪. ಗೂನಾರು-ಗೋನುರಾರು ೨೪೫. ಗುಂಡೆತ್ತಿನವರು ೨೪೬. ಗುಂಭ್ಯಾನವರು ೨೪೭. ಗುಜ್ಜುಗ್ಲರು ೨೪೮. ಗಂಟೇನವರು. ೨೪೯. ಗಂಡುಗೊಳೇಲರು ೨೫೦. ಗಣೇರು ೨೫೧. ಗೆಜ್ಜೇಡರು. ೨೫೨. ಗೊರಲೇರು-ಗೊರಲಾರ,ಗೊರ್ಲಾರ, ಗೋರ್ಲರು. ೨೫೩. ಗೊಡಗುದಾಸರು ೨೫೪. ಗೌಂಪೋರು ೨೫೫. ಗಂಗಾವರಮು ೨೫೬. ಘೋಡೇನವರು.

(ಹೆಚ್) ೨೫೭. ಹಬನರು ೨೫೮. ಹೆಗ್ಗಡೆಯವರು ೨೫೯. ಹುರಳಿಯವರು ೨೬೦. ಹುಲ್ಲೇರು ೨೬೧. ಹೂವ ಮೂಡಲದವರು ೨೬೨. ಹೂವಿನವರು ೨೬೩. ಹೊನ್ನಪೂಲವರು ೨೬೪. ಹೊನ್ನ ಚುಂಚಲವರು ೨೬೫. ಹೊನ್ನ ಮೂಡಲವರು ೨೬೬. ಹೊನ್ನ ಚುಂಚಲವರು ೨೬೭. ಹೊನ್ನ ಮಿನಗಲವರು ೨೬೮. ಹೊನ್ನ ಪೋತುಗೋಳಿ ೨೬೯. ಹೊನ್ನ ಗೋಸಲವರು ೨೭೦. ಹೊನ್ನ ಬಂಡಲವರು ೨೭೧. ಹೊನ್ನೆಲ್ಲೆನವರು ೨೭೨. ಹೊನ್ನ ಬಂಡಾರದವರು ೨೭೩. ಹೊನ್ನ ಬಡಕಲವರು ೨೭೪. ಹೊನ್ನ ಗುಜ್ಜಲವರು ೨೭೫. ಹೊನ್ನ ಕೋರೇನವರು ೨೭೬. ಹೊನ್ನ ಕೂಡಲವರು ೨೭೭. ಹೊನ್ನ ಗೋವನವರು ೨೭೮. ಹೊನ್ನ ಪೋಡೆಣ್ಣವರು ೨೭೯. ಹೊನ್ನ ಪೋರಣವರು ೨೮೦. ಹಂದರದವರು ೨೮೧. ಹಿಂಡುಗುದುರಿ ೨೮೨. ಹೌಡಿತ್ರಿ ೨೮೩. ಹೊಟ್ಯಾಳ್ನರು.

(ಐ) ೨೮೪. ಇಮ್ಮಳ್ಳು-ಇಮ್ಮಳ್ಳು ೨೮೫. ಇವ್ಮಾಲವರು ೨೮೬. ಇಡತರಪರವರು ೨೮೭. ಈರಗಾರ ೨೮೮. ಈಶ್ವರ ನೋರು-ಪರಮೇಶ್ವರರು ೨೮೯. ಜಕಲರ ೨೯೦. ಜನುಕ್ತಿಯವರು ೨೯೪. ಜನ್ನೆನೋರು ೨೯೫. ಜನಮೂಲಾ ೨೯೬. ಜಾಡಲರ ೨೯೭. ಜಾಗನೋರು ೨೯೮. ಜಿನಗಲರ ೨೯೯. ಜೀರಬೋತುಲು ೩೦೦. ಜೆಂಕೇಲವರು ೩೦೧. ಜುಕ್ಕಲವರು ೩೦೨. ಜೆರ್ರ ಬೋತುಲು ೩೦೩. ಜೆನ್ನೇನ ಇಲ್ಲಿನವರು ೩೦೪. ಜಂಪಲವರು-ಜಂಪ್ಲರು ೩೦೫. ಜಂಗಲರು ೩೦೬. ಜಂತಲವರು ೩೦೭. ಜೋಡೇನವರು.

(ಕೆ) ೩೦೮. ಕಗ್ಗಲ್ಲರು ೩೦೯. ಕಳಿಸಲರು ೩೧೦. ಕಣಗಲವರು ೩೧೧. ಕರೇಸಲ್ಲರು. ೩೧೨. ಕಲಘದವರು. ೩೧೩. ಕಲ್ಲಲ್ಲೇರು. ೩೧೪. ಕಬ್ಬಿಲವರು-

ಕಬ್ಬೇಲರು–ಬ್ಬಲ್ಲರು. ೩೧೫. ಕಸ್ತೂರಿಯವರು. ೩೧೬. ಕಲ್ಯಾಣದವರು. ೩೧೭. ಕವಲದವರು–ಕವಲವರು. ೩೧೮. ಕವಲು ಮಳೇಲವರು ೩೧೯. ಕರಿನೋರು ೩೨೦. ಕದಿನವರು ೩೨೧. ಕರಪಾಡಿಕೆಯವರು ೩೨೨. ಕಾಚಿಕಡ್ಲಾ ೩೨೩. ಕಾಳಿದವರು. ೩೨೪. ಕಾಶೀಗೋತ್ರ ೩೨೫. ಕಾಲ್ಬು ಮಳೇಲೋರು ೩೨೬. ಕಾಟಮಲ್ಲಿನಾಯಕನೋರು ೩೨೭. ಕಿರಿಯ ಮುಚ್ಚಲವರು ೩೨೮. ಕುರ್ತಿರು ೩೨೯. ಕುರ್ಗಲೇರು ೩೩೦. ಕುಕ್ಕಡ್ಲಾ–ಕುಕ್ಕಲವರು. ೩೩೪. ಕುರ್ಲ್ಯಾನವರು–ಕುಲ್ಲೇರು–ಕುರುಲವರು. ೩೩೫. ಕೆಂಚಕ್ಕನವರು ೩೩೬. ಕೆಂಗಲವರು ಕೆಂಗಾರ, ಕೆಂಗೆಲರು. ೩೩೭. ಕೆಂದಕಲಾರು ೩೩೮. ಕೆಬ್ಬೋಳು ೩೩೯. ಕೆಮ್ಮಡಲವರು ೩೪೦. ಕೇಸಲವರು–ಕ್ಯಾಸಲೋರು–ಕ್ಯಾಸಲವರು–ಕ್ಯಾಸಯ್ಯರು. ೩೪೧. ಕುಂಡ್ರುಲು ೩೪೨. ಕುಂಟ್ರೇಲು ೩೪೨. ಕೇಚಿಗಾರು ೩೪೪. ಕುಂಡ್ಲೇರು ೩೪೫. ಕೆಂಜಲ್ಯಾರು–ಕೆಂಜಿಗಾರು ೩೪೬. ಕೊಳಾಯಿಲವರು ೩೪೭. ಕೊಡೆನೂರವರು ೩೪೮. ಕೋಣಿಗಲ್ ೩೪೯. ಕೋನಸಾಗರ ಪಡ್ಲೆವರು ೩೫೦. ಕೋಸಲವರು ೩೫೧. ಕೋರೆಣ್ಣವರು ೩೫೨. ಕಂದಿರ್ಲವರು ೩೫೩. ಕಂಪಲಿಯವರು ೩೫೪. ಖೋಡ್ಯಾನವರು ೩೫೫. ಕಾಂಗೆತ್ತಲರು.

(ಎಂ) ೫೬. ಮಡಿತೋಡು ೩೫೭. ಮದಲೋರು ೩೫೮. ಮಲ್ಲಾರರು ೩೫೯. ಮಳ್ಳೂರವರು ೩೬೦. ಮಲ್ಲನಾಯಕನವರು, ಮಲ್ಲನವರು, ಮಲ್ಲರು, ಮಲ್ಲೋರು. ೩೬೧. ಮಸ್ಕಲಾರ–ಮಸ್ಕಲಾ–ಮುಸ್ಕ್ಯಾನವರು–ಮಸ್ಕಿಲವರು. ೩೬೨. ಮನಿಗೆಲರ–ಮಣಿಗೆಲರ–ಮಣಿಗಲವರು ೩೬೩. ಮಳಗಲ್ಲರ ೩೬೪. ಮನಪೊಲ್ಲಾರ ೩೬೫. ಮನ್ನಲರ–ಮನ್ನಾಲಾರು ೩೬೬. ಮಲ್ಲಗ್ಲರ ೩೬೭. ಮಲ್ಲಗ್ಲರ ಕೋಣಿಗಲ್ ೩೬೮. ಮನೆಗಲಾ ೩೬೯. ಮರಲೇಯವರು ೩೭೦. ಮಲೆಯರು. ೩೭೧. ಮಾಸೇಲೋರು–ಮಾಸಲೋರು ೩೭೨. ಮಾಕನಡಕು ಮಳೇಲೋರು ೩೭೩. ಮೀಸಲ ನಾಯಕನೋರು ೩೭೪. ಮುಸ್ಯಾನವರು ೩೭೫. ಮುಮ್ಮಳ್ಲು ೩೭೬. ಮುಮ್ಮಡ್ಲು–ಮುಮ್ಮಡ್ಲುವರು ೩೭೭. ಮುತ್ತಲವರು ೩೭೮. ಮುತ್ತಲೋರು–ಮುತ್ತೇರು ೩೮೧. ಮುದಕಲವರು ೩೮೨. ಮುದಗಂಟವರು ೩೮೩. ಮೂರ್ತಿರ ಮುರ್ತೆರ ೩೮೪. ಮುದಿಗೊಂಡ್ಲಾರು ೩೮೫. ಮುತಶ್ಯರ ೩೮೬. ಮುಚ್ಚಲಾ ೩೮೭. ಮುದ್ದಾಲಾ ೩೮೮. ಮುಚಟ್ಲಾ ೩೮೯. ಮುಂಬಡ್ಲವರು. ೩೯೦. ಮುಂಗಲಾ, ಮುಂಗಲೆನ್ನವರು ೩೯೧. ಮುಂಡಾಸದಾಸರು ೩೯೨. ಮುದ್ಲಾಪುರ ಮಳೇಲು ೩೯೩. ಮುನ್ನುಲು ೩೯೪. ಮೇತಕರ ೩೯೫. ಮೇಟಕುಪ್ಪಿಯವರು ೩೯೬. ಮೇಸಲೋರು ೩೯೭. ಮೋಟ ಮಲ್ಲನವರು ೩೯೮. ಮೋಗಲ್ಲರು ೩೯೯. ಮೊನ್ನಲಾರು ೪೦೦. ಮಾಡ್ಲಾರು.

(ಎನ್) ೪೦೧. ನಲ್ಲುಲಾ ೪೦೨. ನವನಾ–ನವಣೆ–ನವಣೆಯವರು. ೪೦೩. ನಲಬೋತುಲು, ನಲಬೋತಲವರು, ನಲ್ಲಬೋಡುಲು. ೪೦೪. ನಲ್ಲೇತೀರ ೪೦೫. ನಗರದವರು. ೪೦೬. ನಲ್ಲಪಾಮುಡ್ಲು–ನಲ್ಲಪಾಮಡಲೋರು. ೪೦೭. ನಲ್ಲಪೋತವರು. ೪೦೮. ನಲಗೇತಲವರು–ನಲ್ಲಗೇತ್ಲರು ೪೦೯. ನಲ್ಲೇನಾರು ೪೧೦. ನಲ್ಲೇದವರ ಬುಟುಕಲು. ೪೧೧. ನಲಬಾಲರು ೪೧೨. ನಾಗಲಾರ ೪೧೩. ನಾಗಮುಲ್ಲರು. ೪೧೪. ನಾಕೇಲವರು ೪೧೫. ನಾಗಲ್ನವರು–ನಾಗಲವರು. ೪೧೬. ನಾಗರಸರು ೪೧೭. ನಾಮಾಲವರು ೪೧೮. ನಾದೆರ್ಲವರು ೪೧೯. ನಾಯಿ ಗುಜ್ಜಲವರು ೪೨೦. ನಾಲ ದೂರನವರು ೪೨೧. ನೀರಕಾಶಿ ೪೨೨. ನೀಲಮೋರು ೪೨೩. ನಿಚ್ಚಮಲೆಯರು. ೪೨೪. ನೆಲ್ಲಲ್ಲಾರು–ನೆಲ್ಲೇಲವರು–ನೆಲ್ಲೇದವರು. ೪೨೫. ನೆನುಲರು ೪೨೬. ನಲ್ಪಜ್ಜರು.

(ಒ) ೪೨೭. ಒಕ್ಲರು ೪೨೮. ಓತಲವರು ೪೨೯. ಔರಸ.

(ಪಿ) ೪೩೦. ಪರಮುಖರ ೪೩೧. ಪರಮುಖರ–ಪಡಲವರು–ಪಡುಲವರು. ೪೩೨. ಪರಮಿಕ್ಯೂಲ ೪೩೩. ಪಗಲವರು ೪೩೪. ಪಲ್ಲೆವರು ೪೩೫. ಪರಿಮುತ್ತಗಾರು ೪೩೬. ಪಟ್ಟಪಲ್ಲಾರ–ಪೊಟ್ಟ–ಪಲ್ಲನಾರು–ಪಟ್ಟಪೊಲ್ಲಲು– ಪಟ್ಟಪಲ್ಲುಲು–ಪಟ್ಟಪಲ್ಲಾರು. ೪೩೭. ಪಾಯೋರು ೪೩೮. ಪಾಲಚ್ಚಿಯವರು ೪೩೯. ಪಾಗಡಪೋತುಲು–ಪೆಗಡೆ ಪೋತುಲು ೪೪೦. ಪಾನುವುಲವರು ೪೪೧. ಪ್ಯಾಪಲೇರು–ಪ್ಯಾಲೇರು. ೪೪೨. ಪಾಲಬ್ಬುಗಾರು–ಪಾಲಬ್ಬಾರು ೪೪೩. ಪಿಕ್ಕಲವರು. ೪೪೪. ಪಿರಿಯ ಮಿನುಗಲವರು ೪೪೫. ಪಿಂಗಾರ ೪೪೬. ಪುಟ್ಟಲವರು ೪೪೭. ಪುಟ್ಟ–ಪೂಲವರು ೪೪೮. ಪುಟ್ಟ ಮೂಲವರು ೪೪೯. ಪುರಲೇಲವರು ೪೫೦. ಪುರ್ತೀರ ೪೫೧. ಪೂವಲು ಗಾಂಪಲು ೪೫೨. ಪೂಜಾರಪಳ್ಳಿ ಪಾಮುಡ್ಲು ೪೫೩. ಪೂವಮೂಲವರು. ೪೫೪. ಪೆದ್ದಮುಕ್ಕಲವರು ೪೫೫. ಪೆದ್ದಮರಿಗೆಲವರು. ೪೫೬. ಪೆದ್ದಮಾಕಿಲಾ ೪೫೭. ಪೆರುಮಕ್ಕಳೀರ ೪೫೮. ಪೆಗಡ ೪೫೯. ಪಿಂಗಲ ರಂಗಮಾನಾ ೪೬೦. ಪೋತುಗೋಳೇರ ೪೬. ಪೋತಲವರು–ಪೋತುಲು–ಪೋತಲರು ೪೬೨. ಪೋಲರ–ಪೋಲಾರು ೪೬೩. ಪಂದೇಲರು ೪೬೪. ಪೀತಲದವರು. ೪೬೫. ಪಂಜೆ ಅವರು.

(ಆರ್) ೪೬೬. ರಂಬೆಲವರು ೪೬೭. ರಂಗಾಲೇರು ೪೬೮. ರಾಯಿಗುಜಾಲವರು ೪೬೯. ರಾಯಬೋರು–ರಾಯಬಾರು ೪೭೦. ರಾಶಿಯವರು. ೪೭೧. ರೊಮ್ಮನವರು.

(ಎಸ್) ೪೭೨. ಸಣ್ಣಕ್ಕನವರು ೪೭೩. ಶಂಖಲವರು ೪೭೪. ಸಲ್ಲಬೋತುಲವರು ೪೭೫. ಸಡಕೇತುಲವರು ೪೭೬. ಸಮ್ಮಲವರು ೪೭೭. ಸಜಲವರು ೪೭೮. ಸಂತಾಲೇರು

೪೭೯. ಸಾತೇಲು–ಸಾತೇಲರು–ಸಾತಲವರು ೪೮೦. ಸಾಚ್ಚಿಕರು ೪೮೧. ಸಾಮಂತಲವರು ೪೮೨. ಸಾಕೆಲಾರು ೪೮೩. ಸಿಬ್ಬಿಲಾ ೪೮೪. ಸಿನಿಮಾಗಳರು ೪೮೫. ಸಿಲ್ಲಾವಳ್ಳು ೪೮೬. ಸಿದ್ದಪಲ್ಲಿ ಬುಟಕಲು ೪೮೭. ಸೀಲಯೋಳ್ಳು ೪೮೮. ಶೀಲದವರು ೪೮೯. ಸುರೇಪಾಕಲವರು ೪೯೦. ಸೂತಲವರು–ಸುತಾಲಾ ೪೯೧. ಸೂರ್‍ಯರು ೪೯೨. ಸೆಟ್ನಿದವರು ೪೯೩. ಸೊಟ್ಟೆಲ್ಲೇರು ೪೯೪. ಸೊಂಟೇಲವರು ೪೯೫. ಸೋಲು ಮಳೇಲು ೪೯೬. ಸಳ ಸರುವ್ಲರು ೪೯೭. ಸೊಳ್ಳೇರು.

(ಟಿ) ೪೯೮. ತರಮುಖರ ೪೯೯. ತಿರುಮುಖರ ೫೦೦. ತಳಗಲ್ಲರ್ ೫೦೧. ತಪುಲವರು ೫೦೨. ತಟ್ಟೆಲ್ಲರ್ ೫೦೩. ತಾಕಲವರು ೫೦೪. ತಾಯ್ತೋಣಿ ಪಡ್ಲೆವರು ೫೦೫. ತುರುಮನೇರ ೫೦೬. ತೂತು ಕುಳ್ಯಾನವರು ೫೦೭. ತೋಡೆನಾರ ೫೦೮. ತೋಪಲೋರು ೫೦೯. ತಂಪುಲೋರು ೫೧೦. ತುಂಬರೆಂಜರು.

(ಯು) ೫೧೧. ಉದ್ದಲೋರು ೫೧೨. ಉರಪಲದವರು.

(ವಿ) ೫೧೩. ವಲ್ಮೀಕರು ೫೧೪. ವಡೇಲೋರು ೫೧೫. ವೆನ್ನೇಲವರು ೫೧೬.ವಂಕಲವರು.

(ವೈ) ೫೧೭. ಎರ್ರಪೋತಲೋರು ೫೧೮. ಎಲುಬಿನವರು ೫೧೯. ಎದ್ದುಲು–ಎದ್ದುಲೋರು–ಎದ್ಲೋರು–ಎದ್ದಲವರು. ೫೨೦. ಎಕ್ಕೇಲೋರು ೫೨೧.ಎರ್ರಿಸ್ವಾಮಿ ೫೨೨. ಎಡೇಲರು ೫೨೩. ಎತ್ತಿನವರು ೫೨೪. ಯಮದಲೋರು–ಯಮದವರು–ಯಮಲೇರು. ೫೨೫. ಯಾಕಲವರು ೫೨೬. ಯಾರಲೋರು ೫೨೭. ಯಮಡಲವರು ೫೨೮. ಯರಾಟಲು–ಯರಗಾಟಲವರು ೫೨೯. ಯರಭೂತಲವರು. ೫೩೦. ಯರಬೋತರಲಾರು ೫೩೧. ಯರಪಾವುಡಲೋರು ೫೩೨. ಯರಗಂಟ್ನಾಯಕರು ೫೩೩. ಯರಗೋತ್ಲವರು–ಯರಗೋತೆ ೫೩೪. ಯರಮಂಚಿ ನಾಯಕನವರು ೫೩೫. ಯರಬೊಮ್ಮನವರು–ಯರಬೊಮ್ಮರು ೫೩೬. ಯಂಡಿಲವರು ೫೩೭. ಏಳುಕೊಂಡಲಾ–ಏಳು ಬೆಟ್ಟದವರು. ೫೩೮. ಯಾಲೋಡು ೫೩೯. ಬಿಲ್ಲಿನ ೫೪೦. ಹೊನ್ನಗೊರಲೇರು. ೫೪೧. ಬಂಗಾರು. ೫೪೨. ಪದ್ದಲವರು–ಪೆದ್ದಲವರು. ೫೪೩. ಪದ್ಮಕಾಂತರು.

(ಕೃಪೆ : ಕಿತ್ತೂರ ಆರ್.ಬಿ., ವಾಲ್ಮೀಕಿ ವಂಶಜರ ಸಂಕ್ಷಿಪ್ತ ಚರಿತ್ರೆ ವಂಶಗಳು ಗೋತ್ರಗಳು ಹಾಗೂ ಬೆಡಗುಗಳು, ಪ್ರಕಾಶಕರು, ಶಾಬಾದಿಮಠ ಬುಕ್ ಡಿಪೋ, ಗದಗ.)

